# ಪ್ರಕಾಶಕರ ನಾಲ್ಕು ಮಾತುಗಳು



ಎಷ್ಟೋ ವರ್ಷಗಳ ಹಿಂದೆಯೇ ಈ ನಮ್ಮ "**ಸತ್ಯವಿದ್ಯಾರಾಜ**" ಎಂಬ ಮಹಾ ಗ್ರಂಥವು ಪ್ರಕಟವಾಗಿ ಕನ್ನಡಿಗರ ಕೈಗೆ ಸೇರಬೇಕಾಗಿತ್ತು. ಆದರೆ ಕೆಲವು ಕಾರಣಗಳ ಮೂಲಕ ಪ್ರಕಟಿಸಲಿಲ್ಲ. ಕಾರಣ ಇಷ್ಟೆ, ಸಧ್ಯ ಕನ್ನಡಿಗರಲ್ಲಿ ಲೇಖಕರು ಮಿತಿಮೀರಿ ಬೆಳೆಯುತ್ತಿದ್ದಾರೆ. ಇದು ಸಂತೋಷದ ಸಂಗತಿಯೇನೋ ನಿಜ. ಆದರೆ ಕೆಲ ಮಹನೀಯರು ತಮ್ಮ ಜಾಣ್ಮೆಯನ್ನು ತೋರಿಸಲಿಕ್ಕೊ, ತಾವು ಒಬ್ಬ ಲೇಖಕರು ಎಂದು ತೋರಿಸಲಿಕ್ಕೊ, ಕೊನೆಗೆ ಹಣದಾಶೆಗೊ, ಅತಿ ಪ್ರಚಾರವುಳ್ಳ, ಹೆಚ್ಚಿಗೆ ಮಾರಾಟಾಗುವ ಸಣ್ಣ ದೊಡ್ಡ ಗ್ರಂಥಗಳನ್ನು ಅನುವಾದ ಮಾಡಿಯೋ, ಅದರಲ್ಲಿದ್ದ ವಿಷಯಗಳನ್ನು ಹಿಂದೆ ಮುಂದೆ ಮಾಡಿಯೋ, ಇಲ್ಲದಿದ್ದರೆ ಅದರಲ್ಲಿಯ ಕೆಲವು ಮುಖ್ಯ ವಿಷಯ ತಕ್ಕೊಂಡು, ಅದರಲ್ಲಿ ತಮ್ಮ ಕೆಲವು ವಿಚಾರವನ್ನು ಸೇರಿಸಿ, ಮೂಲ ಗ್ರಂಥಗಳನ್ನೇ ಹಾಳುಮಾಡುತ್ತಾರೆ. ತಮಗೆ ಬೇಕಾಗಿರುವದು ಒಂದು ಗಿಡದೊಳಗಿನ ಹಣ್ಣೋ, ಕಾಯೋ ಅಥವಾ ಹೂವೋ ಅಷ್ಟು ಸ್ವೀಕರಿಸಿದರೆ ಸಾಲದೇ, ಅದನ್ನು ಬಿಟ್ಟು ಗಿಡದ ಬೊಡ್ಡೆಯನ್ನೇ ಕಡಿದರೆ ಎಲ್ಲಾ ನಮಗೆ ಸೇರುಪವಲ್ಲ; ಎಂದು ಮೂಲ ಗ್ರಂಥಗಳನ್ನು ಕಡಿದು ಹಾಕುವ ನಾಯಿಕೊಡಿ ಲೇಖಕರ ಸಲುವಾಗಿಯೇ ನಮ್ಮ ಗ್ರಂಥಮಾಲೆಯು ಸಾವಿರಕ್ಕೂ ಮೇಲ್ಪಟ್ಟು ಗ್ರಂಥಗಳು ಪ್ರಕಟನೆ ಮಾಡದೆ ಬಿಟ್ಟಿದ್ದೇವೆ. "ನಿಮ್ಮ ಗ್ರಂಥಗಳು ಇಷ್ಟು ಅಮೌಲ್ಯವೇ, ಎಂದು ಯಾರಾದರು ಕೇಳಬಹುದು;" ಆದಕ್ಕೆ ಕಾರಣವು ಇಲ್ಲದಿಲ್ಲ. ಈ ಹಿಂದೆ ನಮ್ಮಿಂದಲೆ ಪ್ರಕಾಶಿಸಲ್ಪಟ್ಟ "ಶ್ರೀ ದೇವೀಮಹಾತ್ಮೆ" ಒಬ್ಬರಿಂದಲ್ಲ, ಇಬ್ಬರಿಂದ; ಅದರಲ್ಲಿಯ ವಿಷಯ ತಕ್ಕೊಂಡು ಹೊರಡಿಸಿದ್ದಾರೆ. ಪಾಠಕರಿಗೆ ನಾವು ಇಷ್ಟೇ ಹೇಳಬಯಸುತ್ತೇವೆ. "ಶ್ರೀಮಜ್ಜಗದಾನಂದ ಸ್ವಾಮಿ"ಗಳ ಚಿತ್ರ (ಫೋಟೊ) ಇದ್ದದ್ದೇ ಮೂಲ ಗ್ರಂಥವೆಂದು ತಿಳಿಯಕ್ಕದ್ದು.

ಈ " **ಸತ್ಯವಿದ್ಯಾರಾಜ** " ಎಂಬ ಗ್ರಂಥವನ್ನು ಭಾಗ-೧ ಎಂದು ನಿಮ್ಮ ಕೈಗೆ ಕೊಟ್ಟಿದ್ದೇವೆ. ಇನ್ನು ಭಾಗ-೨ ಶೀಘ್ರದಲ್ಲಿಯೇ ಇದಕ್ಕೂ ಹೆಚ್ಚಿನ ವಿಷಯಗಳನ್ನು ಸೇರಿಸಿ ಕೊಡುತ್ತೇವೆ. ಭಾಗ-೨ ಎರಡಕ್ಕೂ ಸಂಪೂರ್ಣ ಮುಗಿಯದಿದ್ದರೆ ಭಾಗ-೩ ಸಹಿತ ಹೊರಡಿಸಲಾಗುವದು. ಪ್ರಪಂಚದೊಳಗಿನ ಸಕಲ ವಿದ್ಯೆಗಳನ್ನು ಈ " **ಸತ್ಯವಿದ್ಯಾರಾಜ** " ದಲ್ಲಿ ಕೊಡುತ್ತೇವೆ.

ಇನ್ನು ನಮ್ಮಿಂದಲೆ ಪ್ರಕಾಶಿಸಲ್ಪಡುವ ಅತಿ ಅಮೌಲ್ಯವಾದ ಮಹಾ ಗ್ರಂಥವು " ಶ್ರೀ ಜಗಜ್ಜ್ಯೋತಿ ಬಸವೇಶ್ವರ ವಚನ " ಟೀಕಾ ಸಹಿತವಾಗಿ ಗ್ರಂಥವನ್ನು ಅತಿ ಶೀಘ್ರದಲ್ಲಿಯೇ ಪ್ರಕಟಿಸುವದಾಗಿ ತಿಳಿಸ ಬಯಸುತ್ತೇವೆ.

ಕೊನೆಯದಾಗಿ ನನ್ನ ಪರಮ ಮಿತ್ರವರ್ಯರಾದ ಶ್ರೀ. ಎಂ. ಜೀವನ ಇವರು ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಕೊಟ್ಟಿದ್ದಕ್ಕಾಗಿ ಅವರಿಗೆ ನಾವು ಋಣಿಯಾಗಿದ್ದೇವೆ. ಅತ್ಯಲ್ಪಕಾಲದಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟ ಶ್ರೀ. ಹೊಂಬಾಳಿ ಹನುಮಣ್ಣನವರನ್ನು ಸ್ಮರಿಸದೆ ಇರಲಾರೆವು.

**"ದಯಾನಂದ ಮಂದಿರ"**
೧೪—೧—೧೯೫೪

ಪ್ರಕಾಶಕರು:
**ಸದಾನಂದ ಎಸ್. ಸಾಲಿಮಠ**



# ಮುನ್ನುಡಿ

ಶ್ರೀ ರೆಂಟು ದಶಕಗಳ ಹಿಂದೆಯೇ ಬರೆದಿಟ್ಟ, ಪಿತಾಮಹರ ಹಸ್ತಪ್ರತಿ "ಸತ್ಯವಿದ್ಯಾರಾಜ"ವನ್ನು ಶ್ರೀ. ಸದಾನಂದ ಎಸ್. ಸಾಲಿಮಠರವರು ನೂತನ ವರುಷದ ನೂತನ ಕಾಣಿಕೆಯಾಗಿ ಕನ್ನಡಿಗರಿಗೆ ನೀಡಿದ್ದಾರೆ. ತಮ್ಮ ಪಿತಾಮಹರ ಇಂತಹ ಅಪೂರ್ವ ಗ್ರಂಥಕ್ಕೆ ಒಂದು ಮುನ್ನುಡಿಯನ್ನು ಬರೆಯಲು ನನ್ನನ್ನು ಕೇಳಿದಾಗ ನನಗೊಳ್ಳೇ ಆಶ್ಚರ್ಯವಾಯಿತು.

ಪುಸ್ತಕಕ್ಕೆ ಮುನ್ನುಡಿಯೆಂದರೆ "ಮೂಗಿಗೆ ಮೂಗುತಿ ಇದ್ದಂತೆ" ಎಂಬ ಮಾತು ನಿಜ. ಸಂಪಿಗೆ ಹೂವಿನಂತಹ ಸೀಳವಾದ ನಾಶಿಕಕ್ಕೆ ಮೂಗುತಿಯ ಅವಶ್ಯಕತೆ ಇಲ್ಲವೆಂದೇ ನನ್ನ ಭಾವನೆ. ಅದರಂತೆ "ಸತ್ಯ ವಿದ್ಯಾರಾಜ"ದಂತಹ ಉತ್ಕೃಷ್ಟ ಗ್ರಂಥಕ್ಕೆ ಮುನ್ನುಡಿಯ ಅವಶ್ಯಕತೆ ಯಿದೆಯೇ? ಎಂದೊಮ್ಮೆ ವಿಚಾರ ಮಾಡಿದೆ. ಒಂದು ವೇಳೆ ಮುನ್ನುಡಿಯ ಅವಶ್ಯಕತೆಯಿದ್ದರೂ ಸಹ ಇಂತಹ ಗ್ರಂಥಕ್ಕೆ ಮುನ್ನುಡಿಯನ್ನು ನಾನು ಬರೆಯ ಬಲ್ಲೆನೇ? ಎಂಬಿವೇ ಗೊಂದಲದಲ್ಲಿ ನಾನಿರುವಾಗ, ನನ್ನ ಮನ-ದಿಂಗಿತವನ್ನು ಅರಿತುಕೊಂಡ ಗೆಳೆಯ ಸದಾನಂದರು, "ಅದೇನೇ ಇರಲಿ, ನಿಮ್ಮ ಮುನ್ನುಡಿ ಬೇಕೇ ಬೇಕು" ಎಂದರು. ಅದು ಅವರ ದೊಡ್ಡತನ; ನನ್ನ ಮೇಲಿರಿಸಿದ ಅಭಿಮಾನ

ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯಲು ನನ್ನನ್ನು ಪ್ರೇರೇಪಿಸಿದ್ದು, ಸದಾನಂದರ ಅಭಿಮಾನದ ಜೊತೆಗೆ, ಈ ಗ್ರಂಥದೊಳಗಿನ ವಿಷಯ ವೈವಿಧ್ಯತೆಗಳೂ ಕಾರಣವೆಂದರೆ ಉತ್ಪ್ರೇಕ್ಷೆಯಲ್ಲ.

"ಅರೇಬಿಯನ್ ನಾಯಿಟ್ಸ" ಎಂಬ ಕಾದಂಬರಿಯಲ್ಲಿ ಒಂದು ಜಾದೂ ದೀಪದ ಕತೆ ಬರುತ್ತದೆ. ಆ ದೀಪವನ್ನು ಕೈಯಲ್ಲಿ ಹಿಡಿದುಕೊಂಡು "ದೀಪವೇ! ಇಂಥದು ಬೇಕು?" ಎಂದೊಡನೆ, ಬಯಸಿದ ವಸ್ತುವು ಎದುರಿಗೆ ಬಂದು ಬಿಡುತ್ತಿತ್ತಂತೆ. ಇದು ಕಥೆಯಲ್ಲಿ ಓದಿದ ಮಾತು; ಕಾದಂಬರಿಕಾರನ ಕಾಲ್ಪನಿಕ ಸೃಷ್ಟಿಯೊಳಗಿನ ಮಾತು; ವಾಸ್ತವತೆಗೆ ಸಾವಿರಾರು ಗಾವುದ ದೂರದ ಮಾತು. ಆದರೆ.......

ಇಂದು; ಈ ಇಪ್ಪತ್ತನೇ ಶತಮಾನದಲ್ಲಿ; ಅಸ್ತಿಕ-ನಾಸ್ತಿಕಗಳ ತಮೂಲ ಘರ್ಷಣೆ ನಡೆದಿರುವ ಇಂತಹ ಸಂದಿಗ್ಧ ಸಮಯದಲ್ಲಿ ಈ "ಸತ್ಯವಿದ್ಯಾರಾಜ" ಗ್ರಂಥವು "ಬಯಸಿದ್ದನ್ನು ನೀಡಬಲ್ಲುದು" ಎಂದು ಧಾರಾಳವಾಗಿ ಹೇಳಬಲ್ಲೆ.

ಜಾದೂ ದೀಪವನ್ನು ಕೈಗೆತ್ತಿಕೊಂಡು ಇಂಥದು ಬೇಕೆಂದೊಡನೆ ಸಿದ್ಧವಾಗಿ-ರುವಂತೆ, ಈ ಗ್ರಂಥವನ್ನು ಕೈಲಿ ಹಿಡಿದು ಕೊಂಡು "ನನಗಿಂತಹ ವಿಷಯ ಬೇಕು!" ಎಂದು ನಿರ್ಧರಿಸಿ ಓದುಗರು "ವಿಷಯಾನುಕ್ರಮಣಿಕೆ"ಯ ಮೇಲೆ ದೃಷ್ಟಿ ಬೀರಿದರೆ ನಿಶ್ಚಯಕ್ಕೂ ಅವರು ಬಯಸಿದ ವಿಷಯ ಸಿಕ್ಕೇ ತೀರುವದೆಂದು ನನಗೆ ಬಲವಾದ ನಂಬುಗೆ ಇದೆ.

ಈ ಗ್ರಂಥದಲ್ಲಿ, ಗುರುವಿನ ಫಲಗಳು, ಹುಣ್ಣಿಮೆಯ ಫಲಗಳು, ಅಮವಾಸ್ಯೆಯ ಫಲಗಳು, ಸ್ತ್ರೀ ಜಾತಕ, ಮೈನೆರೆದ ಫಲಗಳು, ಮನೆ ಕಟ್ಟುವದು, ಹೊಸಬಟ್ಟೆ ಧರಿಸುವದು, ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಮಾನವರ ಜೀವನಕ್ಕೆ ಏನೇನು ಬೇಕೋ, ಅವೆಲ್ಲ ಈ ಗ್ರಂಥದಲ್ಲಿವೆ. ದೀಪಾವಳಿಯ ಶುಭದಿನದಂದು ಶ್ರೀ ಮಹಾಲಕ್ಷ್ಮೀ ಪೂಜಾ, ಶ್ರೀ ಮಹಾ ಸರಸ್ವತೀ ಪೂಜಾ, ಮುಂತಾದವುಗಳ ವಿಧಾನಗಳೂ ಇದರಲ್ಲಿ ತೋರಿಸಿರುವ ರೆಂದ ಮೇಲೆ ಇದು ಕೇವಲ ಜಾದೂ ದೀಪವಷ್ಟೇ ಅಲ್ಲ; ಕಲ್ಪವೃಕ್ಷವೇ.

ಸರ್ವ ವಿಷಯಗಳ ಬಗೆಗೂ ಈ ಗ್ರಂಥದಲ್ಲಿ ವಿಶಾಲವಾದ ವಿವರಣೆ ಗಳಿವೆ. ಮೈನೆರೆತ ಬಗ್ಗೆಯೇ ಹೇಳಬೇಕೆಂದರೆ:– ಮೈನೆರೆತ ಬಗ್ಗೆ ಮುಹೂರ್ತವನ್ನು ಕೇಳಬಂದವನನ್ನು ನೋಡಿ, ಮೈನೆರೆತವಳು ಹೇಗೆ ಇದ್ದಾಳೆ? ಅವಳು ಎಂತಹ ಸೀರೆಯನ್ನುಟ್ಟಿದ್ದಳು? ಆ ಸಮಯದಲ್ಲಿ ಯಾರಾರು ಇದ್ದರು? ಎಂಬಿವೇ ವಿಷಯಗಳನ್ನು ಹೇಳಬಹುದು. ಹಲ್ಲಿಯು ಬಿದ್ದ ಫಲಗಳ ಬಗ್ಗೆಯೂ ಇದರಲ್ಲಿ ಉತ್ಕೃಷ್ಟ ವಿವರಣೆಯಿದೆ. ಸರ್ವರೀತಿಯಿಂದಲೂ ಈ ಗ್ರಂಥವು ಸಂಗ್ರಹಿಸಲು ಯೋಗ್ಯವಾಗಿದೆ.

ಇಂತಹ ಗ್ರಂಥಗಳು ಕನ್ನಡನಾಡಿನ ಮನೆ ಮನೆಗೂ ಬೇಕು. ಇದೊಂದೇ ಗ್ರಂಥವು "ಅಯ್ಯನವರ" ಮತ್ತು "ಆಚಾರ್ಯರ" ಕಾರ್ಯ ನೀಗಿಸಿಕೊಂಡು ಹೋಗಬಲ್ಲುದು. ಯಾವುದಾದರ ಬಗೆಗೂ ಯಾರನ್ನೂ ಅರಸಿಕೊಂಡು ಹೋಗಬೇಕಾಗಿಲ್ಲ. ಇಂತಹ ಅತ್ಯುತ್ತಮ ಗ್ರಂಥವನ್ನು ಕನ್ನಡ ಜನಕೋಟಿಗೆ ನೀಡಿದ ಸದಾನಂದರು ನಿಜಕ್ಕೂ ಅಭಿನಂದನಾರ್ಹರು; ಅವರ ಈ ಸಾಹಸಕ್ಕೆ ಕನ್ನಡಿಗರು ಬೆಂಬಲವನ್ನೀಯುವದೆಂದು ಆಶಿಸಿದ್ದೇನೆ.

ತರಂಗ ಪ್ರಕಟನಾಲಯ, ಗದಗ
೨೪—೧—೧೯೬೪

ಎಂ. ಜೀವನ.



**ಶ್ರೀಮಜ್ಜಗದಾನಂದ ಸ್ವಾಮಿಗಳು, ಹೊಸಹಳ್ಳಿ**

(ತಾಲೂಕ ಗದಗ)

ಜನನ ಶಕ:- ೧೭೯೧ ಮರಣ ಶಕ:- ೧೮೨೧

# ವಿಷಯಾನುಕ್ರಮಣಿಕೆ

### ಮನುಷ್ಯರಿಗೆ ಬೇನೆಬಂದ ನಕ್ಷತ್ರದಿಂದ ದೋಷ ಹೇಳುವ ಕ್ರಮ



### ೨೭ ನಕ್ಷತ್ರಂಗಳು



### ಸಂವತ್ಸರ ನೋಡುವ ಕ್ರಮ



### ಸಮರ್ಥರಾಗಿದ್ದವರು, ವ್ಯಸನಿಯಾಗಿದ್ದವರು ಜೂಜಿನ ದುರ್ಲಕ್ಷವಿದ್ದವರಿಗೆ ಉಪದೇಶ

## ನಕ್ಷತ್ರ ಫಲಗನ್ನಡಿ



## ಯೋಗೀಶ್ವರನ ಪ್ರಶ್ನೆ



## ದ್ವಾದಶರಾಶಿಯವರ ಮರಣಾಂತ ಪುರುಷ ಜಾತಕ

## ನಿಧಿ ನಿಕ್ಷೇಪಾದಿ ಅಂಜನ ಕ್ರಮವು

### ತಂತ್ರಗಳು



### ಮಂತ್ರಗಳು

| ನಂ. | ವಿಷಯಗಳು | ಪುಟ |
|---|---|---|

## ಮಹೇಂದ್ರಜಾಲ



## ಸ್ವಪ್ನಗಳು



## ಹಲ್ಲಿಯ ಫಲ



೧ ನೇ ಭಾಗ ಸತ್ಯವಿದ್ಯಾರಾಜ

ವಿಷಯಾನುಕ್ರಮಣಿಕೆ ಸಮಾಪ್ತ.



॥ ಶ್ರೀ ಶಿವಶಕ್ತ್ಯೈ ನಮಃ ॥

॥ ಶ್ರೀಮಜ್ಜಗದಾನಂದಸ್ವಾಮಿ ಪ್ರಸನ್ನ ॥

ಈ ಲೋಕದ ಕಾಮಧೇನು-ಕಲ್ಪವೃಕ್ಷ ಎಂಬ
ಪ್ರತಕ್ಷ ಫಲ.

# ★ ಸತ್ಯವಿದ್ಯಾರಾಜ ★



## ಗುರುವಿನ ಫಲ

### ಮೇಷರಾಶಿಯಲ್ಲಿ ಗುರುಬರಲು

ಕುರಿಯನೇರಲು ಗುರುವು ಧರಿಗೆಹೆಮ್ಮಳಿಯುಕ್ಕು ಅರಿಯುಮೇಲಾದರು ಬೆಳದಾರು ಬೆಳಗು ಬಿರಿಮಳಿ ಸುರಿಯಲು ಕುರಿವಂದುವುಳಿಯುವು ಅರಿಯುರಿ ಗುರುಚಾರದ ಮಹಿಮೆಯನು.

### ವೃಷಭರಾಶಿಯಲ್ಲಿ ಗುರುಬರಲು

ಪಶುಗಳಿಗೆ ಸುಖಮುಕ್ಕು ಹಸುಮಕ್ಕಳು ನಾಡೊಳು ವೃಷ್ಟಿಸಮುಕ್ಕು ಪ್ರಜೆಗೆ ಸಂತೋಷವಕ್ಕು ಕಷ್ಟದ್ರುತಿಗಳಿಗೆ.

### ಮಿಥುನರಾಶಿಯಲ್ಲಿ ಗುರುಬರಲು

ಸಂತೋಷಮುಕ್ಕು ಕಷ್ಟದ್ಯುತಿಗಳಿಗೆ ಸಂತೋಷದಲ್ಲಿಷ್ಟ ವಿಪ್ರರಿಗೆ ಚಿಂತ್ರೈಸಿ ಮುಗಿಲು ನೋಡುವರು ಹಂಡೆಗೌಳನ ನೃಪಗೆಂತು ಕುಂದಪೆ ಸೂರಮಂತಾತಾ.

## ಕರ್ಕಟರಾಶಿಯಲ್ಲಿ ಗುರುಬರಲು

ಫಲಪಿಕೆೋಳ್ಳಂಗಳೆ ಯಸವ ಕಳ್ಳರು ತಾವು ಮುನ್ನ ಲ್ಲಿಲ್ಲೋ ವಸಗಿಯ ಹರಗಳು ದೇಶದೇಶಲಾಲವನದುವಳಿಯರಾಗಿ ಪ್ರಜೆಗಳೆಲ್ಲರು.

## ಸಿಂಹರಾಶಿಯಲ್ಲಿ ಗುರುಬರಲು

ಪಶದಿಕ್ಕೆಲ್ಲರು ಕೊಂದುಕೊಂದುರಿ ನೋಸುರವರು ವಸನಗುರುಮು– ಸಗುಂ ಮುಂದೆ ಬಿಳಿಜೋಳದ ಹವುಂಟು ಕಾರಧಾನ್ಯವಿಲ್ಲಾ.

## ಕನ್ಯಾರಾಶಿಯಲ್ಲಿ ಗುರುಬರಲು

ಧನ್ಯರಪ್ಪರು ದ್ವಿಜರು ಚಿನ್ನವಿಕ್ಕಿವೆ ಹರಿವಾಳ್ಪರು ಮುಂನಿನ ಕಾಲ ದಂತೆ ಲೇಸಿಲ್ಲ ಪಿರಿದಿಲ್ಲ ಹೊನ್ನಿಕ್ಕಿ ಧಾನ್ಯವ ಕೊಂಬುವರಿಲ್ಲಾ.

## ತುರಾಶಿಯಲ್ಲಿ ಗುರುಬರಲು

ಪರಿದುಹೆಮ್ಮಳಿಯಕ್ಕು ಅರಿಯಮೇಲಾದರು ಬೆಳಗುಧಾನ್ಯವರಾಜ್ಯವಂ ಪೋಲ್ವಕಾಲಮುಕ್ಕು.

## ವೃಶ್ಚಿಕರಾಶಿಯಲ್ಲಿ ಗುರುಬಲು

ಕಾಳಗವಪಿರಿದಕ್ಕು ಹಾಳಕ್ಕು ನಾಡೊಳು ವುಬ್ಬಸವುಕ್ಕು ಅರ್ಧಭಾಗ ನಾಶನಮುಕ್ಕು ಜೋಳದಬೆಳೆ ಅಲ್ಪು ಹೇಳಿದರೆ ಕಂಡಲಮುಂಡಲಹೇಳುವದು.

## ಧನುರಾಶಿಯಲ್ಲಿ ಗುರುಬರಲು

ತಲಯುಪೀರಿದಕ್ಕು ಹುಲ್ಲೊಳಗಾದರು ಬೆಳಗುಧಾನ್ಯ ಯಳ್ಳು, ಹತ್ತಿ, ಪುಷ್ಟು ಅಲ್ಲಿಗಲ್ಲಿಗೆ ಕುಂದು ಮಲ್ಲಮಲ್ಲರಿಗೆ ಕಾಳಗವಕ್ಕು.

## ಮುಕರರಾಶಿಯಲ್ಲಿ ಗುರುಬರಲು

ದುಂದುಭಿಗಾಲಯೆಂಬುವದು ನರಿಯರೆ ವಂದೊಂದು ಸರವಳಿಯಕ್ಕು ಕುಂದುದಂಬರತಕ್ಕು ಬಂದಿಗಿಯೊಳು ಜೋಳಬೆಳದೀತು.

## ಕುಂಭರಾಶಿಯಲ್ಲಿ ಗುರುಬರಲು

ತುಂಬ್ಯಾವು ಕೆರಿಬಾಂವಿ ಬೆಂಬಳಿಲೆಕ್ಕು ಅಸುರಾಗದಿಂದ ಅಂಬುವಿನ ಮಕ್ಕಳು ಯಿಂಬಿನಲ್ಲಿ ಲೋಹಿತರು ಜೆಂಬೂದ್ವೀಪಕ್ಕು ಸುಭಿಕ್ಷಮಕ್ಕು.

## ಮೀನರಾಶಿಯಲ್ಲಿ ಗುರುಬರಲು

ಸಮುದ್ಯವಳಿಬೆಳಗು ಧಾನ್ಯವನುಂಬರು ಭಿನ್ನವಾಗಿಪ್ಪರು ಅನ್ಯಾ ಘನ ವಪ್ಪುದು ನರಿಯರೆ ಗುರುಚಾರಮಹಿಮೆಯನು.

---

# ಶುಕ್ರನ ಫಲ

ಶುಕ್ರನು ಆರುಮಾರ್ಗದಲ್ಲಿದ್ದರೆ ಆದರ ಫಲ- ಭರಣಿ, ಕೃತ್ತಿಕಾ, ರೋಹಿಣಿ, ಮೃಗಶಿರ ಈ ನಾಲ್ಕರಲ್ಲಿದ್ದರೆ ಶುಕ್ರ ನಡಿಯುತ್ತಿರಲು ಅಥವಾ ಅಸ್ತವಾಗಲು ಅಥವಾ ವುದಯವಾಗಲು ದನಕರುವಿಗೆ ಭಯವಾಗಿ ಸಾವಕ್ಕುಂ ದೊಡ್ಡದೊಡ್ಡಮಳೆಯಾಗಿಬೆಳಸಕ್ಕುಂ ಬೆಳವವಿಅಗಮಕ್ಕುಂ ಸುಭಿಕ್ಷಮಕ್ಕುಂ.

ಆರಿದ್ರಮೊದಲಾಗಿ ಯೇಳು ನಕ್ಷತ್ರದಲ್ಲಿ ಶುಕ್ರ ನಡಿಯಲು ಅಥವಾ ಅಸ್ತವಾಗಲು ಅಥವಾ ಉದಯವಾಗಲು ಆದರ ಫಲವು- ನವಣಿ, ನೆಲ್ಲು, ಜೋಳ, ಯಳ್ಳು ಬೆಳೆವವು ಮಳಿಗಾಲ ಬಹಳಮಕ್ಕುಂ ಮೂಳದಅಮವಾಸಿಯ ಮಾಡಿ ಯರೆಹೊಲದೊಳು ಹರಗೋಲುಸಿಕ್ಕುವಂತ ಮಳಿಯಾಹದು, ಬ್ರಾಹ್ಮಣರ ಕುಲಕ್ಕೆ ಲೇಸು ತಪ್ಪದು.

ಮಘಮೊದಲಾಗಿ ಐದುನಕ್ಷತ್ರದೊಳು ಶುಕ್ರನಡಿಯುತ್ತಿರಲು ಅಥವಾ ಅಸ್ತವಾಗಲು ಜಗಕ್ಕೆ ಮಹಾಬಾಧಿಯಕ್ಕುಂ ಧಾನ್ಯಕುಂದಗಂ ದನ ಕುರಿ ಗಳು ಮರಣವಕ್ಕುಂ ಅರಸುಗಳ ಕಳಿಕೆಡುವವು, ಮಳೆಬಾರದೆ ಚಿಂತಿಸುವರು ಈ ಐದು ನಕ್ಷತ್ರದಲ್ಲಿ, ಶುಕ್ರ ಪಶ್ಚಿಮದಲ್ಲಿ ಇದ್ದರೆ ಮಳೆ ಬಾರದೆ ಪೀಡಿಸು ವರು ತಪ್ಪದು.

ಸ್ವಾತಿ, ವಿಶಾಖಾ, ಅನುರಾಧಾ ಈ ಮೂರರೊಳು ಶುಕ್ರ ನಡೆಯುತ್ತಿರಲು ಅಥವಾ ಅಸ್ತವಾಗಲು ಅಥವಾ ಉದಯವಾಗಲು ಭೂಮಿಯಲ್ಲಿ ಎಲ್ಲಾ ಇದ್ದದ್ದು ಅಷ್ಟಕಷ್ಟ ಬಿಡುವದು, ಮಳೆಮೇಘವಾಹದು ಬೆಳೆ ಮಹಾ ವಿಶ್ವಾಸವಾದವ ಅರಸುಗಳು ತಮ್ಮೊಳಗೆ ತಾವೆ ಕಾಳಗದಿಂದ ಮಡಿವರು.

ಜ್ಯೇಷ್ಠ, ಮೂಲ, ಪೂರ್ವಾಷಾಢ, ಉತ್ರಾಷಾಢ, ಶ್ರವಣ ಈ ಐದು ನಕ್ಷತ್ರದಲ್ಲಿ ಶುಕ್ರ ನಡಿಯುತ್ತಿರಲು ಅಥವಾ ಅಸ್ತವಾಗಲು ಅಥವಾ ಉದಯವಾಗಲು ಮಳೆಗಾಲವಿಲ್ಲವೆನಿಸುವದು. ಪಶುಗಳು ನಾಶವಾದವು ಅರಸುಗಳು ಕಾಡುವರು ಧಾನ್ಯಪ್ರಿಯವು ಧರ್ಮಂಗಳಲ್ಲವು ಭೂಮಿಗೆ ಅರಿಷ್ಟವು.

ಧನಿಷ್ಠ, ಶತತಾರಾ, ಪೂರ್ವಾಭಾದ್ರ, ಉತ್ರಾಭಾದ್ರಪದ, ರೇವತಿ. ಅಶ್ವಿನಿ ಈ ಆರರೊಳು ಶುಕ್ರ ನಡಿಯುತ್ತಿರಲು ಅಥವಾ ಅಸ್ತವಾಗಲು ಅಥವಾ ಉದಯವಾಗಲು ಮಳೆಗಾಲ ಬಹಳವಾಹದು ಬೆಳಸು ಮಧ್ಯಮವು ಕಳ್ಳರ ಹಾವಳಿ ಬಹಳವಕ್ಕು ತಪ್ಪದು.

ಗುರು (ಬ್ರಹಸ್ಪತಿ) ವಂದು ವರುಷವೊಳು ವಂದೇರಾಶಿಯಲ್ಲಿದ್ದರೆ ಮಹಾ ವಳಿತು, ಅತಿಚರವಾಗಿ ಯರಡು ರಾಶಿಗೆ ಬಂದರೆ ಮಧ್ಯಮಾ, ಇತ್ತಲಾಗಿ ಮೂರನೇ ರಾಶಿಯ ಮೆಟ್ಟಿದರೆ ಮಹದ್ಭೂತ ಭೂಮಿಗೆ ಮಹಾ ಕಷ್ಟ, ರಾಜಿಕ ದೈವಕವಾಗಿ ರಾಜ್ಯ ಕೆಡುವದು

---

# ಶನಿಯ ಫಲ

## ಮೇಷರಾಶಿಯಲ್ಲಿ ಶನಿಬರಲು

ಚಕ್ರಕೋಟೆನಾಡು, ಕಾಶಿಯನಾಡು, ತದಡಿಯನಾಡು, ಕೆಡಗಂ ಚೋಳಾ ಹೊನ್ನಿಗೆ ನಾಗಂಡಮುಕ್ಕುಂ ಜೀವರಾಶಿಯುಂ ಬಡಗಲು ಬೆಳಗಂ.

## ವೃಷಭರಾಶಿಯಲ್ಲಿ ಶನಿಬರಲು

ಕನ್ನಡನಾಡು ಚಿತ್ರಪರಿಯಾಂತ ಕೆಡಗಂ ಮಾನ್ಯಯರ ಕೆಡಗಂ ಮನಯಂಬಿತೋರಿಯಾರಡಿಯಲು ದುಮ್ಮಿಕೆ ಜೋಳಾ ಹತ್ತಿ ಬೆಳೆಯಕ್ಕುಂ ಬೆಳವಲನಾಡು ಕೆಡಗಂ.

## ಮಿಥುನರಾಶಿಯಲ್ಲಿ ಶನಿಬರಲು

ಕಾಳಿಂಗದೇಶದ ಬ್ಯಾಡರಿಗೆ ಸುಖಂ ಪರ್ವತ ತಟಾಕು ಕ್ಷಮುವಕ್ಕು ಗಂಗಾವಿರಿಯನಾಡು ಕೆಡಗಂ.

## ಕರ್ಕರಾಶಿಯಲ್ಲಿ ಶನಿಬರಲು

ಕಂಚಿಯುಂ ಬದರಿ ಈ ಗೋದಾವರಿ ತಡೆಯುಂ ಕೆಡಗಂ ವಂಗಿಯ ನಾಡು ಅರಸುಗಳಿಗೆ ಪಂದು ಕೇಡುಮುಕ್ಕುಂ

## ಸಿಂಹರಾಶಿಯಲ್ಲಿ ಶನಿಬರಲು

ಪೃಥ್ವಿ ಅರಸುಗಳಕಾದಿವ ವೈರವವುಂಟು ಗೋಸುದಿಡೆಯಳಿಜೋಳಾ ದಾಸಿಲ್ಲದೆ ಹಿಂದೆ ಲೇಸುಯನ್ನು ಬೇಳೆಕಾರಧಾನ್ಯವಿಲ್ಲಾ

## ಕನ್ಯಾರಾಶಿಯಲ್ಲಿ ಶನಿಬರಲು

ನನ್ಯಾವಪ್ಪರುದ್ವಿಜರು ಅನ್ನಪಸಿಕ್ಕುವರು ವಿವಹಮಾಳ್ಪರು ಮುನ್ನಿನ ಯಂದತ್ತ ಜೊನ್ನವಿಕ್ಕುವರೆಲ್ಲಾ ಹೊನ್ನಿಕ್ಕಿ ದಾನಕೊಡುವವರಿಲ್ಲಾ.

## ತುಲರಾಶಿಯಲ್ಲಿ ಶನಿಬರಲು

ಇಳಿಗೆ ಹೆಮ್ಮಳಿಯಕ್ಕುಂ ಸಿಲಯ ಮೇಲಾದರು ಬೆಳಗು ಧಾನ್ಯ ಮಲವ ಮಂಡಲಯರಾಜ್ಯ ಪೋಲ್ವಕಾಲವೆಂದ.

## ವೃಶ್ಚಿಕರಾಶಿಯಲ್ಲಿ ಶನಿಬರಲು

ಕಾಳಗವಪಿರಿದಕ್ಕುಂ ಹಾಳಕ್ಕುಂ ನಾಡೊಳಗೆ ಅರ್ಧಭಂಗ ಜೋಳದ ಬೆಳೆ ಅಲ್ಪ, ಕಾಲಕೆಟ್ಟೀತು ಜೇಷ್ಠತ್ರಯದಲ್ಲಿ.

## ಧನುರಾಶಿಯಲ್ಲಿ ಶನಿಬರಲು

ತಲ್ಲಣವುಪಿರಿದಕ್ಕುಂ ಕಲ್ಲೊಳು ಬಿತ್ತಿದರೆ ಬೆಳಗು, ಧಾನ್ಯ ಯಳ್ಳು, ಹತ್ತಿ, ಉಪ್ಪು ಅಲ್ಲಿಂದಲ್ಲಿ ಛಿದ್ರ ಮಲ್ಲಮಲ್ಲರಿಗೆ ಕಾಳಗವಕ್ಕುಂ ನೃಪರಿ ಗೆಲಿಯಮಕ್ಕುಂ

## ಮಕರರಾಶಿಯಲ್ಲಿ ಶನಿಬರಲು

ಮಕರವನು ದುಂದುಭಿಗಾಲವೆಂಬಡೆನರಿದು ಹಂದರ ಹಸಿಯಂತ ಕುಂದವೆ ಮಳಿಗಾಲ ಯೆಂದಿಗೆ ಜೋಳಾ ವುನ್ನತವಕ್ಕುಂ.

## ಕುಂಭರಾಶಿಯಲ್ಲಿ ಶನಿಬರಲು

ತುಂಬ್ಯಾವು ಕೆರೆ-ಭಾಂವಿ ಅಂಬುತ ಅರ್ವಥ್ವಾದರಿಯ ಮೇಲೀ ಅಂಬು-ಧಿಯ ಮೇಲೆ ಮರುತುಂಬಿ ಕುಂಬಿನಿ ಬೆಳೆದು ಯಿಂಬಾಗಿಹೇಳ್ವದು, ಮೇಲಿ ಹೆಚ್ಚು ಹೊಗೆ.

## ಮೀನರಾಶಿಯಲ್ಲಿ ಶನಿಬರಲು

ಚಿನ್ನ ಬಂದರೆ ಲೇಬಾ ವುನ್ನಿಸುವೆ ಮೊದಲಾಗಿ ಬೆಳವಿಧಾನ್ಯ ಬನ್ನ ಬಡಕನ ತ್ರಿಜಗೆ ಮನ್ನಿಣೆಯಿಂ ಪಿರಿದಿಲ್ಲವು, ಅನ್ನಗಾಲಯೆಂಬುದನರಿ-ಯದು.

---

# ಶನಿಯಿದ್ದ ನಕ್ಷತ್ರದ ಫಲ

**ಅಶ್ವಿನಿಯಲ್ಲಿ ಶನಿಯಿರಲು** ಶುಭಮಕ್ಕುಂ, ಧಾನ್ಯಂಗಳು ಫಲ-ಮಕ್ಕುಂ ದೀರ್ಘ ಫಲವಕ್ಕುಂ.

**ಭರಣಿಯಲ್ಲಿ ಶನಿಯಿರಲು** ಪ್ರಜಗಳಿಗೆ ಜ್ವರಗಳು ಮಹಾಪೀಡಾ-ಕಾರಕಮಕ್ಕುಂ.

**ಕೃತ್ತಿಕೆದಲ್ಲಿ ಶನಿಯಿರಲು** ಅರ್ಘಪೆಚ್ಚು, ಕಾರ್ತಿಕದಲ್ಲಿ ಕೊಳ್ಗು ಸುಗ್ಗಿಯಲ್ಲಿ ಅರ್ಗಕುಂದಗಂ, ನರ್ಮದಾ ನದಿಯ ಮೇಲೆ ಸೋಲೆಯಲ್ಲಿ ಫಲವಕ್ಕುಂ.

**ರೋಹಿಣಿಯಲ್ಲಿ ಶನಿಯಿರಲು** ಕಾರಮಳೆ ಯರಡುಪಾಲವಕ್ಕುಂ ಕಾರ್ತಿಕದೊಳು ಅರ್ಗಕುಂದಗಂ ಸುಗ್ಗಿಯಲ್ಲಿ ಅರ್ಗಮುಕ್ಕುಂ.

**ಮೃಗಶಿರದಲ್ಲಿ ಶನಿಯಿರಲು** ಬೆಳೆ ಸ್ವಲ್ಪಮುಕ್ಕುಂ, ಸುಗ್ಗಿಯಲ್ಲಿ ಅರ್ಗವಕ್ಕುಂ

**ಆರಿದ್ರಾದಲ್ಲಿ ಶನಿಯಿರಲು** ಹದಮಳೆ ಕೊಳ್ಗುಂ ಜೋಳ ಬೆಳಗುಂ ಭತ್ತದ ಸಂಗ್ರಹ ಯೆಯಿಗಂ.

**ಪುನರ್ವಸುವಿನಲ್ಲಿ ಶನಿಯಿರಲು** ಕಾರಫಲವಕ್ಕುಂ, ಕಡಿಯಲ್ಲಿ ಬೆಳೆಯದೆ ಅನ್ನ ಪಿರಿದಕ್ಕುಂ

**ಪುಷ್ಯದಲ್ಲಿ ಶನಿಯಿರಲು** ಆಷಾಢದಲ್ಲಿ ಬರನಕ್ಕುಂ ಅಲ್ಪಮಳೆಯಕ್ಕುಂ ಆ ವರುಷ ಕಂಡಮುಂಡಲನಕ್ಕುಂ ಧಾನ್ಯಮಂ ಬಚ್ಚಿಡುವದು, ಕಾರ್ತಿಕದಲ್ಲಿ ಅರ್ಗಮುಕ್ಕುಂ.

**ಆಶ್ಲೇಷದಲ್ಲಿ ಶನಿಯಿರಲು** ಎಲ್ಲ ಧಾನ್ಯಂಗಳು ಬೆಳಗಂ ಪ್ರಜಗಳಿಗೆ ಸಂತೋಷಮುಕ್ಕುಂ.

**ಮಘೆಯಲ್ಲಿ ಶನಿಯಿರಲು** ರಾಜಗಟ್ಟಣೆಯಿಂದ ಫಲವಕ್ಕುಂ ಅರ್ಗ ಕೆಡಗಂ.

**ಹುಬ್ಬಿಯಲ್ಲಿ ಶನಿಯಿರಲು** ಬೆಳಸಕ್ಕುಂ ಜೋಳಮುಂ ಮುಂದಗ್ಗೈದ ಯಿರಲು ಆ ವರುಷ ಧೂಮಕೇತು ಮೂಡಿಗಂ ಪಶುಗಳಿಗೆ ಫಲಮುಕ್ಕುಂ.

**ಉತ್ರಿಯಲ್ಲಿ ಶನಿಯಿರಲು** ಎಲ್ಲ ದೇಶಂಗಳು ಬೆಳಗಂ ಅರ್ಗಡಗಂ ಭತ್ತ ಸಂಗ್ರಹ ಗೈಯ್ಯುದು.

**ಹಸ್ತದಲ್ಲಿ ಶನಿಯಿರಲು** ಮಳೆಯಿಲ್ಲದೆ ಬರನಕ್ಕುಂ ಪಣವಿಂಗೆ ಬೆಳೆ ಮುಕ್ಕುಂ ಜೋಳಮುಕ್ಕುಂ ಕಡಿಯ ಬೆಳೆ ಆದಾವು ಅರ್ಗ ಕೆಡಗಂ.

**ಚಿತ್ತಿಯಲ್ಲಿ ಶನಿಯಿರಲು** ಮಳೆಯುಕ್ಕುಂ ಕಾರ, ಜೋಳ ಆದಾವು ಕಡೆಮಳಿಗಳಾದಾವು.

**ಸ್ವಾತಿಯಲ್ಲಿ ಶನಿಯಿರಲು** ಅರ್ಗಪೆಚ್ಚುಗಂ ಪ್ರಜಗೆ ಲೇಸಕ್ಕುಂ ವ್ಯವಹಾರ ಮಾಡುವವರಿಗೆ ಫಲವಕ್ಕುಂ

**ವಿಶಾಖಾದಲ್ಲಿ ಶನಿಯಿರಲು** ಕಾರ ಅಲ್ಪ ಕುಂದುಗಂ ಕಡಿಯಲ್ಲಿ ಬೆಳಿಯಾದಾವು

**ಅನುರಾಧದಲ್ಲಿ ಶನಿಯಿರಲು** ಚೈತ್ರಮಾಸ ಅರ್ಗಕುಂದಗಂ ದ್ವಿಪ ದಂತ ಮೂಡಗಂ ಮರುಗಮಕ್ಕುಂ

**ಜ್ಯೇಷ್ಠದಲ್ಲಿ ಶನಿಯಿರಲು** ಕಾರ ಬೆಳಗಂ ಕಡಿಯುಮಳಿ ಅಲ್ಪಮಕ್ಕುಂ.

**ಮೂಲದಲ್ಲಿ ಶನಿಯಿರಲು** ಬಿಸಲುಕಾದು ಹೋಳಿಯು ದಡದಲ್ಲಿ ಬೆಳಿಯುವದು, ಜ್ಯೇಷ್ಠಮಾಸದಲ್ಲಿ ಅರ್ಗವಾಗಿಹದು ಧಾನ್ಯ ಕುಂದುವದು

**ಪೂರ್ವಾಷಾಢದಲ್ಲಿ ಶನಿಯಿರಲು** ಮುಂಗಾರಿಗಳು ಕಡಿಯುಮಳೆಯುಕ್ಕುಂ ವೃಕ್ಷಂಗಳು, ತಾವರಿಗಳು ಕಡಿಯು ಮಳಿಗಾಲ ಬೆಳೆ ಸ್ವಲ್ಪ ಸರ್ವಕ್ಕುಂ ಬೆಳಸಿಗೆ ವುಬ್ಬಸಮಕ್ಕುಂ ಮಾಳವದೇಶ ಬೆಳದಾವು.

**ಉತ್ರಾಷಾಢದಲ್ಲಿ ಶನಿಯಿರಲು** ಭತ್ತಕ್ಕೆ ಕುಂದವಾಗಿ ಲಯುವಂ.

**ಶ್ರವಣದಲ್ಲಿ ಶನಿಯಿರಲು** ಪಿರಿದು ಮಳಿಗಾಲವಾಗಿ ಸರ್ವಧಾನ್ಯ ಬೆಳಗವಂ ಅರ್ಗಪೆಚ್ಚುಗಂ ಪಾಂಡವದೇಶಕ್ಕೆ ದುರ್ಭಿಕ್ಷಮಕ್ಕುಂ, ಶನಿ ತಿರುಗಿ ವಕ್ರಿಸಿದರೆ ಮೂರು ತಿಂಗಳ ಇರುವನು, ಮೂರು ತಿಂಗಳಿಗೆ ಬಿಡುವನು. ಮೂರು ತಿಂಗಳೊಳು ಮಾರಿಕೊಂಬುವನು, ಪಣವಿಂಗೆ ಹನ್ನೆರಡು ಬಳ್ಳವಾದರೆ ಮಣದರೆ ಹೊನ್ನಿಗೆ ಜೋಳ ಮಾರಿಕೊಂಬುವದು.

**ಧನಿಷ್ಠಾದಲ್ಲಿ ಶನಿಯಿರಲು** ಚೈತ್ರಮಾಸದೊಳು ಅಗ್ಗಮಕ್ಕುಂ ಧೂಮಕೇತು ಮೂಡಗಂ ಜೋಳವು ಸಂಗ್ರಹಗೈಯ್ಯುವದು, ಗೋದಾವರಿ ಮಂಡಲಗಳು ಮೂಡಲು ಟೆಂಕಲು ಕ್ಷಮದಿಂದ ಕೆಡಗಂ.

**ಶತತಾರದಲ್ಲಿ ಶನಿಯಿರಲು** ಧಾನ್ಯಂಗಳು ಬೆಳೆಗಂ ವರುಷವರುವಕ್ಕೆ ರಾಜಭೋಜನವಕ್ಕುಂ ಅಗಾಗ್ಗೆ ಹದಮಳಿಯಕ್ಕುಂ.

**ಪೂರ್ವಾಭಾದ್ರಪದದಲ್ಲಿ ಶನಿಯಿರಲು** ಧಾನ್ಯಂಗಳು ಬೆಳಗಂ, ಮಂದ ಮರುಷಕ್ಕ ಮರುಷಕ್ಕು ಕೆಡಗಂ.

**ಉತ್ತ್ರಾಭಾದ್ರಪದದಲ್ಲಿ ಶನಿಯಿರಲು** ಅರ್ಗ ಪಿರಿದಕ್ಕುಂ ಸರ್ವಧಾನ್ಯ ಬೆಳಗಂ ಸೋಟಕವ್ಯಾಧಿವಾಗಿ ಪ್ರಜಗೆ ಮಾರಿಯುಕ್ಕುಂ.

**ರೇವತಿಯಲ್ಲಿ ಶನಿಯಿರಲು** ಮುಂಗಾರಿ ಬೆಳಗಂ ಕಡಿಯಲ್ಲಿ ಮರುಷ ಪಿಲ್ಲದೆ ಫಲ ಕೆಡುವದು.



# ಹನ್ನೆರಡು ಅಮಾಸಿಯ ಫಲ



## ಯುಗಾದಿ ಅಮಾಸಿಯ ಫಲ

ಮಹಾನಕ್ಷತ್ರ ರೇವತಿ, ನಿತ್ಯನಕ್ಷತ್ರ ರೇವತಿ ಬಂದರೆ ಮುಂಗಾರಿ ಬೆಳಗಂ, ಮುಂಗಾರಿಯಾಗಿ ಸಕಲ ಧಾನ್ಯಂಗಳು ಬೆಳಗವಂ, ಪಶುಗಳಿಗೆ ಸುಖಮಕ್ಕುಂ, ಅರಸುಗಳಿಗೆ ಧರ್ಮಪುಟ್ಟುವದು, ಮನಷ್ಯರಿಗೆ ಸುಖಮಕ್ಕುಂ ಸಕಲ ಧಾನ್ಯಂಗಳು, ರಸವರ್ಗಂಗಳು ಅಗ್ಗಮಕ್ಕುಂ; ಅಡಕೆ, ಮೆಣಸು, ಅಲ್ಲಾ, ಅರಿಷಣ, ಮಾರುಗಂ; ಅಗಸಿ, ಕುಸಬಿ, ಹತ್ತಿ, ಹರಳು ಇವಕ್ಕೆ ಕೀಟಕಹೆಚ್ಚಿ ಅರಫಲವಕ್ಕುಂ; ಗೋದಿ, ಕಡ್ಲಿ ಮಲಸು ಮಧ್ಯಮಾ. ಮತ್ತೆ ಆ ಯುಗಾದಿ ಅಮಾಸಿದಿನ ಪೂರ್ವಾಭಾದ್ರಪದ, ಉತ್ತ್ರಾಭಾದ್ರಪದ, ಅಶ್ವಿನಿ ಹೀಗೆ ಮೂರು ನಕ್ಷತ್ರಗಳು ಬಂದರೆ, ಗ್ರಹಣವಾದರೆ ಮಳಿಗಳು ಮಧ್ಯಮು; ನಾನಾಫಲಗಳು ಮಧ್ಯಮು; ಉತ್ಪತ್ಯಂಗಳು ಪುಟ್ಟಗುಂ; ಪಶುಗಳು ಲಯಮಕ್ಕುಂ, ಶಿಶುಗಳಿಗೆ, ಸಮಸ್ತ ಮನುಷ್ಯರಿಗೆ, ಧಾನ್ಯಂಗಳು, ರಸ ವರ್ಗಂಗಳು ಬಚ್ಚಿಡಲು ಹೇಳಿದಂತೆ ಮಾರುಗಂ: ಜವಳಿ, ಕಂಬಳಿ, ಚರ್ಮಂಗಳು ಮಾರಗಂ; ಪಶುಗಳು ಲಯಮಕ್ಕುಂ ಅನಾದಮ ವ್ರತಗೆಟ್ಟು ನಡಿಗಂ, ಕೀಟಕ ಮೂಷಕ ಪಿರಿದಕ್ಕುಂ, ಚೋರ ಭಯಮುಂ, ದನಸಂಗಳು ಅತಿ ಸಂಬಾಳಿಸಿಕೊಳ್ಳುವದು.

# ಅಕ್ಷತ್ತದಿಗಿ ಅಮಾಸಿಯ ಫಲ

**ಅಕ್ಷತ್ತದಿಗಿ ಅಮಾಸಿ ದಿನ** ಮಹಾನಕ್ಷತ್ರ ಭರಣಿ, ನಿತ್ಯ ನಕ್ಷತ್ರ ಭರಣಿ ಬಂದರೆ ಸಮಸ್ತ ದೇಶಕ್ಕೆ ಮಳಿ-ಬೆಳಿಯಾಗಿ ಧಾನ್ಯಂಗಳು ರಸವರ್ಗ್ಗಂಗಳು ಅಗ್ಗಮಕ್ಕುಂ; ಪಶುಗಳು ಸೂಸ್ಸರಿಯಾಗಿ ಕರಿಗಂ ಮನುಷ್ಯರಿಗೆ ಅರಸುಗಳಿಗೆ ಸುಖಮಕ್ಕುಂ; ಜವಳಿ, ಕಂಬಳಿ, ಚರ್ಮಂಗಳು ನಾನಾವಿಧ ಛಿದ್ರವೆಗ್ಗಳ, ಪಂಚ ಲೋಹಂಗಳು ಮಾರಗಂ; ಆ ಅಮಾಸಿ ದಿನ ರೇವತಿ, ಭರಣಿ, ಕೃತ್ತಿಕಾ ಈ ಮೂರರೊಳ್ ಬಂದರೆ ಸೂರ್ಯಗ್ರಹಣವಾದರೆ ಸಮಸ್ತ ರಾಜ್ಯವೆಲ್ಲ ಕುಲಾಲಚಕ್ರದಂತೆ ತಿರುಗುವದು; ನೆತ್ತರ ಕಡಲಅರಿವದು, ಅರಸುಗಳು ಮಡಿಗಂ, ಮನುಷ್ಯರು ಪಶುಗಳು ಲಯಮಕ್ಕುಂ, ಧಾನ್ಯ ಬಚ್ಚಿಡುವದು ಹೊನ್ನುಂಟು ಭತ್ತವಿಲ್ಲವೆನಿಸುವದು, ದವಸ ಹೇಳಿದಂತೆ ಮಾರುವದು, ಆಯುಷ್ಯವು ಸ್ವಲ್ಪ, ಗೋದಿ, ಕಡ್ಲಿ, ಕುಸುಬಿ, ಅಗಸಿ, ಹತ್ತಿ, ಹರಳು ವೆನಿತು ಮಧ್ಯ ಫಲವು; ಬಿಳಿಜೋಳ ಮಾರು ಪುಟ್ಟಗಂ ತೃಣ ಬಚ್ಚಿಡುವದು, ಕುದುರೆ ಪಂಚ ಲೋಹಂಗಳು ಅಗ್ಗಮಕ್ಕುಂ.

# ಬಾದ್ರಿ ಅಮಾಸಿಯ ಫಲ

**ಬಾದ್ರಿ ಅಮವಾಸಿಯ ದಿನ** ಮಹಾನಕ್ಷತ್ರ ರೋಹಿಣಿ ನಿತ್ಯನಕ್ಷತ್ರ ರೋಹಿಣಿ ಬಂದರೆ ಮುಂಗಾರಿ ಮಧ್ಯಫಲವು ಹಿಂಗಾರಿಗಳು ಸೋಸಿಯ ಮಳಿಯಾಗಿ ಕಡಿಯ ಫಲವಕ್ಕುಂ ರಾಜ್ಯಕಂಗಳು ಪುಟ್ಟಗಂ ಸಕಲ ಮನುಷ್ಯರಿಗೆ ಚಿಂತಿ ಪಿರಿದಕ್ಕುಂ ಪಶುಗಳು ಕರಿಮುದ ಕೆಡಗಂ, ಶಿಶುಗಳು ರುಜಾಯಾಯಕ್ಕುಂ ಅಡಕಿ, ಅಲ್ಲಾ, ಅರಿಷಣ ಮಾರಗಂ ಧಾನ್ಯಂಗಳು ನಿಂದ ಮಾರಗಂ ಮತ್ತಂ ಅಮವಾಸಿದಿನ ಭರಣಿ, ಕೃತ್ತಿಕಾ, ಮೃಗಶಿರ ಇವರೊಳ್ ಸೂರ್ಯಗ್ರಹಣವಾದರೆ ಆ ವರುಷ ಸಕಲ ಧಾನ್ಯಂಗಳು, ಸಕಲ ದ್ರವ್ಯಂಗಳ ಸಂಬಾಳಿಕೊಳ್ಳುವದು, ಫಲಂಗಳು ಅಲ್ಲಿಗಲ್ಲಿ ಸೊಕ್ಕಂ ಪಂಚಲೋಹಂಗಳ ಗಡಛಿದ್ರವೆಂಗಳು ಜವಳಿ, ಕಂಬಳಿ, ಚರ್ಮಂಗಳು ಇನಿತು ಮಾರಪುಟ್ಟಗಂ ವೇದಗಳು ಪುಟ್ಟಗಂ ಪಶುಗಳು ಲಯುವಕ್ಕುಂ ಸಕಲ ಮೃಗಗಳು ಕುರಿ ಇವಕೆಲ್ಲ ಜಯವುಂಟು ಸಕಲ ಮರಂಗಳು ವಹಿಪರ್ನಂಗಳು.

# ಮಣ್ಣೆತ್ತಿನ ಅಮಾಸಿಯ ಫಲ

**ಮಣ್ಣೆತ್ತಿನ ಅನುವಾಸಿಯ ದಿನ** ಮಹಾನಕ್ಷತ್ರ ಆರಿದ್ರಾ ನಿತ್ಯ ನಕ್ಷತ್ರ ಆರಿದ್ರಾ ಬಂದರೆ ಸಕಲ ಮಳಿಯಾಗಿ ಮುಂಗಾರಿ ಫಲವಕ್ಕುಂ ಹಿಂಗಾರಿ ಫಲ ಗೋದಿ, ಕಡ್ಲಿ, ಅಗಸಿ, ಕುಸುಬಿ, ಹತ್ತಿ, ಹರಳು ಇನಿತು ಇಲಿಯಭಯ ಪಿರಿದಕ್ಕುಂ ಅದು ತಪ್ಪಿದರೆ ರಾಜಭಯದಿಂದ ಅರಫಲವಕ್ಕುಂ ಅಡಿಕೆ ಕೊಳ್ಳಿಯಾಭಯದಿಂದ ಅರಫಲವಕ್ಕುಂ ಮೇಣ, ಯಾಲಕ್ಕಿ, ಎಲೆ ರೋಗದಿಂದ ನಲಗಿ ನೆಲಕ್ಕೆ ಭುಮಂಡಲವಾಡಿ ಅರಫಲವಕ್ಕುಂ ಧಾನ್ಯಂಗಳು ಮಕ್ಕುಂ ಪಶುಗಳು ಸೂಸ್ಸರಿಯುಮಕ್ಕುಂ ಅರಸುಗಳು ಸಕಲ ಮನುಷ್ಯರಿಗೆ ಸುಖಮಕ್ಕುಂ ಮತ್ತೆ ಆ ಅಮಾಸಿಯ ದಿನ ರೋಹಿಣಿ, ಮೃಗಶಿರ, ಪುನರ್ವಸು ಈ ಮೂರರೊಳು ಸೂರ್ಯಗ್ರಹಣವಾದರೆ ಜೀವ ದನ ನಾಸ್ತಿ, ಫಲಂಗಳು ಕಂಡಲಮಂಡಲ ರಸವರ್ಗಂಗಳು ಜವಳಿ, ಕಂಬಳಿ, ಚರ್ಮಂಗಳು ಇವು ಮಾರಗಂ ಉತ್ಪತ್ಯ ಪುಟ್ಟಗಂ ಮಹಾರಾಜ್ಯಕ ಪುಟ್ಟುವದು ಚೋರಭಯ ಆಗಿ ಭಯ ಪಿರಿದಕ್ಕುಂ ಸಮಸ್ತ ಧಾನ್ಯ ಮಾರು ಪುಟ್ಟಗಂ ಅನಂತ ಹಿರಿಯರು ಗತಿತಪ್ಪಿ ನಡಿವರು ಮರಗಳು ಬಂಜಿಯಾಹವು ಜೋಳ ಅರಫಲ.

# ನಾಗರ ಅಮಾಸಿಯ ಫಲ

**ನಾಗರ ಅಮಾಸಿಯ ದಿನ** ಮಹಾನಕ್ಷತ್ರ ಪುಷ್ಯ ನಿತ್ಯನಕ್ಷತ್ರ ಪುಷ್ಯ ಬಂದರೆ ಮಳೆ ಸಮವೃದ್ಧಿಯಕ್ಕುಂ ಎಳ್ಳು ಹೆಸರು ಇನಿತು ಅಪಜಯುವಕ್ಕುಂ ಕೀಡಿ ಹೆಚ್ಚಿ ನಲಗಿ ಅರಫಲವಕ್ಕುಂ ಜೋಳ ನವಣೆ ಮಧ್ಯಮ ಫಲವಕ್ಕುಂ ಧಾನ್ಯಂಗಳು ಸಮದಾಗಿ ಮಾರಗಂ ರಸವರ್ಗಂಗಳು ಕುಂದಗಂ ಅಪಜಯ ವಕ್ಕುಂ ಪಶುಗಳಿಗೆ ಕರಿಗಂ ಮನುಷ್ಯರಿಗೆ ರುಜವಕ್ಕುಂ ಮತ್ತಂ ಆ ಅಮಾಸಿ ದಿನ ಆರಿದ್ರಾ, ಪುನರ್ವಸು, ಆಶ್ಲೇಷಾ ಈ ಮೂರು ಬಂದು ಸೂರ್ಯಗ್ರಹಣವಾದರೆ ಮಳಿಗಾಲ ಅಲ್ಪ ಜೋಳ ಕಾಡಿಗಿಯಕ್ಕುಂ ಅದು ತಪ್ಪಿದರೆ ಹರಿಹಾಡಾವು ನವಣೆ ಅರಫಲವಕ್ಕುಂ ಎಳ್ಳು, ಉದ್ದು, ಹೆಸರು, ಹತ್ತಿ, ಅರಳು ಇನಿತು ಫಲಂಗಳಕ್ಕುಂ ಗೋದಿ, ಕಡ್ಲಿ, ಕುಸುಬಿ, ಅಗಸಿ ಇವಕ್ಕೆ ರೋಗಮಕ್ಕುಂ ಹತ್ತಿ ಅರಳಿಗಳಿಗೆ ಇಲಿ ಪೆಚ್ಚಗಂ ಧಾನ್ಯ

ಮಾರಗಂ ಮಹಾ ರಾಜಕಂಗಳು ಪುಟ್ಟಗಂ ನೆತ್ತರ ಕಡಲಿ ಪರಿಗಂ ಚೋರ ಭಯಂಗಳು ಅಗ್ನಿಭಯಂಗಳು ಪಿರಿದಕ್ಕುಂ ಅಡಿಕೆ, ಮೆಣಸು, ಅರಿಷಣ. ಅಲ್ಲಾ, ಬಳ್ಳೊಳ್ಳಿ ಇನಿತು ಬೆಳಗಂ ಸಕಲ ಹಿರಿಯರು ನಾಗ ಸ್ತ್ರೀಯರು ಪ್ರತಗೆಟ್ಟು ನಡಿಗಂ

# ಬೆನಕನ ಅಮಾಸಿಯ ಫಲ

**ಬೆನಕನ ಅಮಾಸಿಯ ದಿನ** ಮಹಾನಕ್ಷತ್ರ ಮಘಿ ನಿತ್ಯನಕ್ಷತ್ರ ಮಘಿ ಬಂದರೆ ಹದನೆಂಟು ಧಾನ್ಯಂಗಳು ಬೆಳೆದು ಸುಭಿಕ್ಷಮಕ್ಕುಂ ಪಶುಗಳು ಕರಿಗಂ ಕಬ್ಬು ಕದಳಿ ಅಲ್ಪ ಫಲವಕ್ಕುಂ ಸಕಲ ಮಂಗಳ ನಿಂದು ಮಾರಗಂ ರಸವರ್ಗಂಗಳು ಫಲಮಕ್ಕುಂ ಧಾನ್ಯಂಗಳು ಅರ್ಘಮಕ್ಕುಂ ಮನುಷ್ಯರಿಗೆ ರುಜಯುಕ್ಕುಂ ಜವಳಿ, ಕಂಬಳಿ, ಪಂಚಲೋಹಂಗಳು ಮಾರಗಂ ಧಾನ್ಯಂಗಳು ನಿಂದು ಮಾರಗಂ ಮತ್ತೆ ಅಮಾಸಿ ದಿನ ಪುಷ್ಯ, ಆಶ್ಲೇಷಾ, ಹುಬ್ಬಿ ಈ ಮೂರರೊಳು ಬಂದು ಗ್ರಹಣವಾದರೆ ಮಹಾ ಉತ್ಪತ್ಯಂಗಳು ಪುಟ್ಟಗಂ ಅರಸುಗಳು, ಸಕಲ ಮನುಷ್ಯರು, ಶಿಶುಗಳು ಲಯಮಕ್ಕುಂ ಧಾನ್ಯಂಗಳು ಹೊನ್ನುಂಟು ಚಿತ್ತಲಿಲ್ಲ ಎನಿಸುವದು ಮಹಾ ರಾಜ್ಯಕ ಪುಟ್ಟಗಂ ಫಲಗಳ ಬೆಳಸು ಅಲ್ಪ-ಸ್ವಲ್ಪಮಕ್ಕುಂ ಜವಳಿ, ಕಂಬಳಿ, ಚರ್ಮಂಗಳು ಮಾರಗಂ.

# ಮಹಾನವಮಿ ಅಮಾಸಿಯ ಫಲ

**ಮಹಾನವಮಿ ಅಮಾಸಿಯ ದಿನ** ಮಹಾನಕ್ಷತ್ರ ಉತ್ರಿ ನಿತ್ಯನಕ್ಷತ್ರ ಉತ್ರಿ ಬಂದರೆ ಸಕಲ ಧಾನ್ಯಂಗಳು ಬೆಳಸು, ಹಿಂಗಾರಿ ಫಲವು ಅಲ್ಪ-ಸ್ವಲ್ಪ ಧಾನ್ಯಂಗಳು ಹೆಚ್ಚು ಕುಂದಾಗಿ ಮಾರಗಂ ರಸವರ್ಗ ನಿಂದು ಮಾರಗಂ ಅಡಿಕೆ, ಮೆಣಸು, ಸಕಲ ದ್ರವ್ಯಂಗಳು ಮಾರಗಂ ಅರಸುಗಳಿಗೆ ಸಕಲ ಮನುಷ್ಯರಿಗೆ ರೋಗಪುಟ್ಟಗಂ ಹತ್ತಿ ಹರಳು ಬಚ್ಚಿಡಲು ಹೇಳಿದಂತೆ ಮಾರಗಂ ಅಡಿಕೆ, ಮೆಣಸು, ಜವಳಿ, ಕಂಬಳಿ, ಚರ್ಮಂಗಳು, ಪಂಚಲೋಹಂಗಳು ಮಾರಗಂ ಪಶುಗಳಿಗೆ ಅಪಜಯಮಕ್ಕುಂ ಶಿಶುಗಳಿಗೆ ವ್ಯಾಧಿ ಪಿರಿದಕ್ಕುಂ ಮತ್ತೆ ಆ ಅಮಾಸಿ ದಿನ ಮಘಾ, ಹುಬ್ಬಿ, ಹಸ್ತಾ ಈ ಮೂರರೊಳು ಗ್ರಹಣ

ಬಂದರೆ ಉತ್ಪತ್ಯಂಗಳು ಪುಟ್ಟಗಂ ಸಕಲ ಧಾನ್ಯಂಗಳು ಮಾರಿ ಪುಟ್ಟಗಂ ನೆಲ್ಲು, ಕಬ್ಬು, ಜೋಳ ಮುಂತಾದ ಸಕಲ ಧಾನ್ಯಂಗಳು ಮಧ್ಯ ಫಲವಕ್ಕುಂ ಜವಳಿ, ಕಂಬಳಿ, ಚರ್ಮಂಗಳು ಮಾರಗಂ ನಾಗಜಾತಿ ಮನುಷ್ಯರಿಗೆ ರುಜ ಯಕ್ಕುಂ ಸಕಲ ಮರಗಳು ಫಲಮುಕ್ಕುಂ ಅಲ್ಲಾ, ಅರಿಷಣ, ಕಂದ-ಮೂಲ ಫಲಂಗಳು ವಕ್ಕುಂ.

## ದೀಪಾವಳಿ ಅಮಾಸಿಯ ಫಲ

**ದೀಪಾವಳಿ ಅಮಾಸಿಯ ದಿನ** ಮಹಾನಕ್ಷತ್ರ ಸ್ವಾತಿ ನಿತ್ಯನಕ್ಷತ್ರ ಸ್ವಾತಿ ಬಂದರೆ ಸಮಸ್ತ ಧಾನ್ಯಂಗಳು ಅಗ್ಗಮುಕ್ಕುಂ ರಸವರ್ಗಂಗಳು ಮಾರಗಂ ಅರಳಿ, ಗೋದಿ, ಕಡ್ಲಿ, ಅಗಸಿ, ಕುಸುಬಿ ಅರಫಲವಕ್ಕುಂ ಶಿಸುಗಳಿಗೆ ಲೇಸುಂಟು ಸಕಲ ಮನುಷ್ಯರಿಗೆ ಭಯ ಪುಟ್ಟಗಂ ಅರಸುಗಳಿಗೆ ಅಪಜಯ ವುಂಟು ಪುರುಷರಿಗೆ ವ್ಯಾಧಿ ಪಿರಿದಕ್ಕುಂ ಅಲ್ಲಾ ಅರಿಷಣ ಬೆಳಗಂ ಸಕಲರಿಗೆ ಸನ್ಮಾನ ಪಿರಿದಕ್ಕುಂ ಮತ್ತೆ ಆ ಅಮಾಸಿಯ ದಿನ ಹಸ್ತಾ, ಚಿತ್ರಾ, ವಿಶಾಖಾ ಬಂದು ಗ್ರಹಣವಾದರೆ ಮಹಾ ಉತ್ಪತ್ಯಂಗಳು ಪುಟ್ಟಗಂ ಗಡಚು ದ್ರವ್ಯಂ ಗಳು ಜವಳಿ, ಕಂಬಳಿ, ಚರ್ಮಂಗಳು ಇನಿತು ಮಾರಪುಟ್ಟಗಂ ಸಕಲ ಧಾನ್ಯಂಗಳು ಮಾರಗಂ ಅಲ್ಲಾ, ಅರಿಷಣ, ಜೀರಿಗೆ, ಉಳ್ಳಿ, ಅಲ್ಪ ಫಲಂಗಳು ಮಲ್ಲಮಲ್ಲರಿಗೆ ಜಗಳಮುಕ್ಕುಂ ಗೋದಿ, ಕಡ್ಲಿ, ಹಿಂಗಾರಿ ಫಲಗಳಿಗೆ ಇಲಿ ಭಯ ಪಿರಿದಕ್ಕುಂ ಅಗ್ನಿಭಯ ಚೋರಭಯದಿಂದ ವಕ್ಕುಂ.

## ಛೆಟ್ಟಿ ಅಮಾಸಿಯ ಫಲ

**ಛೆಟ್ಟಿ ಅಮಾಸಿಯ ದಿನ** ಮಹಾನಕ್ಷತ್ರ ಜ್ಯೇಷ್ಠಾ ನಿತ್ಯನಕ್ಷತ್ರ ಜ್ಯೇಷ್ಠಾ ಬಂದರೆ ಮುಂದಣ ದಿನಕ್ಕೆ ಮುಂಗಾರಿ ಸಕಲ ಧಾನ್ಯಂಗಳು ಬೆಳಗಂ ಧಾನ್ಯ ಅರ್ಗಮುಕ್ಕುಂ ಅರಸುಗಳು ಮನುಷ್ಯರು ಇನಿತು ಸುಖವಾಗಿಹರು ಅಡಕಿ, ಅರಿಷಣ, ಮೆಣಸು, ಅಲ್ಲಾ ಇವು ಅರಫಲವಕ್ಕುಂ ಹಿಂಗಾರಿ ಫಲ ವಿಪರೀತಮುಕ್ಕುಂ ಬೆಳಿಯಾಗಿ ಬೆಳೆದು ಕಡೆಯಲ್ಲಿ ಕೆಡಗಂ ಸಕಲ ಪ್ರಾಣಿಗಳಿಗೆ ಚಿಂತೆ ತೋರಿಸುಗಂ ಜವಳಿ ಕಂಬಳಿ ಪಿರಿದಕ್ಕುಂ ಮತ್ತೆ ಆ ಅಮಾಸಿ ದಿನ ವಿಶಾಖಾ, ಅನುರಾಧಾ, ಮೂಲಾ ಈ ಮೂರು

ಕೂಡಿ ಬಂದರೆ ಗ್ರಹಣವಾದರೆ ಆ ವರುಷ ಮಹಾದುರ್ಭಿಕ್ಷ ಪುಟ್ಟುಗಂ ಹದನೆಂಟು ಧಾನ್ಯಂಗಳು ಮಾರ ಪುಟ್ಟುಗಂ ಮಲ್ಲಮಲ್ಲರಿಗೆ ರಾಯರಿಗೆ ಕಾಳಗವಕ್ಕುಂ ಮುಂದಕೆ ತೃಣಗಳು ಸಂಬಾಳಿಸಿಕೊಂಬುವದು.

## ಎಳ್ಳ ಅಮಾಸಿಯ ಫಲ

**ಎಳ್ಳ ಅಮಾಸಿಯ ದಿನ** ಮಹಾನಕ್ಷತ್ರ ಪೂರ್ವಾಷಾಢಾ ನಿತ್ಯನಕ್ಷತ್ರ ಪೂರ್ವಾಷಾಢಾ ಬಂದರೆ ಮುಂದಣ ಸಂವತ್ಸರಕ್ಕೆ ಮಳೆಯಾಹದು ಎಳ್ಳು, ಉದ್ದು, ಹತ್ತಿ, ಹರಳು ಕೀಟಕಹೆಚ್ಚಿ ಸಸಿಗಳು ನಲಗಿ ಮುಂದೆ ವಿಪರೀತ ಫಲವು ಜೋಳ ಹರಿಹಾದಾವು ಅದು ತಪ್ಪಿದರೆ ಹಾಲೊಡದು ಕೆಡುವವು ನೆಲ್ಲು ಕಬ್ಬು ಫಲವಕ್ಕುಂ ನವಣೆ ಕಾಡಿಗಿಯುಕ್ಕುಂ ಗೋದಿ ಕಡ್ಲಿ ಇನಿತು ಬೆಳಗಂ ಕುಸುಬಿ ಜಿಗಿಬಿದ್ದು ಕೆಡಗಂ ಅಗಸೆ ರೋಗವುಕ್ಕುಂ ಧಾನ್ಯಂಗಳು ಹೆಚ್ಚು ಕುಂದಾಗಿ ಮಾರಗಂ ರಸವರ್ಗಂಗಳು ಪ್ರಿಯುಮುಕ್ಕುಂ ಅಡಕಿ, ಮೆಣಸು, ಯಾಲಕ್ಕಿ, ಅಲ್ಲಾ, ಅರಿಷಣ ಮಧ್ಯಮುಕ್ಕುಂ ಪಶುಗಳು ಕರಿಗಂ ಅರಸುಗಳು ಸ್ವಸ್ತದಲ್ಲಿಹರು ಮತ್ತೆ ಆ ಅಮಾಸಿ ದಿನ ಜ್ಯೇಷ್ಠಾ, ಮೂಲಾ, ಉತ್ರಾಷಾಢಾ ಈ ಮೂರರೋಳ್ ಸೂರ್ಯಗ್ರಹಣವಾದರೆ ಮೊದಲು ಮಳೆ ಮಂಜು ಪ್ರವೇಶಿಸಿದರೆ ಮುಂದಣ ವರುಷಕ್ಕೆ ಮಳೆ ನಾಸ್ತಿ ಪಶುಗಳು ಲಯ ಮುಕ್ಕುಂ ಸಕಲರಿಗೆ ವ್ಯಾಧಿ ಪಿರಿದಕ್ಕುಂ ಅಳಿಗಂ ಮಹಾ ರಾಜಕಂಗಳು ಪುಟ್ಟುಗಂ ರಸವರ್ಗಂಗಳು ಪ್ರಿಯುಮುಕ್ಕುಂ ತೃಣಧಾನ್ಯಂಗಳು ಅತಿ ಸಂಬಾಳಿಸಿ ಕೊಂಬುವದು ಅಲ್ಲಾ, ಅರಿಷಣ, ಅಡಕಿ ಮಾರಗಂ ಬೆಳಸು ಮಧ್ಯಫಲಗ ಳಕ್ಕುಂ ಅಲ್ಲಿಗಲ್ಲಿಗೆ ವಿಪರೀತವಕ್ಕುಂ ಕೂರಿ ಅನೇಕ ಸಕಲ ಮೃಗದ ಪರಿ ಪಚ್ಚುಮಂ.

## ಅವರತನ ಅಮಾಸಿಯ ಫಲ

**ಅವರತನ ಅಮಾಸಿಯ ದಿನ** ಮಹಾನಕ್ಷತ್ರ ಧನಿಷ್ಠಾ ನಿತ್ಯನಕ್ಷತ್ರ ಧನಿಷ್ಠಾ ಬಂದರೆ ಮುಂದಣ ದಿನಕ್ಕೆ ಮುಂಗಾರಿಯಾಗಿ ನಾಗಧಾನ್ಯಂಗಳು ಬೆಳಗಂ ಹಿಂಗಾರಿ ಅಲ್ಪಮಳಿಯಾಗಿ ಅರಫಲಮುಕ್ಕುಂ ಸಕಲ ಧಾನ್ಯಂಗಳು ಬೆಳಗಂ ಮಾರಗಂ ರಸವರ್ಗಪೆಚ್ಚುಗಂ ಅಡಿಕೆ, ಮೆಣಸು, ಅಲ್ಲಾ, ಅರಿಷಣ, ಕಬ್ಬು, ಕವಳೆ ಕೆಡಗಂ ಅರಸುಗಳು ಸುಖಿಯಾಗಿಹರು ಸಕಲ ಮನುಷ್ಯರಿಗೆ

ವಪ್ಪುಚಿನ್ನ ವ್ಯಾಧಿವುಟ್ಟುಗಂ ಪಶುಗಳು ಸೂಸ್ಸರಿಯಾಗಿ ಕಂಗಂ ಶಿಶುಗಳು ಲಯವುಕ್ಕುಂ ವುತ್ತೆ ಆ ಅಮಾಸಿ ದಿನ ಉತ್ರಾಷಾಢಾ, ಶ್ರವಣ, ಶತತಾರಾ ಈ ಮೂರು ಬಂದು ಗ್ರಹಣವಾದರೆ ಆದಿತ್ಯವಾರ, ಶನಿವಾರ, ಮಂಗಳವಾರ ಈ ವಾರಗಳಲ್ಲಿ ಬಂದರೆ ಧರಿಯೆಲ್ಲ ಕೋಲಾಲಚಕ್ರದಂತೆ ತಿರುಗುವದು, ಋತುಗಳು ಹರಕೊಂಡು ಪಶು, ಶಿಶು, ಅರಸುಗಳು ಲಯವುಕ್ಕುಂ ಶ್ರವಣ ವ್ಯತೀಪಾತ ಕೂಡಿದರೆ ಅರ್ಘ ದಯವೆನಿಸುವದು ಆ ಅಮಾಸಿ ಆದಿತ್ಯವಾರ ಬಂದರೆ ಆದಿನದ ಧಾರಣೆಗೆ ಮುಂದಣ ನಾಗರಪಂಚಮಿಗೆ ಎರಡು ಇಮ್ಮಡಿ ಮಾರು ಹೆಚ್ಚುವದು, ಮಂಗಳವಾರ ಬಂದರೆ ಮೂರು ಇಮ್ಮಡಿ ಮಾರುವದು, ಶನಿವಾರ ಬಂದರೆ ಮುಂದಣ ನಾಗರಪಂಚಮಿಗೆ ನಾಲ್ಕು ಇಮ್ಮಡಿಯಾಗಿ ಮಾರುಹೆಚ್ಚುವದು ರಸವರ್ಗಂಗಳು ಮಾರಗಂ ಹದಿನೆಂಟು ಸಮಯಂಗಳೆಲ್ಲ ವಂದಾಗಿ ನಡಿಗಂ ರಾಜಭಯ, ಚೋರಭಯ, ಅಗ್ನಿಭಯ ಪಿರಿದಕ್ಕುಂ ಇಂತು ಕೀಟಕಂಗಳು ಭಯ ಪಿರಿದಕ್ಕುಂ ಅಲ್ಲಿಗಲ್ಲಿಗೆ ಬೆಳಗಂ ಕುರಿ ಮೃಗಗಳು ಲೇಸಾಗಿಹವು.

# ಶಿವರಾತ್ರಿ ಅಮಾಸಿಯ ಫಲ

**ಶಿವರಾತ್ರಿ ಅಮಾಸಿಯ ದಿನ** ಮಹಾನಕ್ಷತ್ರ ಪೂರ್ವಾಭಾದ್ರಪದ ನಿತ್ಯನಕ್ಷತ್ರ ಪೂರ್ವಾಭಾದ್ರಪದ ಬಂದರೆ ಮುಂದಣ ದಿನಕ್ಕೆ ಮುಂಗಾರಿಗಳಕ್ಕುಂ ಎಳ್ಳು, ಉದ್ದು, ಹತ್ತಿ, ಹರಳು ಇನಿತಕ್ಕೆ ಕೀಟಕ ಹೆಚ್ಚುವದು ಜೋಳ ಕುರುಟ್ಟೆ, ಕಾಡಿಗಿಯಕ್ಕುಂ ಹಿಂಗಾರಿ ಕಂಡಲಮಂಡಲ ಗೋದಿ, ಕಡ್ಲಿ ಇನಿತಂ ಬೆಳೆದು ಕಡಿಯಲ್ಲಿ ಅರ್ಘಫಲವಕ್ಕುಂ ಬಿಳಿಜೋಳ ಲೇಸಕ್ಕುಂ ಅಗಸಿ ರೋಗವುಕ್ಕುಂ ಅಡಿಕೆ ಮೆಣಸು ಅರ್ಧಫಲವಕ್ಕುಂ ಅಲ್ಲಾ, ಅರಿಷಣ, ಮೆಂತೆ ಸ್ವಲ್ಪವಾಗಿ ಬೆಳಗಂ ಧಾನ್ಯಂಗಳು ಹೆಚ್ಚು ಕುಂದಾಗಿ ಮಾರಗಂ ಪಶುಗಳು ಸೂಸ್ಸರಿಯಕ್ಕುಂ ಅರಸುಗಳಿಗೆ ಮನುಷ್ಯರಿಗೆ ವಪ್ಪುಚಿನ್ನ ಬ್ಯೇನೆ ತೋರಗಂ ವುತ್ತೆ ಆ ಅಮಾಸಿ ದಿನ ಧನಿಷ್ಠ, ಶತತಾರಾ, ಉತ್ರಾಭಾದ್ರಪದ ಈ ಮೂರು ಬಂದರೆ, ಗ್ರಹಣವಾದರೆ, ಸಂಕ್ರಾಂತಿ ಇನಿತು ಬಂದರೆ ಸಕಲ ಧಾನ್ಯಂಗಳು ಮಡಿಗಂ ಹೇಳಿದಂತೆ ಮಾರುವದು, ರಾಜ್ಯಕ್ಕೆ ದೈವಕ್ಕೆ

ಹೇಳುವದು ಪುಟ್ಟಿಗಂ ತೃಣಧಾನ್ಯ ಸಂಬಾಳಿಸಿಕೊಳ್ಳುವದು, ಪಶುಗಳು ಲಯುಮಕ್ಕುಂ ರಸವರ್ಗ ಮಾರಗಂ ಮಹಾ ಹೀನ ಯಂದರಿಯುವದು.



# ಹನ್ನೆರಡು ಹುಣ್ಣಿವೆಯ ಫಲ

## ದವನದಹುಣ್ಣಿವೆಯ ಫಲ

**ದವನದ ಹುಣ್ಣಿವೆಯ ದಿನ** ಮಹಾನಕ್ಷತ್ರ ರೇವತಿ ನಿತ್ಯನಕ್ಷತ್ರ ಸ್ವಾತಿ ಬಂದರೆ ಭರಣಿಯ ಮಳಿಯಾಗಿ ನಾನಾಧಾನ್ಯ ಬಿತ್ತಿ ಆ ಫಲ ನಲಗಿ ಮುಂದೆ ಮಘ, ಹುಬ್ಬಿ, ಉತ್ರಿ, ಹಸ್ತ ಮಳಿಯಾಗಿ ಸಮಸ್ತ ಧಾನ್ಯಂಗಳು ಹುಲಸಾಗಿ ಮಾರಗಂ ಅಲ್ಲಾ ಅರಿಷಣ ಮಧ್ಯಮ ಫಲಗಳು ಇವಕ್ಕೆ ಜಿಟ್ಟಿ ಕೀಟಕಂಗಳ ಭಯವಾಗಿ ನಲಗಿ ಕಡಿಯಲ್ಲಿ ಬೆಳಗಂ ಗೋದಿ, ಕಡ್ಲಿ, ಜೋಳ, ಕುಸುಬೆ ಇವಕ್ಕೆ ಇಲಿಭಯುಮಕ್ಕುಂ ಲೋಹ, ಜವಳಿ, ಕಂಬಳಿ ಮೂರು ಪುಟ್ಟುಗಂ ಮತ್ತೆ ಆ ಹುಣ್ಣಿವೆಯ ದಿನ ಹಸ್ತಾ, ಚಿತ್ತಿ, ವಿಶಾಖಾ, ಅನು-ರಾಧಾ ಈ ನಾಲ್ಕರೊಳ್ ಗ್ರಹಣ ಬಂದರೆ ಸಕಲ ಧಾನ್ಯಂಗಳು ಮಾರಗಂ ಪುಟ್ಟಿ ರಾಜಕಾರ್ಯನಾಹದು ಉತ್ಪತ್ಯಂಗಳು ಪುಟ್ಟಿಗಂ ಮನುಷ್ಯರಿಗೆ ದನಕ್ಕೆ ಜಯವಿಲ್ಲದೆ ಲಯುಮಕ್ಕುಂ ಮರಗಳು ಫಲವಕ್ಕುಂ ಅಲ್ಲಿಗಲ್ಲಿಗೆ ಚೋರ ಭಯ ಪುಟ್ಟುವದು, ತೃಣಧಾನ್ಯ ಸಂಬಾಳಿಸಿಕೊಳ್ಳುವದು, ನಾನಾ ಹಿರಿಯರು ಸ್ತ್ರೀಯರು ಗತಿತಪ್ಪಿ ನಡೆವರು, ಜನನ ಮರಣ ಪಿರಿದಕ್ಕುಂ.

## ಆಗೀಹುಣ್ಣಿವೆಯ ಫಲ

**ಆಗೀ ಹುಣ್ಣಿವೆಯ ದಿನ** ಮಹಾನಕ್ಷತ್ರ ಭರಣಿ; ನಿತ್ಯನಕ್ಷತ್ರ ಅನು ರಾಧಾ ಬಂದರೆ ಹಿಂಗಾರಿ ಮುಂಗಾರಿಗಳಾಗಿ ನಾನಾ ಧಾನ್ಯಂಗಳು ಬೆಳಗಂ ಅಲ್ಪಸ್ವಲ್ಪಗಳಾಗಿ ರೋಗಗಳಕ್ಕುಂ ಗೋದಿಗಳು ಸಕಲ ಧಾನ್ಯಂಗಳು ನಿಂದು ಮಾರಗಂ ನಾನಾಮೃಗಗಳು ಸುಖದಲ್ಲಿ ಇದ್ದಾವು; ಅಡಿಕಿ, ಮೆಣಸು,

ಅರಿಷಣ, ಅಲ್ಲಾ, ಕಬ್ಬು ಸಕಲವು ಇನಿತು ಸುಖದಲ್ಲಿ ಬೆಳಗಂ ಕುರಿ, ಆಡು, ಆನಿ ಇವಕ್ಕೆ ಜಯವಿಲ್ಲಾ; ಮತ್ತು ಆಗಿ ಹುಣ್ಣಿವೆಯ ದಿನದಲ್ಲಿ ವಿಶಾಖಾ, ಜ್ಯೇಷ್ಠಾ, ಮೂಲ, ಪೂರ್ವಾಷಾಢಾ ಈ ನಾಲ್ಕು ನಕ್ಷತ್ರದಲ್ಲಿ ಗ್ರಹಣವಾದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ನಾಲ್ಕು ಜಾತಿಗೆ ಮಹಾ ಕಷ್ಟವು; ಒಳ್ಳೆ ರಾಜಕ ಪುಟ್ಟುವದು, ಸಕಲ ಧಾನ್ಯ ಮಾರಗಂ, ಅಲ್ಪ ಫಲವಕ್ಕುಂ.

## ಕಾರಹುಣ್ಣಿವೆಯ ಫಲ

**ಕಾರಹುಣ್ಣಿವೆಯ ದಿನ** ಮಹಾನಕ್ಷತ್ರ ಆರಿದ್ರಾ, ನಿತ್ಯನಕ್ಷತ್ರ ಮೂಲಾ ಬಂದರೆ ಸೋನಿಯ ಮಳೆಯಕ್ಕುಂ ಹಿಂಗಾರಿಯ ಮಳೆಯಕ್ಕುಂ ಪಶುಗಳಿಗೆ ಜಯಮಕ್ಕುಂ ಮುಂಗಾರಿ ಫಲ ಎಳ್ಳು, ಉದ್ದು, ಹೆಸರು, ಹತ್ತಿ, ಹರಳು ಇಷ್ಟಕ್ಕೆ ಕೀಟಕಹೆಚ್ಚು, ಮರಳಿ ಫಲವಕ್ಕುಂ ಧಾನ್ಯಂಗಳು ಪೆಚ್ಚುಗಂ ರಸವರ್ಗ ಅಗ್ಗಮಕ್ಕುಂ ಕಂಬಳಿ ವಸ್ತ್ರಂಗಳು ಮಾರಗಂ ಆಡಕೆ, ಮೆಣಸು, ಸಾಸ್ವಿ ನಿಂದು ಮಾರುವದು, ಅರಸುಗಳು ಮುಂತಾದವರೆಲ್ಲ ಸುಖದಲ್ಲಿ ಇರುವರು; ಮತ್ತು ಕಾರಹುಣ್ಣಿವೆಯ ದಿನ ಅನುರಾಧಾ, ಜ್ಯೇಷ್ಠಾ ಪೂರ್ವಾಷಾಢಾ, ಉತ್ರಾಷಾಢಾ ಈ ನಾಲ್ಕರೊಳಗೆ ಗ್ರಹಣವಾದರೆ, ಕಾಮನಬಿಲ್ಲು ಕಂಡರೆ ಆ ವರುಷ ಧಾನ್ಯ ಬಚ್ಚಿಡಲು ಲಾಭವಕ್ಕುಂ ಶಿಶುಗಳಿಗೆ ಜಯವಿಲ್ಲ, ಬೀಜವ ಸಂಬಾಳಿಸಿ ಬಿತ್ತುವದು; ಗೋದಿ, ಕಡ್ಲಿ, ಅಗಸಿ, ಕುಸುಬಿ ಇನಿತು ರೋಗದಭಯವು, ನಾನಾ ಹಿರಿಯರು ತಪಸ್ವಿಗಳು ವ್ರತಗೆಟ್ಟು ನಡೆವರು, ಪಂಚಲೋಹಗಳು ಗಡಚುದ್ರವ್ಯಂಗಳು ಸಂಬಾಳಿಸಿಕೊಂಬುವದು; ಮುಂದೆ ಚಿತ್ತಿ, ಸ್ವಾತಿ, ವಿಶಾಖಾ, ಅನುರಾಧಾ ಇನಿತು ಕಡಿಯಮಳಿಯಕ್ಕುಂ ಗಾಳಿ ಅಗ್ನಿಭಯ ಪಿರಿದಕ್ಕುಂ ಅರಸುಗಳು ಪ್ರಜೆಗಳು ವ್ರತಗೆಟ್ಟು ನಡೆಗಂ ಚೋರಭಯಮಕ್ಕುಂ.

## ಕಡಲಿಗಡಬಿನಹುಣ್ಣಿವೆಯ ಫಲ

**ಕಡಲಿಗಡಬಿನಹುಣ್ಣಿವೆಯ ದಿನ** ಮಹಾನಕ್ಷತ್ರ ಪುನರ್ವಸು ನಿತ್ಯ ನಕ್ಷತ್ರ ಶ್ರವಣ ಬಂದರೆ ಆ ವರುಷ ಸಕಲ ಧಾನ್ಯಂಗಳು ಬೆಳಗಂ ಅಡಿಕೆ ಕೊಳ್ಳಿ ಹಾದು ಕೆಡಗಂ ಮೆಣಸು ಅರಫಲವಕ್ಕುಂ ಪಶುಗಳು ಸೂಸ್ಸರಿಯಾಗಿ ಕರಿಗಂ

ಅರಸುಗಳು ಪ್ರಜಗಳು ಸುಖಮಕ್ಕುಂ ಜವಳಿ, ರೋಮಾಶಾಟೆ, ಚರ್ಮಂಗಳು ಮಾರು ಪಟ್ಟುಗಂ ಮತ್ತೆ ಆ ಹುಣ್ಣಿವೆಯ ದಿನ ಪೂರ್ವಾಷಾಢಾ, ಉತ್ರಾಷಾಢಾ, ಧನಿಷ್ಠಾ, ವಿಶಾಖಾ ಈ ನಾಲ್ಕರೊಳು ಬಂದು ಗ್ರಹಣವಾದರೆ ಸಕಲ ಧಾನ್ಯಂಗಳು ಅರಫಲವಕ್ಕುಂ ಜೋಳ ಹಾಲೊಡದು ಕೆಡಗಂ ಜಿಟ್ಟೆ ಇಲಿ ಬಳಹವಾಗಿ ಹೆಚ್ಚುವದು, ಅಗ್ನಿ ಭಯ ಚೋರಭಯ ಪಿರಿದಕ್ಕುಂ ಮನುಷ್ಯರಿಗೆ ವ್ಯಾಧಿ ಪಿರಿದಕ್ಕುಂ ಪಶುಗಳಿಗೆ ಅಪಜಯುಮಕ್ಕುಂ ಶಿಶುಗಳಿಗೆ ವ್ಯಾಧಿಯಾಗಿ ಹುಣ್ಣುಗಳು ಆಗಿ ಸಾವು ಪುಟ್ಟಗಂ.

## ನೂಲಹುಣ್ಣಿವೆಯ ಫಲ

**ನೂಲಹುಣ್ಣಿವೆಯ ದಿನ** ಮಹಾನಕ್ಷತ್ರ ಆಶ್ಲೇಷಾ ನಿತ್ಯನಕ್ಷತ್ರ ಶತತಾರಾ ಬಂದರೆ ಸಕಲ ಧಾನ್ಯ ಬೆಳಗಂ ಅಲ್ಲಾ, ಅರಿಷಣ ಬೆಳಗಂ ವೆ.ಣಸು, ಮೆಂತೆ, ಜೀರಗಿ, ಅಡಿಕೆ ಇಂತಿಷ್ಟು ಬೆಳಗಂ ರಸವರ್ಗಂಗಳು ಅಲ್ಪ ಫಲವಕ್ಕುಂ ಸಕಲ ಮನುಷ್ಯರಿಗೆ ಜಯುಮಕ್ಕುಂ ಹಿಂಗಾರಿ ಅಲ್ಪ-ಸ್ವಲ್ಪಮಕ್ಕುಂ ಆ ಹುಣ್ಣಿವೆ ದಿನ ಶ್ರವಣ, ಧನಿಷ್ಠಾ, ಪೂರ್ವಾಭಾದ್ರಪದ ಈ ಮೂರರೊಳು ಬಂದು ಗ್ರಹಣವಾದರೆ ಆ ಸಂವತ್ಸರದಲ್ಲಿ ಮಳೆ ಬೆಳೆ ಸ್ವಲ್ಪ, ಸಕಲ ಧಾನ್ಯಂಗಳು ಮಾರ ಪುಟ್ಟಗಂ ಸಕಲ ಗಡಚುದ್ರವ್ಯಂಗಳು, ಅನೇಕ ರಸವರ್ಗಂಗಳು; ಜವಳಿ, ಕಂಬಳಿ ಇನಿತು ಹೇಳಿದಂತೆ ಮಾರಗಂ ರಾಜ-ಕಂಗಳು ಪುಟ್ಟಗಂ ದೈವಕಂಗಳು ಪುಟ್ಟಗಂ ಮನುಷ್ಯರಿಗೆ ಪಶುಗಳಿಗೆ ಅಪಜಯುಮಕ್ಕುಂ ಅಗ್ನಿ ಭಯು, ಚೋರಭಯು, ರಾಜಭಯ ಪಿರಿದಕ್ಕುಂ ಮಹಾ ಉತ್ಪತ್ಯಂಗಳು ಪುಟ್ಟಗಂ ನಾನಾ ಹಿರಿಯುರು, ಸ್ತ್ರೀಯರು ವ್ರತಗೆಟ್ಟು ನಡಿವರು.

## ಅನಂತನಹುಣ್ಣಿವೆಯ ಫಲ

**ಅನಂತನಹುಣ್ಣಿವೆಯ ದಿನ** ಮಹಾನಕ್ಷತ್ರ ಉತ್ರಾ ನಿತ್ಯನಕ್ಷತ್ರ ರೇವತಿ ಬಂದರೆ ನಾಡಿಗೆ ಸುಭಿಕ್ಷಮಕ್ಕುಂ ಹಿಂಗಾರಿ ಬೆಳಗಂ ಸಕಲ ಧಾನ್ಯಂಗಳು ನಿಂದು ಮಾರಗಂ ರಸವರ್ಗ ನಿಂದು ಮಾರಗಂ ಅರ್ಗಮಕ್ಕುಂ ಪ್ರಜೆಗಳಿಗೆ ಸುಖಮಕ್ಕುಂ ಪಶುಗಳು ಸೂಸ್ಸರಿಯಾಗಿ ಕರಿಗಂ ಜವಳಿ, ಕಂಬಳಿ,

ಚರ್ಮಂಗಳು ಅತಿ ಪ್ರೇಮದಿಂದ ಮಾರಗಂ ಮತ್ತೆ ಆ ಹುಣ್ಣಿವೆಯ ದಿನ ಪೂರ್ವಾಭಾದ್ರಪದ, ಉತ್ರಾಭಾದ್ರಪದ, ಅಶ್ವಿನಿ, ಭರಣಿ ಈ ನಾಲ್ಕು ನಕ್ಷತ್ರಗಳು ಬಂದರೆ ಗ್ರಹಣವಾದರೆ ಸಮಸ್ತ ಉತ್ಪತ್ಯ ಪುಟ್ಟಗಂ ಸಕಲ ಧಾನ್ಯಂಗಳು ಸಮಗ್ರವಕ್ಕುಂ ಮುಂದಕ್ಕೆ ಧಾನ್ಯಂಗಳು ರಸವರ್ಗಂಗಳು ಪುಟ್ಟಗಂ ಹೇಳಿದಂತೆ ಮಾರಗಂ ನಾನಾ ಹಿರಿಯರು ವ್ರತಗೆಟ್ಟು ನಡಿವರು, ಹಿಂಗಾರಿ ಫಲವುಂ ಕೆಡಗಂ.

## ಶೀಗಿಹುಣ್ಣಿವೆಯ ಫಲ

**ಶೀಗಿಹುಣ್ಣಿವೆಯ ದಿನ** ಮಹಾನಕ್ಷತ್ರ ಚಿತ್ತಿ ನಿತ್ಯನಕ್ಷತ್ರ ಅಶ್ವಿನಿ ಬಂದರೆ ಸಕಲ ಧಾನ್ಯ ಬೆಳಗಂ ಹುಲಸಾಗ ರಸವರ್ಗ ಪಿರಿದಕ್ಕಂ ಅರಸುಗಳಿಗೆ, ಪ್ರಜಗಳಿಗೆ, ಶಿಶುಗಳಿಗೆ, ಪಶುಗಳಿಗೆ ಜಯಮಕ್ಕಂ ಅರಸುಗಳು ಸತ್ಯವಂತರಾಗಿ ನಡಿವರು, ಸಕಲ ಧಾನ್ಯಂಗಳು ರಸವರ್ಗಂಗಳು ಅರ್ಗಮಕ್ಕುಂ ಅಡಿಕೆ, ಮೆಣಸು, ಜವಳಿ ವಸ್ತ್ರಂಗಳು ಮಾರಗಂ ಅರಿಷಣ, ಬಳ್ಳೊಳ್ಳಿ, ನೀರುಳ್ಳಿ, ಜೀರಗಿ, ಮೆಂತೆ, ಸಾಸ್ವಿ ಇಂತಿವು ಬಚ್ಚಿಡಲು ನಾಲ್ಕು ಇಮ್ಮಡಿ ಮಾರಗಂ ಕಾಯಿ ಎಲೆಬಳ್ಳಿ ಮಧ್ಯ ಫಲವಕ್ಕುಂ ಮತ್ತೆ ಆ ಹುಣ್ಣಿವೆಯ ದಿನ ಉತ್ರಾಭಾದ್ರಪದ, ರೇವತಿ, ಭರಣಿ, ಕೃತ್ತಿಕಾ ಈ ನಾಲ್ಕರೊಳಗೆ ಗ್ರಹಣವಾದರೆ ಹತ್ತಿ, ಹರಳು, ಅಗಸಿ, ಕುಸಿಬೆ, ಕಡ್ಲಿ, ಬಿಳಿಜೋಳ ಇಲಿಯ ಭಯದಿಂದ ಕೆಡಗಂ ಅದು ತಪ್ಪಿದರೆ ರೋಗದಿಂದ ಕೆಡುವದು, ಮನುಷ್ಯರಿಗೆ ವ್ಯಾಧಿ ಪಿರಿದಕ್ಕುಂ ಸಕಲ ಧಾನ್ಯ ಮಾರಗಂ.

## ಗೌರಿಹುಣ್ಣಿವೆಯ ಫಲ

**ಗೌರಿಹುಣ್ಣಿವೆಯ ದಿನ** ಮಹಾನಕ್ಷತ್ರ ವಿಶಾಖಾ, ನಿತ್ಯನಕ್ಷತ್ರ ಭರಣಿ ಬಂದರೆ ಸಕಲ ಧಾನ್ಯ ಬೆಳಗಂ ಕಡಿಯಲ್ಲಿ ಅಲ್ಲಿಗಲ್ಲಿಗೆ ಮೂಷಕಭಯ ಪುಟ್ಟಗಂ ರೋಗ ಅಲ್ಪ ಫಲಗಳಕ್ಕುಂ ರಸವರ್ಗನಿಂದು ಮಾರಗಂ ಪಂಚಲೋಹಂಗಳು ಮಾರಗಂ ಜವಳಿ, ಕಂಬಳಿ, ಚರ್ಮಂಗಳು ಮಾರಗಂ ಅಡಿಕೆ, ಮೆಣಸು, ಹಿಪ್ಲಿ, ಶುಂಠಿ, ಜೀರಿಗೆ ಹೇಳಿದಂತೆ ಮಾರಗಂ ಅನೇಕ ದನಗಳು, ಪ್ರಜಗಳು, ಶಿಶುಗಳು ಇಷ್ಟಕ್ಕೆ ಸುಖಮಕ್ಕಂ ಮತ್ತೆ ಆ ಹುಣ್ಣಿವೆಯ ದಿನ ರೇವತಿ,

ಅಶ್ವಿನಿ, ಕೃತ್ತಿಕಾ, ರೋಹಿಣಿ ಬಂದು ಗ್ರಹಣವಾದರೆ ಮಹಾ ಉತ್ಪತ್ಯಂಗಳು ಪುಟ್ಟಿಗಂ ರಾಜಕಂಗಳು ಪುಟ್ಟಿಗಂ ಸಕಲ ಧಾನ್ಯ ರಸವರ್ಗಂಗಳು, ಪಂಚ ಲೋಹಂಗಳು ಮಾರಗಂ ಜವಳಿ, ಕಂಬಳಿ, ಚರ್ಮಂಗಳು ಅಗ್ಗವು; ಸಕಲ ಮನುಷ್ಯರಿಗೆ ವ್ಯಾಧಿ, ಶಿಶುಗಳು ಲಯಮಕ್ಕುಂ ಎಲಿ, ಕಬ್ಬು, ಅಡಿಕೆ, ಮೆಣಸು ಸಕಲ ಗಡಚು ದ್ರವ್ಯಂಗಳು ಅರ್ಗಮಕ್ಕುಂ ಅಲ್ಲಿಗಲ್ಲಿಗೆ ಒಳ್ಳೇರಾಜ ಪುಟ್ಟಿಗಂ ಮನುಷ್ಯರು ಲಯಮಕ್ಕುಂ.

## ಹೊಸ್ತಲಹುಣ್ಣಿವೆಯ ಫಲ

**ಹೊಸ್ತಲಹುಣ್ಣಿವೆಯ ದಿನ** ಮಹಾನಕ್ಷತ್ರ ಜ್ಯೇಷ್ಠಾ ನಿತ್ಯನಕ್ಷತ್ರ ಮೃಗಶಿರ ಬಂದರೆ ಸಕಲ ಧಾನ್ಯ ಸಂಗ್ರಹಮಕ್ಕುಂ ಜವಳಿ, ಕಂಬಳಿ, ಚರ್ಮಂಗಳು, ಕುರಿ ಇವು ಮಾರಪುಟ್ಟಿಗಂ ಆನೆ, ಕುದುರೆ, ಹಂದಿ, ನಾಯಿ ಸಮುಸ್ತ ಮೃಗಂಗಳು ಪಕ್ಷಿಗಳು ಇನಿತಕ್ಕೆ ಜಯವಿಲ್ಲಾ; ಮತ್ತು ಆ ಹುಣ್ಣಿವೆಯ ದಿನ ಕೃತ್ತಿಕಾ, ರೋಹಿಣಿ, ಆರಿದ್ರಾ ಬಂದು ಗ್ರಹಣವಾದರೆ ನಾನಾಧಾನ್ಯಂಗಳು, ರಸವರ್ಗಂಗಳು ಮಾರಗಂ ಗಡಚು ದ್ರವ್ಯಂಗಳು ಪೆಚ್ಚಗಂ ಸಕಲ ಪ್ರಜಗಳಿಗೆ ಸುಖಮಕ್ಕುಂ ರಾಜ್ಯಕ ಪುಟ್ಟಿಗಂ ಸಮಸ್ತ ಪಶುಗಳು ಲಯಮಕ್ಕುಂ ಷಡ್ವದರ್ಶನಂಗಳು ಹದಿನೆಂಟು ಸಮಯದಲ್ಲಿ ಮಂದಾಗಿ ನಡಿಗಂ ಕರಿ, ಮೃಗ, ಪಕ್ಷಿಗಳೊಳಗೆ ಜಯವಿಲ್ಲಾ; ಸಕಲ ಧಾನ್ಯಂಗಳು ಸಂಬಾಳಿಸಿ ಬಚ್ಚಿಡಲು ಮುಂದೆ ಮೂರಕ್ಕೆ ಅರಸುಗಳು ನೀತಿಗೆಟ್ಟು ನಡಿವರು; ಚೋರ ಭಯ, ಅಗ್ನಿ ಭಯ, ಘಾಳಿಯಂ ಇವರ ಮಳಿಯುಟ್ಟನವು.

## ಬಂದಹುಣ್ಣಿವೆಯ ಫಲ

**ಬಂದಹುಣ್ಣಿವೆಯ ದಿನ** ಮಹಾನಕ್ಷತ್ರ ಪೂರ್ವಾಷಾಢಾ ನಿತ್ಯ ನಕ್ಷತ್ರ ಪುಷ್ಯ ಬಂದರೆ ಸಕಲ ಧಾನ್ಯಂಗಳು ನಿಂದು ಮಾರುವದು; ಅಲ್ಲಾ, ಅರಿಷಣ, ಅಡಿಕೆ, ಮೆಣಸು, ಹುಳ್ಳಿ, ಸಾಸ್ವಿ ಇವಕ್ಕೆ ಕುಂದಗಂ ಸಕಲ ಮನುಷ್ಯರಿಗೆ ಪಶುಗಳಿಗೆ ವ್ಯಾಧಿ ಪಿರಿದಕ್ಕುಂ ಅರಸುಗಳು ಸುಪ್ತದಲ್ಲಿ ಇರುವರು; ಮತ್ತೆ ಆ ಹುಣ್ಣಿವೆಯ ದಿನ ಆರಿದ್ರಾ, ಪುನರ್ವಸು, ಆಶ್ಲೇಷಾ, ಮಘಾ ಈ ನಾಲ್ಕರೊಳು ಗ್ರಹಣವಾದರೆ ಮಹಾರಾಜಮಕ್ಕುಂ ಸಕಲ

ಧಾನ್ಯಂಗಳು ಮುಂದಣ ಸಾಗರಪಂಚಮಿಯಿಂದ ಮೂರು ತಿಂಗಳು ಮಾರಗಂ ರಸವರ್ಗಂಗಳು ಅಲ್ಲಿಗಲ್ಲಿಗೆ ಪುಟ್ಟಗಂ ಸಕಲ ಮನುಜರಿಗೆ ರುಜಯುಕ್ಕುಂ ಪಶುಗಳಿಗೆ ಲಯಮುಕ್ಕುಂ ಅರಸುಗಳು ಸತ್ಯಗೆಟ್ಟು ನಡಿವರು.

# ಭಾರತಹುಣ್ಣಿವೆಯ ಫಲ

**ಭಾರತಹುಣ್ಣಿವೆಯ ದಿನ** ಮಹಾನಕ್ಷತ್ರ ಶ್ರವಣ ನಿತ್ಯನಕ್ಷತ್ರ ಆಶ್ಲೇಷಾ ಬಂದರೆ ಮುಂಗಾರಿಮಳಿಯಾಗಿ ಕೃತ್ತಿಕೆಯಮಳಿಯಾಗಿ ಸಮಸ್ತ ಧಾನ್ಯಂಗಳು ಬೆಳಗಂ ಸಸಿಗಳು ನಲಗಿ, ನೆಲ್ಲು ಮೊದಲಾಗಿ ಹದಿನೆಂಟು ಧಾನ್ಯ ಹುಲುಸಾಗಿ ಬೆಳಗಂ, ಹಿಂಗಾರಿ ಕಂಡಲಮಂಡಲ ಆಗಿ ಸಮಧಾತು ಆಗಿ ಮಾರಗಂ ರಸವರ್ಗಂಗಳು, ಅಡಿಕೆ, ಮೆಣಸು, ಅಲ್ಲಾ, ಅರಿಷಣ ಮುಂತಾಗಿ ಮಾರಗಂ ಪಶುಗಳು ಸೂಸ್ಸರಿಯಾಗಿ ಕರಿಗಂ ಮನುಷ್ಯರಿಗೆ ಶಿಶುಗಳಿಗೆ ಸುಖಮುಕ್ಕುಂ ಅರಸುಗಳು ಸ್ವಸ್ತದಲ್ಲಿ ಇರುವರು; ಸಕಲರು ಸತ್ಯ ದಲ್ಲಿ ನಡಿವರು; ಹತ್ತಿ ಬಡಫಲ; ಜವಳಿ ರೋಮಶಾಟಿಗಳು ಮಾರಗಂ ಮತ್ತೆ ಆ ಹುಣ್ಣಿವೆಯ ದಿನ ಪುಷ್ಯ, ಮಘಾ, ಹುಬ್ಬಿ ಈ ಮೂರು ಬಂದು ಗ್ರಹಣವಾದರೆ ಮಹಾ ಉತ್ಪತ್ಯಂಗಳು ಪುಟ್ಟಗಂ ಸಕಲ ಧಾನ್ಯಂಗಳು ಮಾರಗಂ ರಸವರ್ಗಂಗಳು, ಸಕಲ ಗಡಚು ದ್ರವ್ಯಂಗಳು ಮಾರಗಂ ಕರಿ ಮೃಗಗಳು ನಾನಾ ಪಕ್ಷಿಗಳು ಸುಖದಲ್ಲಿಹರು.

# ಹೋಳೀಹುಣ್ಣಿವೆಯ ಫಲ

**ಹೋಳೀಹುಣ್ಣಿವೆಯ ದಿನ** ಮಹಾನಕ್ಷತ್ರ ಶತತಾರಾ, ನಿತ್ಯನಕ್ಷತ್ರ ಉತ್ರಾ ಬಂದರೆ ಮುಂದಣ ವರುಷಕ್ಕೆ ಮುಂಗಾರಿಗಳು ಕಂಡಲಮಂಡಲ ವಕ್ಕುಂ ಸಕಲ ಧಾನ್ಯ ಸಮಧಾತು ಆಗಿ ಮಾರಗಂ ಅಡಿಕೆ, ಮೆಣಸು, ಹಿಪ್ಪಲಿ, ಅರಿಷಣ, ಹುಳ್ಳಿ, ಜವಳಿ, ಕಂಬಳಿ ಮುಂತಾಗಿ ರಸವರ್ಗಂಗಳು ಮಾರಗಂ ಪಶುಗಳು ಸೂಸ್ಸರಿಯಾಗಿ ಕರಿಗಂ ಸಕಲ ಮನುಜರಿಗೆ ಶಿಶುಗಳಿಗೆ ಸುಖಮುಕ್ಕುಂ ಮತ್ತೆ ಆ ಹುಣ್ಣಿವೆಯ ದಿನ ಮಘಾ, ಹುಬ್ಬಾ, ಹಸ್ತ, ಚಿತ್ತಿ ಈ ನಾಲ್ಕು ಬಂದು ಗ್ರಹಣವಾದರೆ ಮಹಾ ರಾಜಕ ಪುಟ್ಟಗಂ ಸಕಲ

ಪ್ರಜಗಳಿಗೆ ಜಯವಿಲ್ಲ ಲಯುಮುಕ್ಕುಂ ಶಿಶುಗಳು ಜಯುಮುಕ್ಕುಂ ಎಲೆಬಳ್ಳಿ, ಕಬ್ಬು, ಅರಿಷಣ ಇನಿತು ನಲಿಗಿ ಕಡಿಯಲ್ಲಿ ರೋಗಹಾದು ಕೆಡಗಂ ಸಕಲರು ಗತಿಗೆಟ್ಟು ನಡಿವರು.



# ಮುಗಿಲು ಮೋಡದ ಬಂಣ

## ನೋಡುವ ಕ್ರಮ

### (ಅಷ್ಟತ್ತದಿಗಿ ಅಮಾಸಿ ಆದಮೇಲೆ)

ಕೊಂಕಣ ಕಡೆ ಮೋಡ, ಹನಿ ತೋರದೆ ಮೋಡ ಏಳಬೇಕು; ಆಲದ ಮರದ ಪ್ರಕಾರ ಮೂಡಲು ಪಡವಲು ಸುತ್ತಿ ಕಾಣಿಸಿದರೆ ಆ ವರುಷ ಜಲ ದೇವತಿ ಎನಿಸುವರು, ಆದು ಉತ್ತಮ ಮೋಡ ಎನಿಸುವದು; **ಆ ವರುಷ ಸುಕ್ಕಾಲವು.** ರಾಜ್ಯಕ್ಕೆ ಸುಖವೆನಿಸುವದು; ಧಾನ್ಯ ಅಗ್ಗವಾಗುವದು.

## ಕನಿಷ್ಟ ಮೋಡದ ಗುಣ

ಹೊಗೆಗೊಂಡ ಹಾಗೆ ನಗರಗತ್ತಲೆ ಯಿಲಣದ ಹಾಗೆ, ಹೊಗೆಹಾಗೆ ಹೂಗಿಗೊಂಡು ವುಬ್ಬಿ ತೋರದ ಉಷ್ಣ, ತೋರದೆ ತಂಗಾಳಿ ಬೀಸುತ್ತಾ ಇದ್ದರೆ ಮಳಯಿಲ್ಲವು, ಬಲವಿಲ್ಲವು. ಬೆಳಿಗೆ ಬಲವಿಲ್ಲ, ಆ ವರುಷ ಮಳೆಗಾಲ ಮಧ್ಯಮವು, ರಾಜ್ಯಕ್ಕೆ ದೊಡ್ಡ ಪ್ರಜೆಗೆ ಸುಖವಿಲ್ಲ. ಈ ಪ್ರಕಾರಮಂ ನೋಡಿ ಧಾನ್ಯ ತೃಣವಂ ಕೆಡಸಲಾಗದು, ಸಂಗ್ರಹಮಾಡಿಕೊಂಡು ಬಚ್ಚಿಡುವದು.

## ಹನ್ನೆರಡು ತಿಂಗಳ ಮಳೆಯ ಸೂಚನೆ

**ಮಾರ್ಗಶಿರ** ಶುದ್ಧ ದಶಮಿಯಲ್ಲಿ ರೇವತಿ ಕೂಡಿ ಬರಲು ಆ ದಿವಸ ಮೋಡ ಬಂದರೆ, ಮಳೆಹನೆ ತೋರಲು **ವೈಶಾಖಮಾಸದೊಳು** ಮಳೆ ಯುಕ್ಕುಂ **ಮಾರ್ಗಶಿರ** ಬಹುಳ ತ್ರಯೋದಶಿ ದಿನ ಮೋಡ, ಮಿಂಚು, ಹನಿ

ತೋರಲು **ವೈಶಾಖಮಾಸ**ದೊಳು ಮಳೆಯಕ್ಕುಂ. **ಪುಷ್ಯ** ಶುದ್ಧ ದ್ವಾದಶಿಯೊಳು ರೋಹಿಣಿ ಕೂಡಿ ಬಂದಾಗ್ಗೆ ಮಳೆಮೋಡ ಬಂದು ಆನಿಯ ಹಾಗೆ ಇರಲು **ಜ್ಯೇಷ್ಠಮಾಸ**ದೊಳು ಮಳೆಯಕ್ಕುಂ. **ಪುಷ್ಯಮಾಸ** ಬಹುಳದಹುಣ್ಣಿವೆಯ ದಿನ ರಾತ್ರಿಯಲ್ಲಿ ಮನಿಯ ಮಾಳಗಿಯ ಮೇಲೆ ನೆಲ ಸಾರಿಸಿ ಅದರ ಮೇಲೆ ಹತ್ತಿ ಹಂವಿ ಮಂದು ಗೇಣ ಅಗಲವಾಗಿ ಅರಳಿಯ ಹರವಿ ಅದರ ಮೇಲೆ ಅಡವಿಯದೊಂದು ಗುಂಡು ಅಗಲಾದ್ದು ಒಳಿತಾಗಿ ತೊಳೆದು ಅದರ ಮೇಲೆ ಇಟ್ಟು ಅಷ್ಟವಿಧಾರ್ಚನೆಯಿಂದ ಪೂಜೆಯನ್ನು ಮಾಡಿ ಮರುದಿವಸ ಸೂರ್ಯೋದಯವಾಗುವಾಗ್ಗೆ ಮುನ್ನ ನೋಡಲು ಅರಳಿಯ ಮೇಲೆ ಬಹಳ ಇಬ್ಬನ್ನಿ ಕುಳಿತರೆ ಮುಂದೆ ಮಳೆಗಾಲವಕ್ಕುಂ ಮುಂಗಾರಿ ಹಿಕ್ಕಟ್ಟಿನ ಮಳೆ ಬಹಳವಕ್ಕುಂ ಇಬ್ಬನ್ನಿ ಸ್ವಲ್ಪ ಇದ್ದರೆ ಸ್ವಲುವೆಂದರಿವದು, ಇಬ್ಬನ್ನಿ ಏನೂ ಇಲ್ಲದಿದ್ದರೆ ಮಳೆಯಿಲ್ಲವು ಎಂದು ತಿಳಿಯುವದು, ಇಬ್ಬನ್ನಿ ನಾಲ್ಕೂ ಕಡೆಗೆ ಸುತ್ತು ಬೀಳಲು ಎಲ್ಲ ದಿಕ್ಕಿಗೂ ಮಳೆಯಕ್ಕುಂ ಅದರೊಳು ಯಾವ ದಿಕ್ಕಿಗೆ ಇಬ್ಬನ್ನಿ ಇಲ್ಲದಿರಲು ಆ ದಿಕ್ಕಿನ ದೇಶಕ್ಕೆ ಮಳೆಯಿಲ್ಲವೆಂದು ಬಲ್ಲವರು ಹೇಳುವರು. ಮತ್ತು **ಮಾಘ** ಬಹುಳ ಅಷ್ಟಮಿ ದಿನ ಮೋಡ ಬಂದರೆ **ಆಷಾಢಮಾಸ**ದೊಳು ಮಳೆಯಕ್ಕುಂ, ಆ ದಿನ ದೊಡ್ಡ ಬಂದ ಹನಿಯಾದರೆ ಮಳೆ ಮಧ್ಯಮವಕ್ಕುಂ. **ಫಾಲ್ಗುಣ** ಬಹುಳ ದಶಮಿಯಲ್ಲಿ ಉತ್ರಾಷಾಢ ನಕ್ಷತ್ರ ಕೂಡಿ ಬಂದರೆ ಮೋಡ, ಮಳೆ, ಹನಿ, ಮಿಂಚು, ಧ್ವನಿ ತೋರಿದರೆ ಮುಂದೆ **ಶ್ರಾವಣಮಾಸ**ದೊಳು ಮಳೆಯಾಗಿ ಸುಖವಕ್ಕುಂ. ಮತ್ತು **ಚೈತ್ರ** ಶುದ್ಧ ಪ್ರತಿಪದೆಯ ದಿವಸ ಸೂರ್ಯೋದಯವಾಗುವಾಗ್ಗೆ ಮೋಡವಿಲ್ಲದೆ ನಿರ್ಮಲವಾಗಿ ಉದಯವಾಗಲು ಆ ದಿವಸ ಪೂರ್ವ, ಪಶ್ಚಿಮ, ಉತ್ತರದಿಕ್ಕು ಈ ದಿಕ್ಕಿನಲ್ಲಿ ಶುದ್ಧವಾಗಿ ಘಾಳಿ ಬೀಸಲು ಮುಂದೆ ಮಳೆಗಾಲವಾಗಿ ಬೆಳೆಸು ಬೆಳೆವದು, ಸುಕಾಲವಾಗುವದು; ಆ ಪ್ರತಿಪದೆಯ ದಿನ ಸಂಜೆಯ ಮುಂದೆ ಮೋಡಬಂದು ಮಳೆಬರಲು ಮುಂದೆ ಮಹಾಸುಖವು. **ವೈಶಾಖ** ಬಹುಳ ಚೌತಿಯ ದಿನ ಮೂಲಾನಕ್ಷತ್ರ ಕೂಡಿ ಬಂದರೆ, ಮಾಡ, ಮಿಂಚು, ಮಳೆ ತೋರಲು ಮುಂದೆ **ಭಾದ್ರಪದಮಾಸ**ದೊಳು ಮಳೆಯಕ್ಕುಂ. **ಜ್ಯೇಷ್ಠ** ಶುದ್ಧ ದ್ವಾದಶಿ, ತ್ರಯೋದಶಿ, ಚತುರ್ದಶಿ, ಹುಣ್ಣಿವೆ ಈ ನಾಲ್ಕು ದಿನಗಳಲ್ಲಿ ಮೋಡಬಂದರೆ, ಮಳೆಬರಲು, ಮಿಂಚು ಮುಂದೆ **ಆಷಾಢ, ಶ್ರಾವಣ,**

**ಭಾದ್ರಪದ, ಆಶ್ವಿನ** ಈ ನಾಲ್ಕು ತಿಂಗಳೊಳಗೆ ಮಳೆಯುಕ್ಕುಂ. ದ್ವಾದಶಿ ದಿನ ಮಳೆ ಮೋಡ ತೋರದಿರಲು **ಆಷಾಢಮಾಸ**ದೊಳು ಮಳೆಯಿಲ್ಲ. ತ್ರಯೋದಶಿಯಲ್ಲಿ ಮೋಡ ತೋಳದಿರಲು **ಆಶ್ವಿನಮಾಸ**ದೊಳು ಮಳೆಯಿಲ್ಲ. **ಆಷಾಢ** ಬಹುಳ ದಶಮಿಯಲ್ಲಿ ರೋಹಿಣಿ ಒಳಿತಾಗಿ ಕೂಡಿಬರಲು ಮುಂದೆ ಮಳೆಗಳು ಒಳಿತಾಗಿ ಆದಾವು; ದಶಮಿ ರೋಹಿಣಿ ಸ್ವಲ್ಪ ಕೂಡಿದರೆ ಸ್ವಲ್ಪ ಮಳೆಯೆಂದು ಅರಿವುದು. **ಶ್ರಾವಣ** ಶುದ್ಧ ಪ್ರತಿಪದ, ದ್ವಿತಿಯಾ, ತೃತಿಯಾ, ಚತುರ್ಥಿ ದಿನ ಹನಿಯಾದರೆ ಒಳಿತು; ಆಗದಿದ್ದರೆ ಮಳೆ ಮಧ್ಯಮ. ಬಹುಳ ಸಪ್ತಮಿ ದಿವಸ ಧನಿಷ್ಠಾ ಬಂದು ಮಳೆ ಮೋಡ ತೋರಲು **ಭಾದ್ರಪದ**ಕ್ಕೆ ಮಳೆಯಿಲ್ಲ. ಹುಣ್ಣಿವೆ ದಿನ ಮಳೆ ಮೋಡ ತೋರಿದರೆ ಮುಂದೆ **ಆಶ್ವಿನ ಮಾಸ**ದೊಳು ಮಳೆಯಿಲ್ಲ. ಈ ನಾಲ್ಕು ಮೋಡ, ಮಿಂಚು ತೋರಲು ನಾಲ್ಕು ತಿಂಗಳು ಮಳೆಯಾಹದು; ಈ ನಾಲ್ಕು ದಿನ ತೋರದಿದ್ದರೆ ಮಳೆ ಯಿಲ್ಲ ಇದು ಸಿದ್ಧಾಂತವು.

# ಸೂರ್ಯಚಂದ್ರರಿಗೆ ಕಣಕಟ್ಟಿದ ಫಲ

ಮಳೆಯಾಗಿ ಸುಕಾಲಮಕ್ಕುಂ ತಪ್ಪಲರಿಯದು **ಭಾದ್ರಪದ** ಪ್ರತಿಪದೆ ಯಿಂದ ಚತುರ್ಥಿಯವರೆಗೆ ಮಳೆ, ಮಿಂಚು, ಗರ್ಜನಿಯಾದರೆ ಮಳೆ ಬೆಳೆ ಲೇಸಕ್ಕುಂ **ಭಾದ್ರಪದ** ಶುದ್ಧ ಅನಂತನಹುಣ್ಣಿವೆಯ ದಿನ ಮಳೆ ಬಾರದಿದ್ದರೆ ಒಳಿತು; ಆ ದಿನ ಮಳೆಬಂದರೆ ಹಲವುಬಗೆಯಿಂದ ಬೆಳಸು ಕೆಡಗಂ. ಮತ್ತು **ಆಶ್ವಿನ** ಶುದ್ಧ ನವಮಿ, ದಶಮಿಯಲ್ಲಿ ಮಳೆ, ಮೋಡ, ಮಿಂಚು ಆಗಲು ಮಳೆಬೆಳೆಯಿಂದ ಸುಖವು. **ಆಶ್ವಿನ** ಬಹುಳ ತ್ರಯೋದಶಿ ದಿನ ಮೋಡ ಬರಲು ಮಳೆಯಾಗಿ ಬೆಳಸು ಬೆಳೆವವು; ಆ ದಿನ ಏನೂ ತೋರದಿರಲು ದನ ಕರಗಳು ಮಾರಿಕೊಂಡು ಧಾನ್ಯಸಂಗ್ರಹ ಮಾಡಿಕೊಂಬುವದು; ಇಲ್ಲವೆ ಇದ್ದ ಠಾವು ಬಿಟ್ಟು ಹೋಗುವದು. **ಕಾರ್ತಿಕ** ಶುದ್ಧ ಪಂಚಮಿ, ದಶಮಿ, ಹುಣ್ಣಿವೆ ದಿನ ಏನಾದರು ನಿರ್ಗತವು ಉತ್ಪತ್ಯಕಂಡರೆ ರಾಜಕಾರ್ಯ ಅರಸುಗಳಿಗೆ ಭಯ, ಬೆಳಸಿಗೆ ಜಯವಿಲ್ಲ. ಮಳೆ ನೋಡುವ ದಿವಸ ಮಳೆ ಯಾದರೆ ಮಹಾ ಲೇಸು. ಇನ್ನು ಹನ್ನೆರಡು ತಿಂಗಳು ನೋಡುತ್ತಿಗಲು ಸಾಧ್ಯವಾಹುದು.

# ಚಂದ್ರಸೂರ್ಯರಿಗೆ ಕಣಕಟ್ಟಿದರೆ

ಆ ಬಂಣ ಹಸರು ತೋರಲು ಮಳೆಗಾಲ ಅಲ್ಪ, ಲೋಕಕ್ಕೆ ಭಯ ಮತ್ತು ಮಳೆಗಾಲದಲ್ಲಿ ಮೋಡ ಕೂಡಿರಲು ಚಂದ್ರಸೂರ್ಯರಿಗೆ ಕಣಕಟ್ಟಿದರೆ ಮೂರು ದಿನಕ್ಕೆ ಮಳೆ ಆಹುದು ಲೇಸು, ಇಲ್ಲದಿದ್ದರೆ ಮಧ್ಯಮ; ಧಾನ್ಯ ಪ್ರಿಯವಾಹದು. ಮತ್ತು ಚಂದ್ರಸೂರ್ಯರಿಗೆ ಎರಡು, ಮೂರು, ನಾಲ್ಕು ಸುತ್ತು ಕಣಕಟ್ಟಿದರೆ ಮಳೆ ಬಹಳವಾದೀತು. ಅರಸುಗಳಿಗೆ ಪ್ರಾಣಭಯ. ಮತ್ತು ಕಟ್ಟಿದ ಕಣವು ಯಾವ ದಿಕ್ಕಿಗೆ ಒಡೆವದು ಅಥವಾ ಹರಿಯಲು ಆ ದಿಕ್ಕಿನ ಅರಸಿನ ಮಕ್ಕಳು ಸಾವರು. ಕಟ್ಟಿದ ಕಣದೊಳಗೆ ಒಂದೆರಡು ಗ್ರಹಂಗಳು ಇರಲು ಲೋಕಕ್ಕೆ ರಾಜ್ಯಕ್ಕೆ ಪೀಡಾಕಾರಮುಕ್ಕಂ. ಆ ಕಣ ದೊಳಗೆ ಬೃಹಸ್ಪತಿ, ಶನಿ, ಮಂಗಳನಿರಲು ಭೂಮಿಗೆ ಜಯವಿಲ್ಲಾ. ಪ್ರಜ ಗಳಿಗೆ ಮಹಾ ಕಷ್ಟ ತೋರ್ವದು. ಅರಸುಗಳು ಕಾಳಗದಿಂದ ಮಡಿವರು. ಶುಕ್ರನಿದ್ದರೆ ಬ್ಯಾಡರ ಬಲವು ಕೆಡುವದು ಆ ಕಣದೊಳಗೆ ಬೃಹಸ್ಪತಿಯಿರಲು ಬ್ರಾಹ್ಮಣರಿಗೆ ಪೀಡೆ ಶುಕ್ರನಿರಲು ಮಳೆಯಿಲ್ಲವು ಬುಧನಿದ್ದರೆ ಹಸು ಮಕ್ಕಳಿಗೆ ಪೀಡಾಕಾರಕವು ಮಂಗಳನಿದ್ದರೆ ಲೋಕಕ್ಕೆ ಅಪಜಯ. ಶನಿ ಯಿದ್ದರೆ ಅರಸುಗಳ ಸಂಹಾರ. ಕಣವಿಳ್ಳಾದರೆ ಮಳೆಯುಕ್ಕಂ. ಕಣ ಸಮೀ ಪಕ್ಕೆ ಕಟ್ಟಲು ತಡೆದು ಮಳೆಯಾಹದು ಕಣ ದೂರ ಕಟ್ಟಲು ಸಮೀಪಕ್ಕೆ ಮಳೆಯಾಹದು. ನಿರ್ಮಲವಾಗಿ ಕಟ್ಟಲು ಲೇಸಾಗಿ ಆಹುದು

# ಕಾಮನಬಿಲ್ಲು ಮೂಡುವ ಲಕ್ಷಣ

ಕಾಮನಬಿಲ್ಲು ಬಿಳದು, ಕಪ್ಪು, ಹಸರು, ಹಳದಿ, ಕೆಂಪು ಐದು ಬಣ್ಣ ಒಳಿತಾಗಿ ಮೂಡಿದರೆ, ಕೂಡಲೆ ಮೋಡವೆರಗಿ ಕಾಮನಬಿಲ್ಲು ಮೂಡಿದರೆ ಮಳೆಗಾಲ ಒಳಿತಾಗಿ ಆಹದು. ಆ ಕಾಮನಬಿಲ್ಲು ಹರಕಾಗಿ ಇದ್ದರೆ ಹೀನವು ಬಣ್ಣವಾಗಿದ್ದರೆ ಒಂದು ತಿಂಗಳು ಮಳೆ ಹೋಹದು. ಸೂರ್ಯ ಉದಯ ವಾಗುವಾಗ್ಗೆ ಸಿಡಿಲು ಯರಗಲು, ಮೋಡ ಹುಳಕಬೀಳಲು, ಕೋಲ್ಮಿಂಚು ಮಿಂಚಲು, ಪಡವಲು ಕಾಮನಬಿಲ್ಲು ಮೂಡಲು ರಾಜ್ಯಕ್ಕೆ ಕೇಡು. ಅರಸು ಗಳಿಗೆ ಕೇಡು. ಮಳೆಬರುವಾಗ ಮೂಡಲು ಕಾಮನಬಿಲ್ಲು ಮೂಡಿದರೆ ಮಳೆ

ಹೋಹದು. ಮಳೆಯಿಲ್ಲದಾಗ್ಗೆ ಕಾಮನಬಿಲ್ಲು ಮೂಡಿದರೆ ಮಳೆಬಾಹದು. ಬಿಳದು, ಹಸರು, ಹಳದಿ, ಕೆಂಪು ಈ ನಾಲ್ಕು ಬಣ್ಣವಾಗಲು, ಹಳದಿಯಿಲ್ಲದೆ ಇಂದ್ರಚಾಪ ಮೂಡಲು ಬ್ರಾಹ್ಮಣ ಮೊದಲಾದ ನಾಲ್ಕು ಜಾತಿಗೆ ಮರಣ ತಪ್ಪದು. ಮಳೆ ಬಹಳ ಹತ್ತಿರಲು, ಮಿಂಚು ಬಹಳವಾದರೆ, ಪಡವಲು ಕಾಮನಬಿಲ್ಲು ಮೂಡಿದರೆ ಮಳೆ ನಿಲ್ಲುವದು. ಜ್ಯೇಷ್ಠ, ಆಷಾಢ, ಶ್ರಾವಣ ಈ ಮೂರು ಮಾಸ ಒಳಿತಾಗಿ ಕಾಮನಬಿಲ್ಲು ಮೂಡಿದರೆ ಮೂರು ತಿಂಗಳು ಮಳೆಯಿಲ್ಲ. ಮುಂದೆ ಭಾದ್ರಪದ, ಆಶ್ವಿನಮಾಸದೊಳು ಪಡವಲು ಕಾಮನ ಬಿಲ್ಲು ಮೂಡಿದರೆ ರಾಜಕಾರ್ಯವಾಹದು. ಇನ್ನು ಪ್ರತಿ ಸೂರ್ಯ ಮೂಡಲು ಮಳೆ ಬಹಳವಾಹದು. ಟೆಂಕಲು ಪ್ರತಿ ಸೂರ್ಯ ಮೂಡಲು ಮಳೆ ಮಧ್ಯಮು. ಗಾಳಿ ಬೀಸುವದು ಇವು ಮೊದಲ ಜಾವದಲ್ಲಿ, ಎರಡನೇ ಜಾವದಲ್ಲಿ, ಬ್ಯಾರೆ ದೊಡ್ಡ ಮೂರನೇ ಜಾವದಲ್ಲಿ, ರಾಜಕವು ನಾಲ್ಕನೇ ಜಾವದಲ್ಲಿ ಮೂಡಲು ಟೆಂಕಲು ಮೂಡಿದರೆ ಅರಸುಗಳಿಗೆ ಪ್ರಾಣಭಯಮಕ್ಕುಂ.

## ಮಿಂಚು ಮಿಂಚಿದ ಲಕ್ಷಣ

ಮಿಂಚು ಕಪಿಲವರ್ಣವಾದರೆ ಘಾಳಿ ಬೀಸುವದು. ಮಿಂಚಿನ ಬಣ್ಣ ಕೆಂಪಾದರೆ ಭಾರೀಮೋಡ, ಲೋಕಕ್ಕೆ ಪೀಡಾಕಾರಕವು. ಮಿಂಚಿನವರ್ಣ ಭಂಗಾರದವರ್ಣವಾದರೆ ಮಳೆ ಬಹಳವು. ಶಿರಷದ ಹೂವು ಆದರ ವರ್ಣ ವಾದರೆ ಚಂದ್ರನ ಬಣ್ಣದಲ್ಲಿ ಮಿಂಚಲು ಮಳೆಗಾಲ ಬಹಳವಕ್ಕುಂ ನೇತ್ರ ಬಣ್ಣ, ಹಸರಿನಬಣ್ಣ, ಹೊಗೆಬಣ್ಣ ಮಳೆ ಆಗುವದು. ಮತ್ತು ಅಗ್ನಿದಿಕ್ಕಿಗೆ ದಕ್ಷಿಣ, ನೈಋತ್ಯ, ವಾಯುವ್ಯ ಈ ನಾಲ್ಕು ದಿಕ್ಕಿನಲ್ಲಿ ಮಿಂಚಲು ಮಳೆಯಿಲ್ಲ. ಕನಿಷ್ಟ ಪಶ್ಚಿಮು, ಉತ್ತರ, ಈಶಾನ್ಯ, ಪೂರ್ವ ಈ ನಾಲ್ಕು ದಿಕ್ಕಿನಲ್ಲಿ ಮಿಂಚಲು ಲೇಸಾಗಿ ಮಳೆಯಾಹದು.

## ಜೋಕಮಾರನ ಲಕ್ಷಣ

ಮುಂದೆ ಹದಿನೈದು ದಿನ, ಹಿಂದೆ ಹದಿನೈದು ದಿನ ಮಳೆ ಹುಟ್ಟದ್ದಕ್ಕೆ ಕೊಂಕಣಕ್ಕೆ ಹೋಗಿ ಧಾನ್ಯ ಸಂಗ್ರಹಮಾಡಿಕೊಂಬುವದು. ಅಶ್ವಿನಿ ಮಳೆ ಗರ್ಜಿಸಿದರೆ ಹೀನ. ಮುಂದೆ ಮೃಗಶಿರ ಆಗದಿದ್ದರೆ ಹೀನ. ಆರಿದ್ರಾ, ಪುನ

ರ್ವಸು ಸಂಡಿನೊಳು ಮಳೆ ಬಾರದಿದ್ದರೆ ಕೊಂಕಣಕ್ಕೆ ಹೋಗಿ ವಾಸಮಾಡಿ ಕೊಂಬುವದು.

## ಸೂರ್ಯಚಂದ್ರರಿಗೆ ಕಣಕಟ್ಟಿದ ಫಲ

ವಿಶಾಖಾನಕ್ಷತ್ರದಲ್ಲಿ ಕಣಕಟ್ಟಿದರೆ ಮೂಡಲು ಕೆಡುವದು. ಮಾಘ ಮಾಸದಲ್ಲಿ ಸೂರ್ಯಚಂದ್ರರಿಗೆ ಕಣಕಟ್ಟಿದರೆ ಮಳೆ ಸಂಪೂರ್ಣ. ಏಕಕಾಲಕ್ಕೆ ಕಟ್ಟಿದರೆ ಅರಸುಗಳಿಗೆ ಕೇಡು. ಪ್ರಜಗಳು ರಟ್ಟೆಮತದ ಸೂಚನೆ ವಿವೇಕದಿಂದ ನೋಡಿ ಕಾಣಲು ಫಲವಾಹದು, ಇಲ್ಲವೆ ತಿಳಿಯದು. ಇನ್ನು ಉಗಾದಿ ದಿನ ಪಟಾಕ್ಷಿ ಹಚ್ಚಿ ದೊಡ್ಡ ನಸುಕಿನಲ್ಲಿ ಮಾಳಗಿ ಹತ್ತಿರಬೇಕು. ಘಾಳಿಯನ್ನು ಜಾವದಾಗ ಯಾವ ಕಡೆಯ ಘಾಳಿ ಬಿಟ್ಟಿತು, ಆ ಪಟ್ಟಿವ ಪೂರ್ವದಿಕ್ಕಿನಲ್ಲಿ ಪಟವಾದರೆ ರಾಜವಾದೀತು. ಅದು ತಪ್ಪಿದರೆ ಇಲಿ ಬಿದ್ದು ಭಯವು. ಅದು ತಪ್ಪಿದರೆ ತೋಳೆಹುಳವು ತಿಂಬುವವು. ಅದು ತಪ್ಪಿದರೆ ಹಾವು ಬಿದ್ದಾವು. ಪಶ್ಚಿಮದಿಕ್ಕಿನ ಪಟ್ಟವಾದರೆ ಒಂದು ದಿಕ್ಕಿನಲ್ಲಿ ರಾಜ್ಯವೆಲ್ಲ ಮರಾಕಟ್ಟಿ ಹೆಡಗಿ ತೆಗೆದುಕೊಂಡು ಬೆಳದ ರಾಜ್ಯಕ್ಕೆ ಹೋಗುವದು. ಉತ್ತರದಿಕ್ಕಿನಲ್ಲಿ ಪಟ್ಟವಾದರೆ ಮುಂಚು ಇಲ್ಲವು, ಹಿಂಚು ಇಲ್ಲವು. ಬಹಳ ದಿಕ್ಕಿನಲ್ಲಿ ಪಟವಾದರೆ ಬ್ರಹಸ್ಪತಿ ವುಗಾದಿ ದಿನದಲ್ಲಿ ಪಟವಾದರೆ ರಾಜ್ಯಕ್ಕೆ ಒಳಿತು, ಪಟವಾಗದಿದ್ದರೆ ದುರ್ಭಿಕ್ಷ. ಈಶಾನ್ಯದಿಕ್ಕಿನಲ್ಲಿ ಪಟವಾದರೆ ಅಷ್ಟ ದಿಕ್ಕಿಗೆ ಸಂತೋಷವು. ಆಗ್ನೇಯದಿಕ್ಕಿನಲ್ಲಿ ಪಟವಾದರೆ ಜೋಕೆಮಾಡಿಕೊಂಡು ಇರುವದು. ವಾಯವ್ಯದಿಕ್ಕಿನಲ್ಲಿ ಪಟವಾದರೆ ಮಳೆಬೆಳೆ ಅಲ್ಪ, ಘಾಳಿ ಬಹಳ. ನೈಋತ್ಯದಲ್ಲಿ ಪಟವಾದರೆ ಮಳೆಬೆಳೆ ಅಲ್ಪವು. ವುಗಾದಿ ದಿನ ಉದಯಕ್ಕೆ ೩ ಜಾವದ ತನಕ ನೋಡಿ ಬಲ್ಲ ಪ್ರಾಮಾಣಿಕರು ಅರಿವುದು.

## ಕಾಮನಬಿಲ್ಲು ಮೂಡಿದ ಫಲ

ಚೈತ್ರದಿ ತ್ರಿಷು ಮಾಸೇಷು ಅಶ್ವಿನ್ಯಾದಿ ಸಪ್ತತಾರಕಂ ।
ಪಶ್ಚಿಮ ಇಂದ್ರಚಾಪಸ್ಯ ಅನವೃಷ್ಟಿನಿಃ ಫಲಂ ಭವಂ ॥

ಚೈತ್ರ ಮೊದಲಾದ ಮೂರು ತಿಂಗಳೊಳಗೆ ಅಶ್ವಿನಿ ಮೊದಲಾದ ಏಳು ನಕ್ಷತ್ರದವಳಗೆ ಪಡವಲು ಕಾಮನಬಿಲ್ಲು ಮೂಡಿದರೆ ಮಳೆ ಬಡವು, ತೃಣವು ಜೋಕೆ ಮಾಡುವದು.

ಆಷಾಢಾದಿ ತ್ರಿಷು ಮಾಸೇಷು ಆರಿದ್ರಾದಿ ಸಪ್ತ ತಾರಕಂ ।
ಪಶ್ಚಿಮ ಇಂದ್ರಚಾಪಸ್ಯ ಶುಭಯೋಗ ವೃಷ್ಟಿ ಸುಫಲಂ ಭವಂ ॥

ಆಷಾಢ ಮೊದಲಾದ ಮೂರು ತಿಂಗಳೊಳಗೆ ಆರಿದ್ರಾ ಕಡಿಯಾಗಿ ಏಳು ನಕ್ಷತ್ರದವಳಗೆ ಪಡವಲು ಕಾಮನಬಿಲ್ಲು ಮೂಡಿದರೆ ಮಳೆಯಾದೀತು. ಬೆಳೆಯಾದೀತು, ಭೂಮಿಗೆ ಸುಖವಕ್ಕುಂ.

ಆಶ್ವಿಜಾದಿ ತ್ರಿಷು ಮಾಸೇಷು ಸತ್ವಾದಿ ಸಪ್ತ ತಾರಕಂ ।
ಪಶ್ಚಿಮ ಇಂದ್ರಚಾಪಸ್ಯ ಫಲರ್ಗಪ್ರವೇಷ್ಟಿತಂ ॥

ಆಶ್ವಿನಾದಿ ಮೂರು ತಿಂಗಳೊಳಗೆ ಸ್ವಾತ್ಯಾದಿ ಏಳು ನಕ್ಷತ್ರದವಳಗೆ ಪಡವಲು ಕಾಮನಬಿಲ್ಲು ಮೂಡಿದರೆ ದವಸ ಅರ್ಗನಾದೀತು, ಮೂಡಲು ಮೂಡಿದರೆ ಪ್ರಿಯುವೆಂದು ಹೇಳುವದು.

ಪುಷ್ಯಮೊದಲಾದಿ ತ್ರಿಷು ಮಾಸೇಷು ಶ್ರವಣಾದಿ ಸಪ್ತ ತಾರಕಂ ।
ಪಶ್ಚಿಮ ಇಂದ್ರಚಾಪಸ್ಯ ನೃಪಕಾರ್ಯ ಪ್ರಜಕೆಡಗಂ ॥

ಪುಷ್ಯ ಮೊದಲಾದ ಮೂರು ತಿಂಗಳೊಳಗೆ ಶ್ರವಣಾನಕ್ಷತ್ರದ ವಳಗೆ ಪಡವಲು ಕಾಮನಬಿಲ್ಲು ಮೂಡಿದರೆ ರಾಜಕಾರ್ಯ ಹೇಳುವದು, ರಾಜಕ ದಿಂದ ಪ್ರಜಗಳು ಕೆಡುವರು.

# ಚಂದ್ರಮೂಡುವ ಫಲ

ಸಂಕ್ರಮಾತ್ರಿ ಆದಿಯಾಗಿ ಎಂಡು ತಿಂಗಳು ದಕ್ಷಿಣಕ್ಕೆ, ಮತ್ತು ತಿಂಗಳು ಎರಡು ಸಮ ಇಗಬೇಕು. ಎಂಟು ತಿಂಗಳು ಉತ್ತರಕ್ಕೆ ಎದ್ದಿರ ಬೇಕು, ಇದರೊಳು ಪಲ್ಲಟವಾಗಿ ಚಂದ್ರನಕೂಡ ಮೂಡಿದರ ಲೋಕಕ್ಕೆ ವಿಪ ರೀತ, ಸರ್ವರಿಗೂ ಹೀನ, ಧಾರಣಿ ಹೆಚ್ಚುವದು, ಮಳೆಗಾಲ ಬಡವು, ತೃಣದವಸ ಜೋಕೆಮಾಡುವದು ಕಾವಳ ಮಿಂಚಿನ ಫಲ– ಹಗೋಲು ಹುಳ ಕುದ್ದುವ ಕೇತಯಂ ದಿನ ನಕ್ಷತ್ರದಲ್ಲಿ ವಿಪರೀತ ನಕ್ಷತ್ರ ಮೂಡಿದರೆ ಲೊಕಕ್ಕೆ ವಿಪರೀತ ತೋರೀತು. ರಾಜಕ, ದೈವಕ ತೋರೀತು. ಅಖ್ಯಾಸುಗೆ ಯೊಳ ಆಕಾಶ ಗುಡಿಗಟ್ಟಿದರೆ ಧೊರೆಗಳು ಮಡಿವರು, ಪ್ರಜಗಳು ಕೆಡುವರು, ಬಹಳ ಮಳೆಯಾದರೆ ಹೀನ. ಏನೂ ಮಳೆಯಿಲ್ಲದಿದ್ದರೆ ಹೀನ. ಇಲಿ ಹೆಚ್ಚಿದರೆ ಹೀನ. ಇವರ ಸೂಚನೆ ದವಸಪ್ರಿಯುವೆಂದರಿವುದು.

# ಗ್ರಹಣದ ಫಲ

ಶ್ರಾವಣ ಮಾಘಂ ಫಾಲ್ಗುಣ ಚೈತ್ರ ಜ್ಯೇಷ್ಠಂ ಚ ಯೋಗಂ ।
ಸೂರ್ಯಚಂದ್ರಗ್ರಹಣ ರಾಜಕದ್ವೈವಕಥಾಃ ॥

ಶ್ರಾವಣ ನಕ್ಷತ್ರವಾಗಲಿ, ಮಾಘ ಫಾಲ್ಗುಣ ಚೈತ್ರ ಜ್ಯೇಷ್ಠಮಾಸದೊಳಗಾಗಿ ಸೂರ್ಯ, ಚಂದ್ರಗ್ರಹಣವಾದರೆ ರಾಜಕ ದೈವಕ ಮಹಾಭೀತಿ. ಪ್ರಜಗಳು ನೆಲದಟ್ಟಿ ಹೋಗುವರು.

# ಗ್ರಹಚಕ್ರದ ಫಲ

ವೃಷಭರಾಶಿ, ತುಲಾರಾಶಿ, ವೃಶ್ಚಿಕರಾಶಿ, ಸಿಂಹರಾಶಿ, ಮೀನರಾಶಿ ಈ ಐದು ಗ್ರಹರಾಶಿಗಳು ಮೇಘದಲ್ಲಿ ಕೂಡಿದರೆ ಧರೆಗೆ ಮಳೆಯಿಲ್ಲ; ಇವನ್ನು ಕೇಳಿಕೊಂಡು ಮೇವು, ಜೋಳವನ್ನು ಜೋಕೆಮಾಡುವದು. ಈ ಗ್ರಹ ಕೂಡಿದರೆ ದುರ್ಭಿಕ್ಷ.

**ಗ್ರಹಯೋಗ—** ಬುಧ, ಗುರು, ಶುಕ್ರ ಚಂದ್ರ ಈ ನಾಲ್ವರು ಕೂಡಿದರೆ ಮಳೆಗಾಲವಾದೀತು.

# ಅಮರ್ಧನ ಅಮಾಸಿಯ ಫಲ

ಆದಿತ್ಯವಾರ ಬಂದರೆ ಮೊದಲ ಧಾರಣೆಗಿಂತ ಇಮ್ಮಡಿ ಹೆಚ್ಚುವದು. ಶನಿವಾರ ಬಂದರೆ ಮೊದಲ ಧಾರಣೆಗಿಂತ ಮೂರು ಇಮ್ಮಡಿ ಹೆಚ್ಚುವದು; ಮತ್ತೆ ಇಳಿಯುವದು.

# ಮರಗಳ ಮೇಲೆ ಹೇಳುವ ಫಲ

ಚಂದನವು ಕಾತೊರಗಲು ಆ ವರುಷ ಸುಕ್ಕಾಲವು. ಅಣಿಲೇಮರ, ಸೋಕೇಮರ, ಅತ್ತಿಮರ, ಶಿರಷದಮರ, ಸಂಪಿಗಿಮರ, ಉಗನಿಬಳ್ಳಿ, ಆಲದ ಮರ, ಹಲಸಿನಮರ, ದವನ, ಮುಡಿವಾಳಾ ಇಷ್ಟು ಕಾಯಿಕಾ ತೊರಗಲು ಆ ವರುಷ ಸುಕ್ಕಾಲವು. ಮುತ್ತುಗದಮರ ಅದಕ್ಕೆ ಮೂರು ಬೀಜ ಆ

ಕಾಯಿ ಮೊದಲ ತೋಟಿನಲ್ಲಿ ಬೀಜವಿದ್ದರೆ ಮೊದಲ ಮಳೆ ಆದಾವು; ನಡವಣಿ ಬೀಜವಿದ್ದರೆ ನಡವಣಿ ಮಳೆಯಾದಾವು; ಕಡಿಯ ಬೀಜವಿದ್ದರೆ ಕಡಿಯ ಮಳೆಯಾದಾವು. ಕಾಯಿಗೆ ಮೊದಲಿಂದ ಮೂರು ಬೀಜಗಳು, ಮೊದಲಿಂದ ಮಳೆಗಾಲ ಸುಕ್ಕಾಲವಕ್ಕುಂ. ಇನ್ನು ಚ ರ್ಚಿಬೊಬ್ಬಲಿ ಕಾತೊಗರಲು ಆ ವರುಷ ಮಳೆ ಬಡವು. ಗುಳ್ಳದ ಹೂವು, ಹಾವು ಮೆಕ್ಕಿಗಳು ಕಾತೋರಗಲು ಆ ವರುಷ ಮಳೆ ಬಡವು. ಮಾವು ಕಾತೊರಗಲು ಆ ವರುಷ ಗೋದಿ ಬೆಳದಾವು. ಹುಣಸಿ ಕಾತೊರಗಲು ಆ ವರುಷ ನೆಲ್ಲು ಬೆಳದಾವು, ಕರೇ ಕಬ್ಬು ಬೆಳದಾವು. ಗೋದಿ ಅಗಸಿ ಬಿತ್ತುವದಕ್ಕೆ ಕುರುವು ನೋಡುವ ಕ್ರಮ— ಹಳ್ಳದ ದಂಡೆಯಲ್ಲಿದ್ದ ಕೂಡ ಕರಕಿಗೆ ಅವು ರೋಗವಿಲ್ಲದಿದ್ದರೆ ಅಗಸಿ ಗೋದಿಗೆ ಸುಕ್ಕಾಲವು ಯೆಂದರಿವುದು.

## ಆರಿದ್ರಾ ಮಿಂಚಿನ ಫಲ

ಆರಿದ್ರಾಮಳೆ ಕೂಡಿದಾಗಲೆ ಸಾಧಿಸಿ ನೋಡಲು ಮೂಡಲ ಮಿಂಚು ಮಿಂಚಿದರೆ ಆ ವರುಷ ಬಿತ್ತು ಬೆಳೆ ಸಂಪೂರ್ಣ. ಅಗ್ನಿಯಲ್ಲಿ ಮಿಂಚಿದರೆ ಮಳೆ ಬಡವು; ಸಸಿಗೆ ಉಷ್ಣ; ಬೆಳೆ ಮಧ್ಯಮ. ಟೆಂಕಲು ಮಿಂಚಿದರೆ ಆ ವರುಷ ಬೆಳಸು ಬೆಳೆಯದು ಕೆಡಸುವದು. ನೈಋತ್ಯದಲ್ಲಿ ಮಿಂಚಿದರೆ ಬರಿಯ ಮೋಡ ಮಳೆ ಮಧ್ಯಮ, ಬೆಳಸು ಬಡವು ಪಡವಲ ಮಿಂಚಿದರೆ ಆ ವರುಷ ಮಳೆ ಉಕೃಷ್ಟ, ಮಳೆಯಾಗಿ ಬೆಳಸು ನೀರಗಿಚ್ಚುಕೊಂಡು ಫಲ ಅರ್ಧ ಹುಲ್ಲು ಬೆಳದಾವು, ಪಶು ಕರಿದಾವು ವಾಯುವ್ಯದಲ್ಲಿ ಮಿಂಚಿದರೆ ಆ ವರುಷ ಬಿರಿಘಾಳಿಯಾಗಿ ಮಳೆ ಬಡವು, ಬಂದ ಮಳೆ ಹಾರವು, ಧಾನ್ಯ ತೃಣವಿದ್ದರೆ ಲೇಸು. ಬಡಗಲು ಮಿಂಚಿದರೆ ಆ ವರುಷ ಸುಕ್ಕಾಲವು. ಈಶಾನ್ಯದಲ್ಲಿ ಮಿಂಚಿದರೆ ಆವರುಷ ಬ್ಯಾಗ ಮಳೆಗಾಲ, ಮುಂದಣ ಬೆಳೆಗೆ ಜಯ; ಹಿಂಗಾರಿ ಜೋಳ ಬೆಳೆದಾವು. ಆರಿದ್ರಾ ಹೋಗುತ್ತ ಗರ್ಜನೆಯಾದರೆ ಹೀನ; ಮುಂದೆ ಹಸ್ತಾಮಳೆಯ ತನಕ ಮಳೆ ಮಧ್ಯಮ. ಹಸ್ತದ ಮಳೆಯಲ್ಲಿ ಮೊದಲ ಚರಣದಲ್ಲಿ ಏಳು ನಕ್ಷತ್ರದೊಳಗೆ **ಕಾಮನಬಿಲ್ಲು ಕೊರಡು** ಮೂಡಿದರೆ ಅದರ ಕ್ರಮ— ಈಶಾನ್ಯ ಮೂಡಲು ಅಗ್ನಿ ಈ ಮೂರು ದಿಕ್ಕಿನಲ್ಲ ಕಾಮನಬಿಲ್ಲು ಕೊರಡು ಮೂಡಿದರೆ ಧಾನ್ಯ ಪ್ರಿಯ

ಹಿಂಗಾರಿ ಮಳೆಯಿಲ್ಲ ಯದರು ಪಶ್ಚಿಮ ಪಡವಲು ಕಾಮನಬಿಲ್ಲು ಕೊರಡು ಮೂಡಿದರೆ ಪರಿಹರ ಮಳಿಯಾದೀತೆಂದು ತಿಳಿವದು. ಆರಿದ್ರಾಮಳಿ ಗರ್ಜಿಸಿ ಹೋದರೆ ಹಸ್ತದಮಳೆಯಲ್ಲಿ ಮೂಡಲು, ಅಗ್ನಿ, ಈಶಾನ್ಯದಲ್ಲಿ ಕಾಮನಬಿಲ್ಲು ಕೊರಡು ಮೂಡಿದರೆ ದವಸ ಇಮ್ಮಡಿಮುಮ್ಮಡಿ ನಾಲ್ಕುಯಿಮ್ಮಡಿ ಮಾರು ಹೆಚ್ಚುವದು.

## ಮೊದಲ ಮಿಂಚಿನ ಬಣ್ಣದ ಫಲ

ಗುಳ್ಳದಹೂವಿನ ಬಣ್ಣದಹಾಗೆ, ಕೇರಹೂವಿನಹಾಗೆ, ಕೊಳಕ ಹುಲ್ಲು ಸುಟ್ಟಹೊಗಿಯಹಾಗೆ, ಇಷ್ಟು ಬಿಳದು ಇಲ್ಲದೆ ಮಿಂಚಿದರೆ ಕೆಟ್ಟಮಿಂಚು ಎಂದು ತಿಳಿವದು, ಆ ವರುಷ ಮಳೆಗಾಲ ಮಧ್ಯಮ, ಕೆಟ್ಟ ಕಾಲಕ್ಕೆ ಕೆಟ್ಟ ಮಿಂಚು.

## ಒಳ್ಳೇ ಮಿಂಚಿನ ಲಕ್ಷಣ

ಮೊದಲ ಮಿಂಚು ಉತ್ತುಮ. ಹೊಂಬಣ್ಣದಹಾಗೆ, ಹೊಂಬ ಹಿತ್ತಾಳಿಯ ಹಾಗೆ, ಹೊಂದಾವರಿ ಕುಸುಮದ ಹಾಗೆ, ಕುಸುಬಿಯ ಹೂವಿನ ಹಾಗೆ, ಭಂಗಾರದ ಹರಿವಾಣದ ಹಾಗೆ, ಬೆಳಗಿ ಸೂರ್ಯನ ಪ್ರಭೆಗೆ ತೋರಿದ ಹಾಗೆ ಮೊದಲು ಮಿಂಚುಹೊಳೆದು ಮಿಂಚಿದರೆ ಆ ವರುಷ ಮಳೆಗಾಲ ನಡೆಸೀತು, ಸರ್ವಧಾನ್ಯ ಬೆಳೆದೀತು.

## ಸಂಕ್ರಮಣ ಕೂಡಿದ ನಕ್ಷತ್ರ ಫಲ

ಅಶ್ವಿನಿ, ಭರಣಿ, ಕೃತ್ತಿಕಾ ಈ ನಕ್ಷತ್ರದಲ್ಲಿ ವಿಪರೀತಗಳ ಕಂಡರೆ ದುರ್ಭಿಕ್ಷ, ಅಗ್ನಿಭಯ. ಸಂಕ್ರಾಂತಿ ಬಂದರೆ ಮಧ್ಯಸ್ತ. ರೋಹಿಣಿಯಲ್ಲಿ ಪ್ರತಿ ಸೂರ್ಯ, ಧೂಮಕೇತು ದೋರಿದರೆ ದುರ್ಭಿಕ್ಷ, ಸಂಕ್ರಮಣ ಬಂದರೆ ಧಾನ್ಯ ಅಗ್ಗವೆಂದು ಹೇಳುವದು. ಮೃಗಶಿರದಲ್ಲಿ ಪ್ರತಿ ಸೂರ್ಯ, ಕಾಮನ ಬಿಲ್ಲು ಮೂಡಿದರೆ ಮಳೆ ಬಹಳ, ಸಂಕ್ರಮಣ ಬಂದರೆ ಸುಭಿಕ್ಷ. ಆರಿದ್ರೆಯಲ್ಲಿ ಸಂಕ್ರಮಣವಾದರೆ ಸುಭಿಕ್ಷ; ಈ ನಕ್ಷತ್ರದಲ್ಲಿ ಚಂದ್ರ ಪ್ರವೇಶವಾದರೆ ಪ್ರತಿ ಸೂರ್ಯ ಮೂಡಿದರೆ ಸುಭಿಕ್ಷ, ಮಳೆಬೆಳೆ. ಪುನರ್ವಸುವಿನಲ್ಲಿ ಹೀನಕ್ಕೆ ಸೇರಿದರೆ ಥಳಿ-ವುರಿ ಲೋಕಕ್ಕೆ ಬಹಳ; ಕಾಮನಬಿಲ್ಲು ಮೂಡಿದರೆ

ಉತ್ಪತ್ತ್ಯಂಗಳ ಕಂಡರೆ ಹೀನ; ಸಂಕ್ರಮಣ ಬಂದರೆ ಸುಭಿಕ್ಷವಾದೀತು. ಪುಷ್ಯದಲ್ಲಿ ಸಂಕ್ರಮಣ ಬಂದರೆ ಸುಭಿಕ್ಷ; ಕಾಮನಬಿಲ್ಲು ಮೂಡಿದರೆ ಪ್ರತಿ ಸೂರ್ಯನ ಕಂಡರೆ ಮಳೆಯಾದೀತು; ಉತ್ಪಾತ್ಯಕಂಡರೆ ದುರ್ಭಿಕ್ಷ. ಆಶ್ಲೇಷ ದಲ್ಲಿ ಉತ್ಪತ್ಯಕಂಡರೆ ಸುಭಿಕ್ಷ; ಸಂಕ್ರಮಣ ಬಂದರೆ ಮಧ್ಯಸ್ತ. ಮಘ ಯಲ್ಲಿ ಧೂಮಕೇತು ಹಗಲೇ ಚಿಕ್ಕಿ ಕಂಡರೆ ದುರ್ಭಿಕ್ಷ.

# ದ್ಯೂತ ಲಕ್ಷಣ

ಊರಿಗೆ ಹೋದವರು ಎಂದು ಬಂದಾರೆಂದು ಕೇಳಲು ತನ್ನ ನೆರಳು ತಾನು ಅಳಕೊಂಡು ಅಡಿ ಇಮ್ಮಡಿಮಾಡಿ ಹದಿಮೂರುವೊಡಗೂಡಿ ಎಂಟ ರಿಂದ ಭಾಗಿಸಲು ಉಳಿದ ಶೇಷದ ಫಲವು— ೧ ಉಳಿದರೆ ತಡದು ಬಂದಾನು, ೨ ಉಳಿದರೆ ಪ್ರೈಣವಾಗುತ್ತಿದ್ದಾನು, ೩ ಉಳಿದರೆ ಬೇಗ ಬಂದಾನು, ೪ ಉಳಿ ದರೆ ಘಳಿಗ್ಗೆ ಬಂದಾನು, ೫ ಉಳಿದರೆ ವ್ಯಾಧಿಯಲ್ಲಿದ್ದಾನು, ೬ ಉಳಿದರೆ ತಿರುಗಿ ಹೋದನು, ೭ ಉಳಿದರೆ ಇಸ್ಥಲ್ಲಿ ಇದ್ದಾನು, ೮ ಭಾಗ ಹರಿದರೆ ಸರಿಯಾಗಿ ಹೋದನು ಎಂದು ಅರಿವುದು.

# ಮನುಷ್ಯರಿಗೆ ಬೇನೆಬಂದ ನಕ್ಷತ್ರದಿಂದ ದೋಷ ಹೇಳುವ ಕ್ರಮ

**ತಿಥಿ, ವಾರ, ನಕ್ಷತ್ರ ಬಂದ ಲಕ್ಷಣ—** ನಕ್ಷತ್ರ ಆಶ್ಲೇಷ, ಶತ ತಾರ, ಆರಿದ್ರಾ, ಸ್ವಾತಿ, ಮೂಲ, ಪೂರ್ವಾಷಾಢಾ, ಪೂರ್ವಾಭಾದ್ರಪದ, ಮಘಾ, ವಿಶಾಖಾ, ಅನುರಾಧಾ ಈ ನಕ್ಷತ್ರದ ಪೈಕಿ ಒಂದು ನಕ್ಷತ್ರ. ಇನ್ನು ವಾರ— ಮಂಗಳವಾರ, ಶನಿವಾರ, ಆದಿತ್ಯವಾರ ಈ ವಾರಗಳ ಪೈಕಿ ಒಂದು ವಾರ. ಇನ್ನು ತಿಥಿ— ಪಾಡ್ಯ, ಚವತಿ, ಷಷ್ಟಿ, ದ್ವಾದಸಿ ಇವು ಮೂರು ಕೂಡಿ ಬಂದ ದಿವಸ ಮನುಷ್ಯರಿಗೆ ಬೇನೆ ಬಂದರೆ ಹರಿಹರ ಬ್ರಹ್ಮಾದಿಗಳಿಗೂ ಅಪಮೃತ್ಯು ತಪ್ಪಲರಿಯದು. ವಾರ ಒಂದೇ ಕೂಡಿದರೆ ೮ ದಿವಸ, ತಿಥಿ ಒಂದೇ ಕೂಡಿದರೆ ೧೫ ದಿವಸ, ನಕ್ಷತ್ರ ಒಂದೇ ಕೂಡಿದಗೆ ೨೭ ದಿವಸಕ್ಕೆ ಶಾಂತಿಯಕ್ಕುಂ.

# ಸುಭಿಕ್ಷ, ದುರ್ಭಿಕ್ಷ ದಿನಗಳು

ಜ್ಯೇಷ್ಠ ಶುದ್ಧ ಪ್ರತಿಪದಾ ಸೋಮವಾರ ಬಂದರೆ ಸುಕ್ಷಾಲ, ಮಂಗಳ ವಾರ ಬಂದರೆ ಪ್ರಜಾನಾಶ, ಬುಧವಾರ ಗುರುವಾರ ಶುಕ್ರವಾರ ಬಂದರೆ ಸಾಧಾರಣ, ಶನಿವಾರ ಬಂದರೆ ರಾಜಕಾರ್ಯಾವಾಹದು, ಆದಿತ್ಯವಾರ ಬಂದರೆ ದುರ್ಭಿಕ್ಷ ಬೀಳುವದು. ಆಷಾಢ ಶುದ್ಧ ನವಮಿ ಸ್ವಾತಿ ಕೂಡಿ ಮಳೆಯಾದರೆ ಬೀಜವನುಳಿಸಿಕೊಳ್ಳಬೇಕು. ಆಷಾಢ ಶುದ್ಧ ಪಂಚಮಿ ಶನಿವಾರ ಬಂದರೆ, ಶ್ರಾವಣ ಶುದ್ಧ ಪಂಚಮಿ ಆದಿತ್ಯವಾರ ಬಂದರೆ, ಭಾದ್ರಪದ ಶುದ್ಧ ಪಂಚಮಿ ಮಂಗಳವಾರ ಬಂದರೆ ಅಥವಾ ಇವು ಮೂರೂ ಕೂಡ ಬಂದರೆ ದುರ್ಭಿಕ್ಷವು.

# ಸ್ವರತತ್ವ ಚಿಂತಾಮಣಿ ಫಲ

ಶ್ರೀ ಪರಮೇಶ್ವರನನ್ನು ಪಾರ್ವತಿಯು ಕೇಳುತ್ತಾಳೆ— ಹೇ ದೇವೀ, ಈ ದೇಹದೊಳಗೆ ಯಪ್ಪತ್ತೆರಡು ಸಾವಿರ ನಾಡಿಯುಂಟು. ಹಾಗು ದೇಹ ದಲ್ಲಿ ಸಪ್ತಸಮುದ್ರ, ಸಪ್ತದ್ವೀಪ, ನವಗ್ರಹ, ಇಪ್ಪತ್ತೇಳು ನಕ್ಷತ್ರಗಳು ಈ ದೇಹದಲ್ಲೇ ಉಂಟು. ಆದ ಕಾರಣ ನಿನಗೆ ಪೇಳುವೆನು. ಕೇಳು, ಈ ಲೋಕದ ಪ್ರಾಣಿಗಳಿಗೆ ಅಸಾಧ್ಯ ಆದ ಕಾರಣ ಕಾಣಬಾಹನಾಡಿ ೨೪, ಅದ ರೊಳು ಕಾಣಬಾಹಂತವು ೧೦, ಅದರೊಳು ಕಾಣಬಾಹಂತವು ೩, ಅದ ರೊಳು ಕಾಣಬಾಹಂತವು ೨, ಎಡದಮೂಗಿನ ಹೊಳ್ಳಿಯ ಲ್ಲಿ ನಡವನಾಡಿ ಇಡ ನೆಂಬ ಹೆಸರು. ಬಲದಭಾಗದ ಮೂಗಿನ ಹೊಳ್ಳಿಯಲ್ಲಿ ನಡವ ಸ್ವರಾಪಿಂಗಳ ನೆಂಬ ಹೆಸರು. ಸುಸುಮ್ನನೆಂಬ ನಾಡಿಯು ಬ್ರಹ್ಮರಂಧ್ರದಲ್ಲಿಹದು. ಉಳಿದವರಿಗೆ ಅಗೋಚರ. ಪರಂಜ್ಯೋತಿ, ದಿವ್ಯಸ್ವರೂಪ, ದಿವ್ಯಯೋಗಿ ಗಳಿಗೆ, ದಿವ್ಯಜ್ಞಾನಿಗಳಿಗೆ ಕಾಣಬಹುದು; ಉಳಿದವರಿಗೆ ಅಸಾಧ್ಯ. ಇಡ ೧, ಪಿಂಗಳ ೨, ಸುಸುಮ್ನಾ ೩, ಗಾಂಧಾರಿ ೪, ಮಾಸ್ತಿ ೫, ಜವ್ಮೋಕ ೬, ಲಂಬುಸಿಕೆ ೭, ಕುಹಕ ೮, ಸಂಕೀರ್ಣ ೯, ಶರದಾರ ೧೦ ಇಂತಿ ದಶ ನಾಡಿಯ ಹೆಸರುಗಳು. ಆ ನಾಡಿಯೊಳಗೆ ಹಿಂದೆ ಹೇಳಿದ ಹತ್ತು ನಾಡಿಗಳು. ಮತ್ತು ವಾಯುವಿನಲ್ಲಿ ವರ್ತಿಸುವವು ಇನ್ನು ದಶವಾಯು ಭೇದವಂ ಪೇಳ್ವೆ.

ಪ್ರಾಣ ೧, ಪಾನ ೨, ವ್ಯಾನ ೩, ಉದಾನ ೪, ಸಮಾನ ೫, ನಾಗ ೬, ಕೂರ್ಮ ೭, ಕಿಕಿಲ ೮, ದೇವತ್ತ ೯, ಧನಂಜಯ ೧೦ ಇಂತಿ ದಶವಾಯು ವಿನ ಪೆಸರು. ಇನ್ನು ದಶವಾಯು ವರ್ತಿಸುವ ಸ್ಥಾನಂಗಳು. ಈಶ್ವರನು ಪಾರ್ವತಿದೇವಿಗೆ ದೇಹಸ್ಥಾನದ ನಾಡಿ ಜ್ಞಾನವನ್ನು, ದಶವಾಯುವಿನ ಸ್ಥಾನ ವನ್ನು, ನಾಮವನ್ನು ನಿರೂಪಿಸುತಿರ್ದ ಹಿಂದೆ ಹೇಳಿದ ಹತ್ತು ವಾಯುವಿನ ಸ್ಥಾನ ನಿರ್ಣಯಂಗಳ ಮುಂದೆ ಹೇಳಿ ಹತ್ತು ವಾಯು ಇದ್ದ ನಿರ್ಣಯ ಆವಾತ ಬಲ್ಲ ಆತನೇ ದಿವ್ಯಯೋಗಿ ಅವ ಬಲ್ಲವ. ಅವ ತನ್ನ ತಾ ತಿಳಿಯ ಬಲ್ಲವ. ಆತ ನನ್ನ ಸ್ವರೂಪ ಕೇಳು ಪಾರ್ವತಿ, ಎಡದಭಾಗದ ಹೊಳ್ಳಿಯಲ್ಲಿ ವರ್ತಿಸುವ ಸ್ವರಾಚಂದ್ರನು ಬಲದಭಾಗದ ಮೂಗಿನ ಹೊಳ್ಳಿಯಲ್ಲಿ ವರ್ತಿ ಸುವ ಸೂರ್ಯನು ಎರಡರ ಮಧ್ಯದಲ್ಲಿ ಶಿವರೂಪವಾಗಿ ನಡುವನಾಡಿ ಸುಸುಮ್ನ ನೆಂಬ ನಾಡಿ, ಅದರ ಹೆಸರು ಗುರುಶಿಷ್ಯ ಉಪದೇಶವನ್ನು ಪಾರ್ವತಿಗೆ ದೇಹದ ಜ್ಞಾನವನ್ನು ನಿರೂಪಿಸಿದನು. ಜ್ಯೋತಿಷ್ಯದಲ್ಲಿ ಇದ್ದದ್ದು ಈ ದೇಹ ದಲ್ಲಿ ಉಂಟು.

## ೨೭ ನಕ್ಷತ್ರಂಗಳು

ಸಪ್ತದ್ವೀಪ, ಸಪ್ತಸಮುದ್ರ, ನವಗ್ರಹಂಗಳು, ನಾಲ್ಕು ವೇದಗಳು, ಹದಿನೆಂಟು ಜ್ಯಾತಿ; ಬ್ರಹ್ಮ, ವಿಷ್ಣು, ಮಹೇಶ್ವರ, ರುದ್ರ ಈ ದೇವತೆಗಳು; ಪೃಥ್ವಿ, ಆಕಾಶ, ಸೂರ್ಯ, ಚಂದ್ರ, ತಾರೆಗಳು, ಅಷ್ಟದಿಕ್ಪಾಲಕರು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ಜಾತಿಗಳು.

## ಬ್ರಹ್ಮಸ್ವರೂಪ

ಗೌಪ್ಯದಲ್ಲಿ ಉಸರದೆ ಇರಲು ಅವ ಯೆನ್ನ ಸ್ವರೂಪನು. ಇವ ತೋರಿಸಿ ಕೊಂಡು ಗರ್ವಿಕಿಯಾಗಿ ಗುರವಿಂಗೆ ಉದಾಸೀನಮಾಡಿ ಧಿಕ್ಕರಿಸಿ ನುಡಿವವನು ಆತ ಕಲಿತ ಜ್ಞಾನನಲ್ಲವು. ಪುರಾಣಗಳು ಹೇಳಿದ ಪಾಪಂಗ ಳೊಳಗೆ ಭೋಜನವಾಹನು. ಲೇಸಾಗಿ ಶಿಷ್ಯ ಉಪದೇಶಮಾಡಲು ಅಷ್ಟಮಾ ಸಿದ್ಧಿಯಕ್ಕುಂ. ಗೌಪ್ಯದಲ್ಲಿ ಇದ್ದು ಸುಖಿಯಾಹನು.

# ಸಂವತ್ಸರ ನೋಡುವ ಕ್ರಮ
# ವರುಷ ವರುಷಕ್ಕೆ ಸಂವತ್ಸರದಿಂದ ಮುಂದಿನ ಸಂವತ್ಸರಕ್ಕೆ ನೋಡುವ ಕ್ರಮ

**ಚೈತ್ರಮಾಸ ಶುದ್ಧ** ಉಗಾದಿ ಪಾಡ್ಯದದಿನ, ಬಿದಿಗಿದಿನ, ತದಗಿದಿನ ಈ ಮೂರು ದಿನ ನಿದ್ರಿಯಮಾಡಿ ಉದಯದಲ್ಲಿ ಏಳುವಾಗ ಚಂದ್ರಸ್ವರ ನಡಿಯಬೇಕು. ಒಂದು ದಿನಕ್ಕೆ ನಾಲ್ಕು ತಿಂಗಳದ ಫಲದ ಬಲಾ ಇಂತು ಮೂರು ದಿನಕ್ಕೆ ಹನ್ನೆರಡು ತಿಂಗಳ ಫಲ ಬಲವಾಹದು. ಆ ಮೂರು ದಿನದೊಳಗೆ ಯಾವ ದಿನ ಚಂದ್ರನಿಲ್ಲಾ ಆ ನಾಲ್ಕು ತಿಂಗಳೊಳಗೆ ಆತಗೆ ರೋಗ, ಹಾನಿ, ಭಯ ಪಾಡ್ಯದ ದಿನ ಚಂದ್ರನಿಲ್ಲದಿದ್ದರೆ ಮಹಾ ಹಾನಿಯಕ್ಕುಂ ಬಿದಿಗಿದಿನ ಚಂದ್ರನು ಕಾಣದಿದ್ದರೆ ಧನನಾಶವಕ್ಕುಂ. ತದಗಿ ದಿನ ಚಂದ್ರನು ಕಾಣದಿದ್ದರೆ ಮನಸ್ಸಿಗೆ ಮಹಾ ಭಯವು, ಸಂತಾಪ ಹುಟ್ಟುವದು ಈ ಮೂರು ದಿನ ಕಾಣದಿದ್ದರೆ ಮತ್ತೆ ಚೌತಿದಿನ ಚಂದ್ರನಿಲ್ಲದಿದ್ದರೆ ಆ ದಿನ ವಾರ ಸ್ವರಯಿಲ್ಲದಿದ್ದರೆ ಪ್ರಾಣದಂತ ನೆಂಟರಿಗೆ ಭಯವಾಹದು. ಪಂಚಮಿಯಲ್ಲಿ ವಾರ ಸ್ವರವಿಲ್ಲದಿದ್ದರೆ ಅರಸನಿಂದ ಹಾನಿಯಾಹದು. ಷಷ್ಠಿಯಲ್ಲಿ ವಾರ ಸ್ವರವಿಲ್ಲದಿದ್ದರೆ ತನ್ನ ದೇಶನ ಬಿಟ್ಟು ಹೋಹದು. ಸಪ್ತಮಿಯಲ್ಲಿ ವಾರ ಸ್ವರವಿಲ್ಲದಿದ್ದರೆ ತಾನು ಮಹಾ ರೋಗದಲ್ಲಿ ಬೀಳುವನು. ಅಷ್ಟಮಿಯಲ್ಲಿ ವಾರ ಸ್ವರವಿಲ್ಲದಿದ್ದರೆ ತನಗೆ ಮರಣ, ಹಾನಿ ಭಯವು. ಸೂರ್ಯನವಾರದಲ್ಲಿ ಚಂದ್ರನಿದ್ದರೆ ಮೂಡಲಾಗಲಿ, ಬಡಗಲಾಗಲಿ ಮೂರು ಹೆಜ್ಜೆ ಮುಂದಿಟ್ಟು ನಡಿವದು. ಎಡಗಾಲು ದೋಷ ಪರಿಹಾರ. ಚಂದ್ರನ ವಾರದಲ್ಲಿ ಸೂರ್ಯನಿದ್ದರೆ ಟೆಂಕಲಾಗಲಿ ಪಡುವಲಾಗಲಿ ಬಲದಕಾಲು ಮುಂದಿಟ್ಟು ಮೂರು ಹೆಜ್ಜೆ ನಡಿವದು, ದೋಷ ಪರಿಹಾರ, ಚಂದ್ರ ಬಲ ವಾಹನು.

## ಉಗಾದಿ ಪಾಡ್ಯದ ಉದಯದಲ್ಲಿ ತತ್ವ ನೋಡುವದು

ತೇಜತತ್ವ ಕಂಡರೆ ಆ ವರುಷ ಮಳೆಯಿಲ್ಲ. ವಾಯುತತ್ವ ಕಂಡರೆ ಆ ವರುಷ ರೋಗವಿಲ್ಲದೆ ಉಪದ್ರವಾಹದು; ಪೃಥ್ವಿತತ್ವ ಕಂಡರೆ ಆ ವರುಷ ಅಷ್ಟಮಾ ಸಿದ್ಧಿಯಕ್ಕುಂ, ಸುಖ ಸಂತೋಷವಾಹದು.

# ತನ್ನ ಜಯ ಅಪಜಯ ತಿಳಿಯುವದು

**ಉಗಾದಿ ಪಾಡ್ಯ ಮೊದಲಾಗಿ** ಮೂರು ದಿನ ಚಂದ್ರನ ಕಾಣದಿದ್ದರೆ ಮತ್ತೆ ಐದು ದಿನ ವಾರಸ್ವರವ ಕಾಣದಿದ್ದರೆ ತಾನು ಮುಂದಣ ಉಗಾದಿಯ ಕಾಣಲರಿಯನು, ಮರಣಂ ತಪ್ಪದು. ಅಮವಾಸಿ ಪಾಡ್ಯದ ದಿನ ಚಂದ್ರ ನಿದ್ದರೆ ಮುಂದಣ ಅಮಾಸಿತನಕ ಮಹಾ ಜಯವು. ಆ ದಿನ ಸೂರ್ಯನ ಕಂಡರೆ ಚಂದ್ರನ ಬಲವಮಾಡಿಕೊಳ್ಳುವದು. ಹುಣ್ಣಿವೆ ಪಾಡ್ಯದಲ್ಲಿ ಸೂರ್ಯನ ಕಂಡರೆ ಮುಂದಣ ಉಗಾದಿ ಅಮಾಸಿತನಕ ಮಹಾ ಜಯ, ಬಲವಕ್ಕುಂ. ಆ ದಿನ ಚಂದ್ರನ ಕಂಡರೆ ಸೂರ್ಯನ ಬಲವಮಾಡಿಕೊಳ್ಳುವದು.

# ವಾರಸ್ವರವ ನೋಡುವದು

ಆದಿತ್ಯವಾರ, ಬೃಹಸ್ಪತಿವಾರ, ಮಂಗಳವಾರ ಹಗಲು ಸೂರ್ಯನವು; ಇರುಳು ಚಂದ್ರನವು ಸೋಮವಾರ, ಬುಧವಾರ, ಶುಕ್ರವಾರ, ಶನಿವಾರ ಹಗಲು ಚಂದ್ರನ ದಿನ; ಇರುಳು ಸೂರ್ಯನ ದಿನ. ಚಂದ್ರವಾರ ಉದಯ ದಲ್ಲಿ ಏಳುವಾಗ ಚಂದ್ರನ ಕಾಣಬೇಕು; ಸೂರ್ಯನ ಕಂಡರೆ ಚಂದ್ರನ ಬಲವಮಾಡಿಕೊಳ್ಳಬೇಕು. ಸೂರ್ಯನವಾರ ಉದಯದಲ್ಲಿ ಏಳುವಾಗ ಸೂರ್ಯನಿರಬೇಕು; ಚಂದ್ರನ ಬಲವಮಾಡಿಕೊಳ್ಳಬೇಕು. ಸೂರ್ಯನ ವಾರದಲ್ಲಿ ಚಂದ್ರನಿದ್ದರೆ, ಚಂದ್ರನವಾರದಲ್ಲಿ ಸೂರ್ಯನಿದ್ದರೆ ಆ ದಿನ ರೋಗ, ಹಾನಿ ಭಯ, ಅಪಜಯ ಸೂರ್ಯನವಾರಾಗಲಿ, ಚಂದ್ರನವಾರಾಗಲಿ ಎರಡು ಸ್ವರ ಸರಿಯಾಗಿ ನಡೆಯಲು ಆ ದಿನ ಸುಖ-ದುಃಖ ಸರಿಯಾಗಿ ಇಹುದು. ಸೂರ್ಯನವಾರದಲ್ಲಿ ಸೂರ್ಯ, ಚಂದ್ರನವಾರದಲ್ಲಿ ಚಂದ್ರನಿದ್ದರೆ ಆ ದಿನ ಜಯಲಾಭವಾಹದು. ಉದಯದಲ್ಲಿ ಏಳುವಾಗ ಎರಡು ನಾಡಿ ಕಟ್ಟಿದರೆ ಅದು ಹೀನ. ಸೂರ್ಯನವಾರದಲ್ಲಿ ಚಂದ್ರನಿದ್ದರೆ, ಚಂದ್ರನವಾರದಲ್ಲಿ ಸೂರ್ಯ ನಿದ್ದರೆ ಬಲವ ಮಾಡಿಕೊಂಬುವದು.

ಅಮಾಸಿ, ಪಾಡ್ಯ, ಬಿದಿಗಿ, ತದಿಗಿ ಈ ಮೂರು ತಿಥಿ ಚಂದ್ರನವು, ಚೌತಿ, ಪಂಚಮಿ, ಷಷ್ಠಿ ಈ ಮೂರು ಸೂರ್ಯನವು; ಸಪ್ತಮಿ, ಅಷ್ಟಮಿ ನವಮಿ ಈ ಮೂರು ತಿಥಿ ಚಂದ್ರನವು; ದಶಮಿ, ಏಕಾದಶಿ, ದ್ವಾದಶಿ ಈ

ಮೂರು ತಿಥಿ ಸೂರ್ಯನವು; ತ್ರಯೋದಶಿ, ಚತುರ್ದಶಿ, ಹುಣ್ಣಿವೆ ಈ ಮೂರು ತಿಥಿ ಚಂದ್ರನವು. ಹುಣ್ಣಿವೆಯ ಪಾಡ್ಯ, ಬಿದಿಗಿ, ತದಿಗಿ ಈ ಮೂರು ತಿಥಿ ಸೂರ್ಯನವು; ಚೌತಿ, ಪಂಚಮಿ, ಷಷ್ಠಿ ಈ ಮೂರು ತಿಥಿ ಚಂದ್ರನವು; ಸಪ್ತಮಿ, ಅಷ್ಟಮಿ, ನವಮಿ ಈ ಮೂರು ತಿಥಿ ಸೂರ್ಯನವು; ದಶಮಿ, ಏಕಾದಶಿ, ದ್ವಾದಶಿ ಈ ಮೂರು ತಿಥಿ ಚಂದ್ರನವು; ತ್ರಯೋದಶಿ, ಚತುರ್ದಶಿ, ಅಮಾವಾಸಿ ಈ ಮೂರು ತಿಥಿ ಸೂರ್ಯನವು. ಈ ತೆರದಲ್ಲಿ ಅಮಾವಾಸಿ ಮರುದಿನ ಮೊದಲಾಗಿ ಮೂರು ಮೂರು ಹುಣ್ಣಿವೆತನಕ; ಹುಣ್ಣಿವೆಯಿಂದ ಅಮಾವಾಸಿತನಕ ಮೂರು ಮೂರು ಹಂಚಿಹಾಕಬೇಕು.

## ಮಾಸವ ತೆಗೆಯುವ ಕ್ರಮ

ಒಂದು ದಿನಕ್ಕೆ ಅರವತ್ತು ಘಳಿಗೆ, ಹನ್ನೆರಡು ಮಾಸಗಳಿಗೆ ಹಂಚಲಾಗಿ ಐದೈದು ಘಳಿಗೆ ಬಾಹದು. ಈ ಪ್ರಕಾರದಲ್ಲಿ ಒಂದು ದಿನದೊಳಗೆ ಹನ್ನೆರಡು ಮಾಸವತಾಹದು. ಚೈತ್ರ, ಮಾಘ, ಶ್ರಾವಣ, ಆಶ್ವಿನ, ಮಾರ್ಗಶಿರ, ಜ್ಯೇಷ್ಠ ಈ ಆರು ಮಾಸಗಳು ಸೂರ್ಯನವು; ವೈಶಾಖ, ಆಷಾಢ, ಭಾದ್ರಪದ, ಕಾರ್ತಿಕ, ಪುಷ್ಯ, ಫಾಲ್ಗುಣ ಈ ಆರು ಮಾಸಗಳು ಚಂದ್ರನವು. ಈ ಮಾಸಗಳ ತರುವಾಗ ಆ ನಡವ ನಾಲ್ಕುಟಾವನು. ಅವ ಮಾಸ ನಡೆದೀತು, ಆ ಮಾಸವನೆ ಸೂರ್ಯನ ಉದಯದಲ್ಲಿ ಮೊದಲುಮಾಡಿಕೊಂಡು ತರುವಾಯುಗೊಂಡು ನಡಸಬೇಕು.

## ಋತುವಿನ ಕ್ರಮ

ಋತುಗಳು ಐವತ್ತು ಘಳಿಗಿಯ ಮೇಲೆ ಹಂಚಿಹಾಕಲು ಹತ್ತು ಹತ್ತು ಘಳಿಗೆ ಬಾಹದು. ಒಂದು ದಿನಕ್ಕೆ ಅರವತ್ತು ಘಳಿಗಿಯನ್ನು ಹನ್ನೆರಡು ತಾಸಿಗೆ ಹಂಚಿಹಾಕಲು ಐದು ಘಳಿಗೆ ಬಾಹದು. ಈ ಪ್ರಕಾರದಲ್ಲಿ ರಾಶಿಗಳ ತರುವದು. ೧ ಮೇಷ, ೨ ಮಿಥುನ, ೩ ತುಲಾ, ೪ ಧನು, ೫ ಸಿಂಹ, ೬ ಕುಂಭ ಈ ಆರು ಸೂರ್ಯನವು; ೧ ವೃಷಭ, ೨ ಕರ್ಕಾಟಕ, ೩ ಕನ್ಯಾ, ೪ ವೃಶ್ಚಿಕ, ೫ ಮಕರ, ೬ ಮೀನರಾಶಿ ಚಂದ್ರನವು, ಇಂತು ಹನ್ನೆರಡು ಎಂದರಿದು ರಾಶಿಗಳು ನಡಿಸುವದಾಗಿ ಆಗ ಸೂರ್ಯ ಆವರಾಶಿಯಲ್ಲಿದ್ದಾನು

ಆ ದಿನದ ಉದಯದಲ್ಲಿ ಇಕ್ಕಿಕೊಂಡು ಮಿಕ್ಕರಾಶಿಯನ್ನು ಈ ಪ್ರಕಾರದಲ್ಲಿ ನಡಿಸುವದು.

## ನಕ್ಷತ್ರಗಳು

ಅಶ್ವಿನಿ, ಭರಣಿ, ಕೃತ್ತಿಕಾ, ರೋಹಿಣಿ, ಮೃಗಶಿರಾ, ಆರಿದ್ರಾ, ಪುನರ್ವಸು, ಪುಷ್ಯ, ಆಶ್ಲೇಷ, ಮಘ, ಹುಬ್ಬ, ಪೂರ್ವಾಭಾದ್ರಪದ, ಉತ್ತ್ರಾಭಾದ್ರಪದ, ಶ್ರವಣ, ಧನಿಷ್ಠ, ಉತ್ತ್ರಾಷಾಢ, ಶತತಾರ, ರೇವತಿ ಈ ಹದಿನೆಂಟು ಸೂರ್ಯನವು. ಉತ್ತ್ರಾ, ಹಸ್ತ, ಚಿತ್ತಿ, ಸ್ವಾತಿ, ವಿಶಾಖಾ, ಅನುರಾಧಾ, ಜ್ಯೇಷ್ಠ, ಪೂರ್ವಾಷಾಢ, ಮೂಲಾ ಈ ಒಂಭತ್ತು ಚಂದ್ರನವು. ಆದಿ ಮೊದಲು ಯೋಚಿಸಿಕೊಂಡು ತರುವಾಯಗೊಂಡು ಮಿಕ್ಕಿನ ನಕ್ಷತ್ರ ನಡಿಸುವದು. ಎರಡುವರಿ ಘಳಿಗೆ ಒಂದು ನಕ್ಷತ್ರ ಬಾಹದು ಐದು ಘಳಿಗಿಗೆ ಒಂದು, ೩ ತಿಥಿ. ಈ ಪ್ರಕಾರದಲ್ಲಿ ಒಂದು ಪಕ್ಷಕ್ಕೆ ೧೫ ತಿಥಿ ಬಾಹದು. ಆ ತಿಥಿಯನ್ನೆ ಉದಯದಲ್ಲಿ ಇಕ್ಕಿಕೊಂಡು ೧೫ ತಿಥಿಗಳ ತರುವಾಯಗೊಂಡು ತಪ್ಪದೆ ೧೨ ಮಾಸಗಳಿಗೆ ನಡಿಸುವದು. ಸಮ ತಿಥಿಗಳೆಲ್ಲ ಚಂದ್ರನವು. ಈ ವಿಷಮ ತಿಥಿಗಳೆಲ್ಲ ಸೂರ್ಯನವು.

## ವಾರಗಳು

ಆ ದಿನದ ವಾರವು ಉದಯದಲ್ಲಿ ಇಕ್ಕಿಕೊಂಡು ವಾರವನು ಹತ್ತು ಘಳಿಯ ಮೇಲೆ ನಡಿಸುವದು. ಆದಿತ್ಯವಾರ, ಮಂಗಳವಾರ, ಗುರುವಾರ ಹಗಲು ಸೂರ್ಯನವು. ಸೋಮವಾರ, ಬುಧುವಾರ, ಶುಕ್ರವಾರ, ಶನಿವಾರ ಇರುಳು ಸೂರ್ಯನವು. ಈ ಪ್ರಕಾಂದಲ್ಲಿ ಚಂದ್ರನ ಮಾಸ, ಚಂದ್ರನ ಪಕ್ಷ, ಚಂದ್ರನ ರಾಶಿ, ಚಂದ್ರನ ನಕ್ಷತ್ರ, ಚಂದ್ರನ ತಿಥಿ, ಚಂದ್ರನ ವಾರ ಕೂಡಿ ಚಂದ್ರಸ್ವರವಿದ್ದೆಡೆ ಯೋಗಿಣಿಯ ಬೆನ್ನ ಮಾಡಿ ಚಂದ್ರದಿಕ್ಕಿಗೆ ಬೆನ್ನ ಮಾಡಿಕೊಂಡು ಕಾದಿದೆಡೆಯು ದೇವತಿಗಳಾದೆಡೆಯು ಗೆಲ್ಲಬಹುದು. ಸೂರ್ಯಗೆ ಚಂದ್ರನೋಪಾದಿಯಲ್ಲಿ ಚಿಂತನಮಾಡಿಕೊಂಡು ಮುಂದಣ ಯೋಗಿಯ ಕಾದಿಸುವದು. ಇವೆಲ್ಲಾ ಕೂಡಿದ ವೇಳ್ಯವರಿತು ಕೂಡಿದ ಪ್ರಶ್ನೆ ಮಾಡಿದಡೆ ಹೇಳಿದ್ದು ತಪ್ಪದು. ಸಕಲ ಕಾರ್ಯಂಗಳೆಲ್ಲ ಚಂದ್ರಸೂರ್ಯರ ಯೋಗವನರಿದು ಮಾಡುವದು.

# ಚಂದ್ರಸೂರ್ಯರ ಫಲ

ಸಕಲವಿದ್ಯೆ ಕಲಿಯುವಾಗ, ಜೂಜನಾಡುವಾಗ, ವ್ಯವಹಾರ ಮಾಡುವಾಗ, ಬತ್ತಿಸಾ ಯುದ್ಧದ ಸಾಧನೆ ಮಾಡುವಾಗ, ಬಾಷ್ಪವಿದ್ಯಕ್ಕೆ ಯಾನನಾದರೆ, ಕಡಿವಾಗ, ಆನೆ ಕುದುರೆ ದಂಡಿಗೆ ಏರುವಾಗ, ಶಿಲ್ಪವಿದ್ಯಕ್ಕೆ ಲಿಪಿಗಳು ಬರುವಾಗ, ಕನ್ನ ಪೆಣ್ಣ ಸಂಗಕ್ಕೆ, ವಸ್ತ್ರಗಳ ಕೊಳ್ಳಲಿಕ್ಕೆ, ಊಟವಮಾಡುವಾಗ, ತ್ಯಾಗವಕೊಡುವಾಗ, ವೈಸ್ಯಮಾಡುವಾಗ, ದಾನವ ಮಾಡುವಾಗ, ವೈದ್ಯಕ್ಕೆ, ಊಂಬಿಟ್ಟು ಹೋಗಲಿಕ್ಕೆ, ಮೋಹನ ಸ್ತಂಭನಕ್ಕೆ, ವಿದ್ಯಾ ಕೊಡುವಾಗ, ವಿದ್ಯವ ಕೊಂಬುವಾಗ ಇಷ್ಟು ಕಾರ್ಯ ಸೂರ್ಯಸ್ವರವಾದರೆ ಮಾಡಬೇಕು. ಕೋಟೆ ಕಟ್ಟಿಸುವಾಗ, ಕೆರೆ ತೆಗೆಸುವಾಗ, ಭಾಂವಿ ಅಗಿಸುವಾಗ, ಕಟ್ಟಿಸುವಾಗ, ದೂರದಾರಿ ಹೋಗುವಾಗ, ಕಾಳಗಕ್ಕೆ ಹೋಗುವಾಗ, ಮದುವೆಮಾಡುವಾಗ, ಭಂಗಾರಕೊಡುವಾಗ, ಹೊಸಮನಿಗೆ ಹೋಗುವಾಗ, ಒಡೆಯನ ಮೊದಲೆ ಕಬ್ಬಾಗ, ಬೀಜವ ಬಿತ್ತುವಾಗ, ಸರ್ವ ದೇವತಾ ಪ್ರತಿಷ್ಠೆ ಮಾಡುವಾಗ ಇಷ್ಟು ಕಾರ್ಯ ಚಂದ್ರಸ್ವರವಾದಲ್ಲಿ ಮಾಡಬೇಕು. ಒಂದು ದಿನಕ್ಕೆ ಅರವತ್ತು ಘಳಿಗೆ ಸೂರ್ಯನವು; ಐದು ಘಳಿಗೆ ಚಂದ್ರಗೆ ೫ ಘಳಿಗಿ ನಡಿಯುಲು ಸಂಕ್ರಾಂತಿಯಲ್ಲಿ ಸೂರ್ಯಗೆ ಹೇಳಿದ ಕಾರ್ಯವ ಮಾಡುವದು. ಮಾಡಿದರೆ ಆವ ಕಾರ್ಯವು ಹೊಂದವು, ಸರ್ವಕ್ಕೆ ಒಳಿತು. ಉದಯದಲ್ಲಿ ಚಂದ್ರನ ಕಂಡರೆ ಸಂಕ್ರಾಂತಿಯು ಮೊದಲುಮಾಡಿ ೫ ಘಳಿಗೆ ಚಂದ್ರನವು, ೫ ಸೂರ್ಯನವು ಹೀಗೆ ನಡವುದು. ಆ ಪಾರ್ವತಾದೇವಿಗೆ ಈಶ್ವರನು ಪ್ರಾಣಿಗಳ ದೇಹದಲ್ಲಿ ತನ್ನ ನಿಜಸ್ವರೂಪಜ್ಞಾನದ ಉಪದೇಶವನ್ನು ಮಾಡುತಿರ್ದನು. ಎಲೆ ದೇವಿ, ಪಂಚಮುಖದಿಂದ ಈ ಪಂಚತತ್ವದಿಂದ ಇಹೆನು. ಪೃಥ್ವಿತತ್ವ ಸದ್ಯಜಾತಾ, ಅಪುತತ್ವ ವಾಮದೇವ, ತೇಜತತ್ವ ಅಘೋರ, ವಾಯುತತ್ವ ತತ್ಪುರುಷ, ಆಕಾಶತತ್ವ ಈಶಾನ್ಯ ಇಂತಿ ಐದುತತ್ವ ಐದುಮುಖಾ. ಆತ್ಮನೇ ತಾನು, ಈ ದೇಹವೇ ಶಿವಾಲ್ಲಾ, ಮಸ್ತಕವೇ ಕಳಸ, ಆದು ಕಾರಣ ಯಂತ್ರವೇ ಜಪ, ತಂತ್ರವೇ ಶಿವನೆಂದರಿಯುವದು. ಆದ ಕಾರಣ ಪ್ರಾಣಹಿಂಸೆ ಮಾಡಲಾಗದು, ಮಾಡಿದರೆ ಶಿವದ್ರೋಹ.

**ಶಿವಶಿವಶಿವ್ರೋಜತ್ತಿ ಸಜ್ಞಃ ಕೇವಲಃ ಶಿವಾಪಾಸಾ ಬದ್ಧ ।**
**ಭವೋ ಜವ್ರೋ ಪಾಶಮುಕ್ತಿ ಸದಾ ಶಿವಾಃ ॥**

ಯಂತ್ರವೇ ಜೀವಾ, ತಂತ್ರವೇ ಶಿವನೆಂದರಿಯುವದು. ಆವ ತತ್ವಕ್ಕೆ ಆವ ವರ್ಣ, ಆವ ಸ್ವಾದು, ಆವ ರೂಪ, ಆವ ಪ್ರಮಾಣ, ಆವ ಲಕ್ಷಣ ಅವನರಿತು ಐದು ತತ್ವಕ್ಕೆ ಬಲ್ಲವನೆ ಮಹಾತತ್ವ ಬಲ್ಲವನು. ಆತ ತ್ರಿಕಾಲ ಜ್ಞಾನಿ, ದೈವಜ್ಞ ಎನಿಸುವ ಆದು ಕಾರಣ ಈ ಪಂಚತತ್ವದ ಭೇದವನು ಮುಂದೆ ಪೇಳ್ವೆ. ಅವನರಿತು ನಡಿವನು ಪೃಥ್ವಿತತ್ವ, ಸುವರ್ಣ ವಾಯು ಸ್ವಾದು, ಸಿಂಹಿ ಚತುರಕಾರಾ, ಮಂಡಲ ನಾಭಿ ಎಂದ ಮೇಲೆ ಹನ್ನೆರಡು ಅಂಗುಲ ಪ್ರಮಾಣದಲ್ಲಿ ವಿಶ್ರಮಾ ಮೂಗಿನ ಹೊಳ್ಳಿಯ ನಡುವೆ ನಡುವದು ಇದು ಪೃಥ್ವಿತತ್ವ. ಇನ್ನು ಅಪುತತ್ವ ಬಿದಿಗಿಯ ಚಂದ್ರನಹಾಗೆ ಶ್ವೇತವರ್ಣ ಸ್ವಾದ ಒಗರು, ನಾಭಿಯಿಂದ ಮೇಲೆ ೧೬ ಬೆರಳಿನಲ್ಲಿ ವಿಕ್ರಮು, ಮೂಗಿನ ಹೊಳ್ಳಿಯ ತೆಳಗೆತಾಗಿ ಹೋಹದು. ತೇಜತತ್ವ ತ್ರಿಕೋಣ ರಕ್ತವರ್ಣ ಸ್ವಾದ ಖಾರಾ. ದೀವಿಗೆಯ ಹಾಗೆ ಜ್ಯೋತಿಯ ಸ್ವರೂಪ, ನಾಭಿಯಿಂದ ಮೇಲೆ ಎಂಟು ಅಂಗುಲ ಪ್ರಮಾಣದಲ್ಲಿ ಮೂಗಿನ ಹೊಳ್ಳಿಯ ತೆಳಗೆ ತಾಗಿ ಹೋಹದು ವಾಯುತತ್ವ ಛಟವರ್ಣ ಸ್ವಾದ ಹುಳಿ, ನೀಲವರ್ಣ ಮೊಲೆ ಯಿಂದ ಮೇಲೆ ನಾಲ್ಕು ಬೆರಳಿನ ವಿಶ್ರಮದಲ್ಲಿ ಮೂಗಿನ ಎಡದ ಕಡಿಯ ಹೊಳ್ಳಿಯ ಬದಿಯ ತಾಗಿ ಹೋಹದು. ಆಕಾಶತತ್ವ ಧೂಮವರ್ಣ, ಸ್ವಾದ ಕಂಹಿ, ಮೂಗಿನಲ್ಲಿ ಅಪರಿ ಉಸರು ಹೊರಟು ಎಲ್ಲ ತತ್ವದ ಮೇಲೆ ಕುಳಿತಡೆ ಆಕಾಶತತ್ವ ಎಂದರಿವುದು, ಎಲ್ಲಿ ಮುಟ್ಟದೆ ಯಿದ್ದಡೆ ಆಕಾಶತತ್ವ.

## ಪಂಚತತ್ವದ ಕ್ರಮ

ಪೃಥ್ವಿತತ್ವದಲ್ಲಿ ಸಕಲ ಉದ್ಯೋಗಂಗಳು ಆರಂಭ ಮದುವೆ, ಮುಂಜಿ, ವ್ಯವಹಾರ ಇವು ಮುಂತಾಗಿ ಸಕಲ ಕಾರ್ಯಂಗಳ ಮಾಡಬಹುದು. ತೇಜ ತತ್ವದಲ್ಲಿ ಒಬ್ಬರ ಕೊಲ್ಲುವದು, ಹಿಡಿಯುವದು, ಕಡಿಯುವದು ಇವು ಮುಂತಾದ ಕ್ರೂರ ಕರ್ಮಂಗಳಮಾಡೆ ವಿಜಯನಾಹನು. ವಾಯುತತ್ವದಲ್ಲಿ ಓಡಿದರೆ ಆರಗೆ ಶಿಗನು. ಆಕಾಶತತ್ವದಲ್ಲಿ ಸಕಲ ವಿದ್ಯಾಭ್ಯಾಸ, ಗುರು-ಶಿಷ್ಯ ಉಪದೇಶ, ಶಿವಾರ್ಚನೆ, ಅಷ್ಟಾಂಗ ಯೋಗಾಭ್ಯಾಸ ಮಾಡಲು ಸಿದ್ಧಿ

ಯಾಹದು. ಹಲ್ಲಡಸಿ ಮಾಡಿದಡೆ ವಿಪರೀತ ಫಲವಾಗುವದು. ದೇವರಿಗೆ ಅಗೋಚರ ಮನುಷ್ಯರಿಗೆ ದುರ್ಲಭವಾದಂಥ, ಅಷ್ಟಮಾ ಸಿದ್ಧಿಯಾದಂಥ, ತ್ರಿಕಾಲಜ್ಞಾನವನರಿವಂಥ, ಇದರಿಂದ ಅಧಿಕವಿಲ್ಲದಂಥ ಪರಮಾತ್ಮ ಕೃಪೆ ಯಿಂದ ಸುಖಿಯಾಗಿರತಕ್ಕದ್ದು.

## ನಾಶಿಕದಲ್ಲಿ ತತ್ವವನರಿಯುವ ಕ್ರಮ

ಕೊರಳನೊರಸದೆ ಮೂಗಿಗೆ ಸಲತವಾಡಿ ಕುಳಿತು ಉಸಿರು ಬಿಡಲು ಎಲ್ಲಿಯೂ ಮುಟ್ಟದೆ ಮೂಗಿನಹೊಳ್ಳಿ ಮುಟ್ಟಿ ಸೋಂಕದೆ ನಡುವೆ ಅಂಬಿನ ಹಾಗೆ ಹೊರಡಲು ಪೃಥ್ವಿತತ್ವವೆಂದರಿವುದು. ಮೂಗಿನಹೊಳ್ಳಿಯು ಕಡಿಯು ಕೆಳಗೆ ಸೋಂಕಿ ತುಟಿಯು ಮುಟ್ಟಿ ಹರಿಯಲು ಅಪುತತ್ವವೆಂದರಿವುದು. ಮೂಗಿನಹೊಳ್ಳಿಯು ಮುಟ್ಟಿ ಹರಿಯಲು ತೇಜತತ್ವವೆಂದರಿವುದು. ಮೂಗಿನ ಹೊಳ್ಳಿಯು ಎಡದಕಡಿಗೆ ತಾಗಿ ಗಲ್ಲದಮೇಲೆ ಅಡ್ಡ ಹಾಯಲು ವಾಯುತತ್ವ. ನಾಸಿಕದಲ್ಲಿ ಉಸರು ತುಂಬಿ ನಡಿಯಲು ಅಲ್ಲಿ ವಾಯುತತ್ವ ನಡಿಯದೆ ಓಂಕಾರ ಧ್ವನಿ ಮಾಡಲು ಆಕಾಶತತ್ವವೆಂದರಿವುದು. ನಾಸಿಕದಲ್ಲಿ ಈಪರಿ ಯಲ್ಲಿ ತತ್ವಗಳ ಅರಿವುದು. ಪದ್ಮಾಸನ ಇಕ್ಕಿ ಕುಳಿತು ಎಡದ ಭುಜದ ಕಡೆಗೆ ಕೊರಳತಿ ರವಿ, ಎದಿಗೆ ಕೊರಳಿಗೆ ಈ ಬೆರಳಿನಲ್ಲಿ ನಿಲ್ಲಿಸಿ ಬಲದ ಕಣ್ಣು ಮುಚ್ಚಿ ಎಡದ ಕಣ್ಣು ಮುಚ್ಚಿ ಮೊಲಿಯು ನೋಡುತ್ತ ಸ್ವರ ಬಿಡುವದು. ಮೊಲಿಯು ಮೇಲೆ ನಾವೆರಳಿನಲ್ಲಿ ತಾಗಿದರೆ ಪೃಥ್ವಿತತ್ವ ಅಲ್ಲಿಂದ ಈ ಬೆರಳಿನಲ್ಲಿ ತಾಗಿದರೆ ಅಪುತತ್ವ. ಮೊಲಿಯುಮುಟ್ಟಿ ತೇಜತತ್ವ ಅಪುತತ್ವದಿಂದ ತೆಳಗೆ. ಮೊಲಿಯಲ್ಲಿ ನಾವೆರಳಿನಲ್ಲಿ ತಾಗಿ ಕೊಂಕುಳ ಕಡೆಗೆ ಹರಿಯಲು ವಾಯುತತ್ವ. ಪ್ರುತ್ತಿ ಕೆಳಗೆ ಈ ಬೆರಳಿನಲ್ಲಿ ತಾಗಿ ಎಲ್ಲ ಠಾವು ಮುಟ್ಟದಡೆ ಆಕಾಶತತ್ವವೆಂದರಿವುದು. ಹೃದಯದಲ್ಲಿ ಈಪರಿ ತತ್ವಗಳ ಅರಿವುದು. ದೈವಗ್ನರಾದವರು, ಶಿವಕೃಪೆಯುಳ್ಳವರು ಚಂದ್ರನಾಡಿ ನಡವಲ್ಲ. ಮೊದಲು ಘಳಿಗಿಗೆ ಪೃಥ್ವಿತತ್ವ, ಎರಡನೆ ಘಳಿಗಿಗೆ ಅಪುತತ್ವ, ಮೂರನೆ ಘಳಿಗಿಗೆ ತೇಜತತ್ವ, ನಾಲ್ಕನೆ ಘಳಿಗಿಗೆ ವಾಯುತತ್ವ, ಐದನೆ ಘಳಿಗಿಗೆ ಆಕಾಶತತ್ವ. ಸೂರ್ಯನಾಡಿ ನಡವಲ್ಲಿ ಮೊದಲು ಘಳಿಗಿಗೆ ವಾಯುತತ್ವ, ಎರಡನೆ ಘಳಿಗಿಗೆ ತೇಜತತ್ವ, ಮೂರನೆ ಘಳಿಗಿಗೆ ಅಪುತತ್ವ, ನಾಲ್ಕನೆ ಘಳಿಗಿಗೆ ಪೃಥ್ವಿತತ್ವ. ಐದನೆ ಘಳಿಗಿಗೆ ಆಕಾಶತತ್ವ ಹೀಗೆ ತತ್ವ ನೋಡುವದು.

ಚುಂಬಕವನ್ನು ಕಂಟಕದಿಂ ಈ ಬೆರಳು ಪ್ರಮಾಣದಲ್ಲಿ ನಿಲ್ಲಿಸಿ ಬಲದ ಕಡಿಯಾದಡೆ ಬಲದಕಣ್ಣು ಮುಚ್ಚಿ ಎಡದಕಣ್ಣಿಲೆ ಮೊಲಿಯ ತುದಿಯ ನೋಡುತ್ತ ಉಸರು ಬಿಡಲು ಎಡದಕಡಿಯಾದರೆ ಎಡದಕಣ್ಣು ಮುಚ್ಚಿ ಬಲದ ಕಣ್ಣಿಲೆ ಮಲೆಯತುದಿಯ ನೋಡುತ್ತ ಉಸರು ಬಿಡಲು ಪೂರ್ವತತ್ವದ ಸ್ಥಾನಗಳಲ್ಲಿ ಅರಳಿಯನಿಟ್ಟು ಅರಳಿಯಮೇಲೆ ಉಸರುತಾಕಿ ಅರಳಿ ಹಾರಿದರೆ ಆ ತತ್ವ ನಡಿಯುತ್ತಿದ್ದೀತೆಂದು ಅರಿವದು. ಇದನ್ನು ಜ್ಞಾನವಂತ ಬುದ್ಧಿ ಯುಳ್ಳ ನೂರು ವರುಷದ ಜ್ಞಾನಿಗಳ ಕಡಿಯಿಂದ ಹೇಳಿಸಿಕೊಂಡು ಶುಭಾ-ಶುಭಂಗಳ ಕಾರ್ಯಕಾರಣಂಗಳ ನಡಿಸುವದು.

## ತತ್ವದ ಲಾಭ

ಊರಿಗೆ ಹೋದವರು ದೂರದಲ್ಲಿ ಇದ್ದವರಿಗೆ ಪ್ರಶ್ನೆಮಾಡಿದಲ್ಲಿ ಅಪು ತತ್ವವಾದರೆ ಸಮೀಪಕ್ಕೆ ಬಂದರೆಂದರಿವದು. ವಾಯುತತ್ವವಾದರೆ ಇದ್ದ ಠಾವು ಬಿಟ್ಟು ಮತ್ತೊಂದು ಠಾವಿಗೆ ಹೋದರೆಂದರಿವದು. ಪೃಥ್ವಿತತ್ವಕಂಡರೆ ಸುಖದಲ್ಲಿ ಇದ್ದಾರೆಂದು ತಿಳಿವದು. ತೇಜತತ್ವಕಂಡರೆ ಬೇನೆಯಲ್ಲಿ ಇದ್ದಾ ರೆಂದು ಅರಿವದು. ಆಕಾಶತತ್ವಕಂಡರೆ ಸತ್ತರೆಂದು ಅರಿವದು.

ಸುಸುಮ್ನಾನಾಡಿ ಬ್ರಹ್ಮಸ್ಥಾನದಲ್ಲಿ ಮಹಾ ಸಂಯುತವಾಗಿದ್ದರೆ ಲೇಸು. ಉಷ್ಣವಾಗಿದ್ದರೆ ಹೀನ ಸುಸುಮ್ನೆಂಬ ನಾಡಿ ಕತ್ತಲೆ ಮನಿ ಯೊಳಗಿನ ಜ್ಯೋತಿಯ ರೂಪವಾಗಿಹದು. ಅದನ್ನು ನೂರು ವರುಷದ ದಿವ್ಯ ಜ್ಞಾನಿಗಳು, ಯೋಗಿಗಳು ಕಾಂಬರು. ಕಂಡರೆ ಒಬ್ಬರ ಮುಂದೆ ಹೇಳರು. ಹೆಗುರಿನ ಚೇಷ್ಟಿಯವರಿಗೆ ತೋರಲಾಗದು ಇದು ಕಾಕಮುಂದಿಗೆ ಹಗುರ ವಾಗಿಹದು. ಅವಸರಕಿ ಇತ್ಯಾದಿ ಲೋಕಕ್ಕೆ ಅಸಾಧ್ಯ

## ತತ್ವದ ಕ್ರೂರ ಶಾಂತಿ

ತತ್ವನೋಡುವಲ್ಲಿ ಘಾಳಿತಾಗಿ ಮರಳಿದರೆ ಅಶುಭವಾಯಿತೆಂದು ಅರಿ ವದು. ಎಡದ ನೋಡಲು ಬಲದಕಡಿಗೆ ಹಾದರೆ, ಬಲದಕಡಿಗೆ ನೋಡಲು ಎಡದಕಡಿಗೆ ಹಾದರೆ ಸಾವುಯೆಂದರಿವದು. ಆಕಾಶ ದೇವಜಾತಿ, ಅಗ್ನಿ ಕ್ಷತ್ರಿಯ, ಅಪು ವೈಶ್ಯ, ಪೃಥ್ವಿ ಶೂದ್ರ, ವಾಯು ಹೀನಜಾತಿ. ಜಾತಿ ನೋಡುವಲ್ಲಿ ಆವ ಜಾತಿ ತತ್ವ ಕಂಡರೆ ಆ ಜಾತಿಯೆಂದರಿವದು. ಐದು

ತತ್ವದ ಆದಿ ದೇವತಿನರಿವದು— ತಾವು ನೋಡುವಲ್ಲಿ ಆವತತ್ವ ಕಂಡರೆ ಆವರ ದೇವತಿಯು ಸ್ಮರಣೆಯುಮಾಡುವದು, ಮಾಡಿದರೆ ಕಾರ್ಯಸಿದ್ಧಿ. ಲೋಕದೊಳಗೆ ಮನುಷ್ಯರು ಪ್ರಶ್ನೆಮಾಡಿದಲ್ಲಿ ತಾನು ಅಪುತತ್ವ ಕಂಡರೆ ಪಾತಾಳಲೋಕ. ಪೃಥ್ವಿತತ್ವ ಕಂಡರೆ ಮೃತ್ಯುಲೋಕ. ತೇಜತತ್ವ ಆಕಾಶತತ್ವ ಕಂಡರೆ ದೇವ ಲೋಕದ ಚಿಂತೆಯೆಂದರಿವದು ವಾಯುತತ್ವ ಕಂಡರೆ ಪೃಥ್ವಿಯೆಂದರಿವದು.

## ನಷ್ಟಮುಷ್ಟಿ

ಈ ಹೇಳಿದ ಮೂರು ಲೋಕದೊಳಗೆ ಆವದಾದರು ಒಂದು ಲೋಕ ಕಂಡರೆ ಆವ ಚಿಂತೆಯೆಂದರಿವದಕ್ಕೆ ನಷ್ಟವೋ, ಮುಷ್ಟಿಯೋ, ಚಿಂತಿಯೋ, ಧೂರ್ತನ ಸಂಕಲ್ಪವೋ, ನಿಜವೋ. ನಷ್ಟವಾದರೆ ವಾಯುತತ್ವ, ಮುಷ್ಟಿಯಾದರೆ ಪೃಥ್ವಿತತ್ವ, ಚಿಂತಿಯಾದರೆ ಆಕಾಶತತ್ವ. ನಷ್ಟ, ಮುಷ್ಟಿ, ಚಿಂತಿ ಈ ಮೂರರೊಳಗೆ ಧಾತು, ಜೀವ, ಮೂಲ ಈ ಮೂರರೊಳಗೆ ಹ್ಯಾಗೆ ಅರಿಯಬಹುದು ಎಂದು ಪಾರ್ವತಿಯು ಈಶ್ವರಂಗೆ ಬಿನ್ನಹ ಮಾಡಿದಳು.

## ಈಶ್ವರ ಕವಚಃ

ಆ ಸದಾಶಿವನು ತ್ರಿಲೋಕವ ಜಗನ್ಮಾತೆಗೆ ನಿರೂಪಿಸಿದನು. ಎಲೆ ದೇವಿ, ಸ್ವರದಮೂಲ ಬಲ್ಲವಂಗೆ ಇವ ಹೇಳುವದೇನರಿತು ಸೂರ್ಯಚಂದ್ರರೊಳಗೆ ತೇಜವ ಕಂಡರೆ ಧಾತು. ಪೃಥ್ವಿ, ಅಪು, ವಾಯು, ಆಕಾಶ ಕಂಡರೆ ಜೀವದ ಚಿಂತಿ. ಪೃಥ್ವಿ ಮೂಲಚಿಂತಿ ಎಂದರಿವದು. ಧಾತುನರಿವ ಕ್ರಮು— ಸೂರ್ಯನಡೆಯಲಾಗಿ ತೇಜತತ್ವ ಸಂಪೂರ್ಣವಾದೊಡೆ ಸುವರ್ಣ. ಆ ತತ್ವದ ಹೀನವಾದಡೆ ಬೆಳ್ಳಿ. ಆ ತತ್ವದ ಅರ್ಧವಾದಡೆ ತಾಂಬ್ರ, ಕಂಚು. ಆ ತತ್ವವೆಡರ್ದವಾದಡೆ ಉಳಿದ ನಾಲ್ಕು ಕಮ್ಮಿ ಧಾತುಗಳೆಂಟು ಇವನ್ನು ಈ ಮರ್ಯಾದಿಯಲ್ಲಿ ಅರಿವದು.

## ಅಧಮಧಾತುಗಳರಿಯುವ ಕ್ರಮು

ಪೃಥ್ವಿಯೊಳಗೆ ತೇಜಮಿಶ್ರವಾಗಿ ಬಂದರೆ ಮಣ್ಣು. ಆ ಅಪುವಿನೊಳಗೆ ತೇಜಮಿಶ್ರವಾಗಿ ಬಂದರೆ ಪಾಷಾಣ. ತೇಜ, ಅಪು, ಪೃಥ್ವಿ, ವಾಯು ಮುಟ್ಟಿದಡೆ ಇಂತಿವು ರತ್ನಯೆಂದರಿವದು.

ಆ ಜಗನ್ಮಾತೆ ಶಿವನ ಬೆಸಗೊಂಡಳು. ಪ್ರತ್ಯಕ್ಷ ಷಡ್ವಿಧ ಜೀವವನರಿವ ಪ್ರಕಾರ ನಿರೂಪವಕೊಡು. ಷಡ್ವಿಧ ಜೀವ ಎಂತಹವು— ಉಗರುಳ್ಳ ದೊಂದು, ಕೊಂಬುಳ್ಳ ಎರಡು, ಬಾಷ್ಪಿಬರವುಳ್ಳವು ಮೂರು, ಹಲ್ಲುಳ್ಳವು ನಾಲ್ಕು, ಹಲವು ಪಾದವುಳ್ಳವು ಪಾಪವಿಲ್ಲದಂತಾವು. ಇವನರಿವ ಜ್ಞಾನ ವನು ನಿರುಪದಿಂದ ಕೃಪೆಮಾಡೆಂದಳು. ಆ ಸದಾಶಿವನು ಎಲೆ ದೇವಿ, ಪ್ರಶ್ನೆ ಯೆಂದರಿದು ಬಳಿಕ ಸಂಪೂರ್ಣ ಪೃಥ್ವಿಕಂಡರೆ ಆನಿಯೆಂದರಿವದು, ಅರ್ಧವ ಕಂಡರೆ ಕುದುರೆ, ಅದರರ್ಧವ ಕಂಡರೆ ಮನುಷ್ಯ, ಅಪು ಸಂಪೂರ್ಣ ಕಂಡರೆ ಉಗರುಳ್ಳ ಜೀವಿಗಳು, ಅರ್ಧ ತೇಜವ ಕಂಡರೆ ಕೊಂಬುಳ್ಳ ಪ್ರಾಣಿಗಳು, ವಾಯು ಕಂಡರೆ ಪಕ್ಷಿಗಳು. ಇನ್ನು ಮನುಷ್ಯ ಭೇದ ಪ್ರಸೂತಿಯ ಕಾಲದಲ್ಲಿ ಪ್ರಶ್ನೆಯ ಬೆಸಕೊಂಡರೆ ಅಪುತತ್ವ ಕಂಡರೆ ಕರಿಕ.

## ಸ್ತ್ರೀ ಉತ್ಪತ್ಯ

ಪೃಥ್ವಿಯ ಕಂಡರೆ ಕೆಂಚಿ. ತೇಜಮಿಶ್ರವಾದರೆ ಸಮಕರ್ನಿಕೆ. ಆಕಾಶವಾದಡೆ ನಪುಂಸಕ. ಆ ಜಗನ್ಮಾತೆ ಈಶ್ವರನ ಬೆಸಗೊಂಡಳು. ಎಲೆ ಪರಮೇಶ್ವರಾ, ಚತುರ್ವಿದ ಮೂಲಂಗಳ ಆವ ತತ್ವಗಳಿಂದರಿವದು ಎಂದು ಬೆಸಗೊಂಡಳು. ಎಲೆ ದೇವಿಯೇ ಕೇಳು, ಮೂಲ ಪ್ರಶ್ನೆಯಾದಲ್ಲಿ ಪೃಥ್ವಿಯ ಕಂಡರೆ ಬೆಳ್ಳಿ. ಈ ಪೃಥ್ವಿ ಅಪುವಿಗಾಗಿ ಹರಿದಡೆ ಧಾನ್ಯವಾಗಲಿ ತೃಣವೆಂ ದರಿವದು. ಆ ಪೃಥ್ವಿ ಆಕಾಶಕ್ಕೆ ಹರಿದಡೆ ವೃಕ್ಷವೆಂದರಿವದು. ಆ ಪೃಥ್ವಿ ವಾಯುಗಾಗಿ ಹರಿದಡೆ ಮುಷ್ಟಿಯೆಂದರಿವದು.

## ಕಾರಸ್ವರದಲ್ಲಿ ತತ್ವನರಿವ ಕ್ರಮ

ಅದರಿಂದ ಮೇಲೆ ಬ್ಯಾಳಿ ಪ್ರಮಾಣಿನಲ್ಲಿ ತೇಜ. ಅದರಿಂದ ಮೇಲೆ ಬ್ಯಾಳಿ ಪ್ರಮಾಣಿನಲ್ಲಿ ಅಪು. ಅದರಿಂದ ಮೇಲೆ ಬ್ಯಾಳಿ ಪ್ರಮಾಣಿನಲ್ಲಿ ವಾಯು. ಅದರಿಂದ ಮೇಲೆ ಬ್ಯಾಳಿ ಪ್ರಮಾಣಿನಲ್ಲಿ ಆಕಾಶ. ಅದರ ಕೆಳಗೆ ಪೃಥ್ವಿ. ಪೃಥ್ವಿ ಕೆಳಗೆ ಅಪು. ಅಪುದ ಕೆಳಗೆ ತೇಜ. ತೇಜದ ಕೆಳಗೆ ವಾಯು. ವಾಯುವಿನ ಕೆಳಗೆ ಆಕಾಶ.

# ಕರಿಹಕ್ಕಿ ಶುಭಾಶುಭ

ಎಡದನಾಡಿ ಸುಸ್ವರವಾಗಿ ನಡಿಯುಲು ಲೇಸು, ಮಧ್ಯವಾದರೆ ಹೀನ, ಸೂರ್ಯಸ್ವರ ನಡಿಯುಲು ಮಾಕ್ಕಿ ಉದೊಕ್ಕಿಯಾದಡೆ ಆ ದಿಪ್ತಕಾರ್ಯ ವಾಹದು, ಆ ನಾಡಿ ಮಂದವಾದಡೆ ಆ ದಿಪ್ತಕಾರ್ಯ ಹಾನಿ.

# ಸೂರ್ಯಸ್ವರ ನಡಿಯುವ ಫಲ

ದಿಪ್ತಕಾರ್ಯಕ್ಕೆ ಎಡದಸ್ವರ ಕಟ್ಟಿದರೆ ಬಲದಕಾರ್ಯವಾಗದು. ಬಲದಸ್ವರ ಕಟ್ಟಿದರೆ ಎಡದಕಾರ್ಯವಾಗದು. ಎರಡೂ ಕಟ್ಟಿದರೆ ಎರಡೂ ಕಾರ್ಯ ಆಗದು. ಹಾನಿ, ರೋಗ, ಮರಣ ಮೂರರೊಳಗೊಂದಾಹದು. ಇದನರಿತು ಶಕುನವಕಟ್ಟುವದು.

ಭೋಜನಕ್ಕೆ ಕ್ಷುದಾರ್ತರಾಗಿದ್ದವರು ಸೂರ್ಯ ನಡಿಯುಲಾಗಿ ಸದ್ಯೋಕ್ತ ಅತಿ ಬಿಸಿಯಾಗದೆ ಅತಿ ಸೈತ್ಯವಾಗದ ಶಾಕಂಗಳು ಮೊದಲು ಹುಳಿಯು ನುಣ್ಣದೆ ಮೊದಲು ಸಿಂಹಿ, ಬಳಿಕ ಸಪ್ಪಗೆ, ಬಳಿಕ ಒಗರು, ಬಳಿಕ ಕಂಹಿ, ಬಳಿಕ ಹುಳಿ, ಬಳಿಕ ಖಾರ ಈ ಪ್ರಕಾರ ಶಾಕಂಗಳ ಸಾಧಿಸುತ ಭೋಜನಮಾಡಲು ಆ ಅನ್ನ ಅಮೃತಾನ್ನವಾಗಿ ದೇಹದ ಎಲ್ಲಾ ವ್ಯಾಧಿಯು ಕೆಡಿಸುವದು. ಸೂರ್ಯನಾಡಿ ನಡಿಯುಲಾಗಿ ಅತಿ ಬಿಸಿ ಅಸನಾ ಹುಳಿ ಖಾರ ಬೆರೆಸಿದ ಶಾಕಂಗಳು ಮುಂತಾಗಿ ಉಣ್ಣಲು ಪಿತ್ತವು ಕೋಪವಾಗಿ ರೋಗ ಯಡಗೊಂಬುವದು ಇದು ಸೂರ್ಯನಾಡಿ ಫಲ.

# ಚಂದ್ರಸ್ವರ ನಡಿಯುವ ಫಲ

ಅತಿ ಉಷ್ಣ ಅಸನ ಹುಳಿ-ಖಾರ ಮಿಶ್ರವಾದ ಶಾಕಂಗಳನುಣ್ಣಲು ಲೇಸು. ಚಂದ್ರನಾಡಿ ನಡಿಯುವಾಗ್ಗೆ ಸೈತ್ಯ ಅನ್ನವಾಗಿ ಸಿಂಹಿ ಸಪ್ಪಗೆ ಈ ಶಾಕಂಗಳನುಣ್ಣಲು ಪಿತ್ತ ವಾತ ಪ್ರಕೋಪವಾಗಿ ಶ್ಲೇಷ ಎಡಗೊಂಡು ಅನೇಕ ರೋಗಂಗಳು ಎಡಗೊಂಬವು. ಇದನರಿತು ಚಂದ್ರ-ಸೂರ್ಯರ ವಾರದಿಂದ ಯಥೋಕ್ತವಾಗಿ ಭೋಜನಮಾಡಲು ಲೇಸು. ಅದೇ ರಸಾಯನ ಒಳಿತಪಳಿತ ಸ್ತಂಭನಾ, ಅದೇ ಆರೋಗ್ಯಕಾರ, ವಿಚಾರ ತಿಳಿಯದೆ ಉಂಡರೆ

ಅನೇಕ ರೋಗ ಯುಡಗೊಂಡು ಆಯುಷ್ಯಹೀನನಾಹನು. ಇದನರಿತು ಉಂಡವರು ದೈವಜ್ಞರು.

## ತಾಂಬೂಲ ಸೇವಿಸಲಿಕ್ಕೆ

ಸೂರ್ಯ ನಡಿವಾಗ ಕರ್ಮಸಂಯುತರಾಗಿ ಸಲ್ಪ ವಿಳ್ಯೆಯಮಾಡಲು ಲೇಸು, ಬಹಳ ಮೆಲ್ಲಲು ಹೀನ, ರೋಗ ಪಿತ್ತ ಯುಡಗೊಂಡು ಸಂಕಟವಾಹದು. ಚಂದ್ರನಡವಾಗ ಬಹಳ ವಿಳ್ಯೆಯು ಮೆಲ್ಲಲು, ರೋಗಪರಿಹರುವದು. ದೀಪನವಾಹದು. ಅದು ಕಾರಣ ಚಂದ್ರ–ಸೂರ್ಯರಲ್ಲಿ ವಿಚಾರದಿಂದ ದೈವಜ್ಞರಾಗಿದ್ದವರು ಯಥೋಕ್ತ ತಾಂಬೂಲವಮಾಡಲು ಅಷ್ಟಮಾ ಸಿದ್ಧಿಯುಕ್ಕುಂ. ಸಾಯುನವಹದು, ಸ್ಥಾವರ ಜಂಗಮ ವಿಷಪ್ರಯೋಗವಾದಲ್ಲಿ ಬಲದ ಮಗ್ಗುಲಾಗಿ ಸೂರ್ಯನೊತ್ತಿ ಚಂದ್ರನ ಯೆತ್ತಿ ಬಿಡದೆ ಧ್ಯಾನವ ಮಾಡುತ್ತ ನಡಸಲು ೨ ಘಳಿಗೆಯಲ್ಲಿ ವಿಷ ಪರಿಹಾರವು. ವಿಷ ಪ್ರಯೋಗವಾಗಿ ಸೂರ್ಯನಾಡಿ ನಡಿಯುಲು ಪ್ರಾಣಾಂತಕವಾಹದು.

## ಸ್ತ್ರೀಯರ ಸಂಭೋಗಕ್ಕೆ ರಾತ್ರಿಯಲ್ಲಿ

ಆ ಸ್ತ್ರೀ ತನಗೆ ಒಲಿಯುಬೇಕಾದರೆ ಎರಡುಜಾವ ರಾತ್ರಿ ಹೋದ ಮೇಲೆ ಭೋಗಿಸಲು ಆ ಸ್ತ್ರೀ ತನಗೆ ಒಲಿವಳು. ಮೊದಲಜಾವದಲ್ಲಿ ಭೋಗಿಸಲು ಪುರುಷ ಸ್ತ್ರೀವಶನಾಹನು. ಸುಖಿಗಳಾಗಿದ್ದವರು ಸ್ತ್ರೀಯರಕೂಡ ಗೋಷ್ಟಿಯಾಗಿ ಸಂಭೋಗವಾಗಲು ಸೂರ್ಯನಾಡಿ ನಡಿವಾಗ ಕೂಡಲು ಆತನು ಆ ಸಖಿಗೆ ಮನೋವಲ್ಲಭನಾಹನು. ಭುಜಂಗರಾಗಿದ್ದವರು, ಕಾಮಿನಿಯು ಒಲಮಿಯ ಬಯಿಸುವಂಥವರು ಸುಖಿಗಳು. ಹಿಂದೆ ಹೇಳಿದ ಮೂರು ಜಾವದೊಳಗೆ ಸಂಭೊಗವಿಲ್ಲದಿದ್ದರೆ ಮತ್ತೊಂದು ಪ್ರಕಾರ— ಆ ಸ್ತ್ರೀಯಳು ನಿದ್ರೆಯಿಂದ ನಿಶ್ವಸುವಾಗ ಆಕೆಯ ನಾಸಿಕಕ್ಕೆ ತನ್ನ ನಾಸಿಕ ಆನಿಸಿ ಆಕೆಯ ಬ್ರಹ್ಮರಂಧ್ರದಿಂದ ಬಾಹಂತ ಜೀವಸ್ವರೂಪವನ್ನು ತಾನು ೧೬ ಬಾರಿ ಸೇವಿಸಿಕೊಂಬುದು. ಈ ಪರಿಯಾದಿ ಮರಳಿ ತನ್ನ ಸ್ವರವ ೧೨ ಬಾರಿ ಆ ಕಾಮಿನಿಗೆ ನೀಡುವದು. ಈ ಮರಿಯಾದಿಯಲ್ಲಿ ಆಕಿಗೆ ಅರಿಯುದಹಾಗೆ ಮಾಡಲು ಆ ಕಾಮಿನಿ ತನಗೆ ಒಲಿವಳು. ಶುಕ್ರನ ಉದಯುದಲ್ಲಿ ಭೋಗಿ

ಸಲು ಸ್ತ್ರೀಯಳಿಗೆ ಪುರುಷನೊಲಿವನು. ಬೃಹಸ್ಪತಿಯ ಉದಯದಲ್ಲಿ ಭೋಗಿಸಲು ಸ್ತ್ರೀಯಳು ಪುರುಷಂಗೆ ಒಲಿವಳು. ಸುಖಿಗಳಾಗಿದ್ದವರು ಶಿವ ಕೃಪೆಯುಳ್ಳವರು ಗ್ರೀಷ್ಮಋತುವಿನಲ್ಲಿ, ವಸಂತಕಾಲ ಪ್ರವೇಶವಾದಲ್ಲಿ ಕಾಮಿನಿಯ ವಂದವಮಾಡಿಕೊಂಡು ಜಲಕ್ರೀಡೆಯನಾಡುವದು. ಆಡಿದರೆ ಸಕಲ ಪಿತ್ತದೋಷಗಳು ಕೆಡುವವು ಷಡೃತುವಿನೊಳಗೆ ಅದೇ ಭೋಗ.

## ಜಲಕ್ರೀಡೆಯ ಕ್ರಮ

ಚಂದ್ರ-ಸೂರ್ಯರ ವಿಚಾರದಿಂದ. ಯಥೋಕ್ತವಾಗಿ ಮಾಡಲು ಆರೋಗ್ಯ, ವಿಚಾರಿಸದೆ ಹೋದರೆ ಅನೇಕ ರೋಗ. ಚಂದ್ರ-ಸೂರ್ಯರ ವಿಚಾರ ಜಲಕ್ರೀಡೆಯ ಮಾಡುವ ಸಮಯದಲ್ಲಿ ಸೂರ್ಯಸ್ವರನಾಡಿ ನಡವತನಕ ಜಲದೊಳಗೆ ಇಹದು. ಚಂದ್ರಸ್ವರವಾದಡೆ ಹೊರಡುವದು, ಹೀಗಾದರೆ ಲೇಸು. ಚಂದ್ರನಾಡಿ ನಡವಾಗ್ಗೆ ಮರತು ಜಲದೊಳಗೆ ಇರಲು ರೋಗ ಯಡಗೊಂಬುವದು. ಇದನರಿತು ಸುಖಿಗಳಾಗಿ ಇದ್ದವರು ಜಲಕ್ರೀಡೆಯನಾಡಬೇಕು.

## ಸಮರ್ಥರಾಗಿದ್ದವರು, ವ್ಯಸನಿಯಾಗಿದ್ದವರು ಜೂಜಿನ ದುರ್ಲಕ್ಷವಿದ್ದವರಿಗೆ ಉಪದೇಶ

ಚಂದ್ರ-ಸೂರ್ಯರ ಭೇದದಿಂದ ನಾಲ್ಕು ಭೂಮಿ ಬಲವಂ ಪೇಳ್ವೆ— ಸೂರ್ಯನಡವಾಗ ಮೂಡಲಾಗಲಿ ಬಡಗಲಾಗಲಿ ಕುಳ್ಳಿರುವದು. ಚಂದ್ರಸ್ವರವಾದರೆ ಪಡುವಲಾಗಲಿ ಟೆಂಕಲಾಗಲಿ ಕುಳ್ಳಿರುವದು, ಗೆಲ್ಲುವರು. ಪಾಸಿಯ ತಕ್ಕೊಂಬುವದಕ್ಕೆ— ಸೂರ್ಯನಡದರೆ ಮಲ್ಲರಗಿಂತ ಮುಂದೆ ಪಾಸಿ ತಕ್ಕೊಂಬುವದು. ಚಂದ್ರನಡಿದಡೆ ಅವರಾಡಿದ ಮೇಲೆ ತಾನು ಆಡಬೇಕು.

ಪೃಥ್ವಿತತ್ವ ನಡದರೆ ಕಳ್ಳನೆಂಬುವದು. ಅಪು ನಡದರೆ ಜಾಗ್ರವೆಂಬುವದು. ತೇಜ ನಡದರೆ ತ್ಯಾಗ. ವಾಯು ನಡದರೆ ನಂದಿ. ಆಕಾಶವಾದರೆ ಶೂನ್ಯ.

# ಅತಿ ಕ್ರೂರವಾಗಿದ್ದವರು ಬೇಟೆ ಅಧಿಕಾರರಿಗೆ ಸಿದ್ಧಿಸುವ ಕ್ರಮ

ಸೂರ್ಯಸ್ವರ ನಡಿಯುತ್ತಿದ್ದರೆ ಒಡಗಲು, ಮೂಡಲು ಹೋಗಲು ಲಾಭ. ವಿಚಾರಿಸದೆ ವಿಪರೀತವಾದರೆ ಲಾಭವಿಲ್ಲ. ಚಂದ್ರನಡದರೆ ಜಲ ಬೇಟೆ ಆಡಲು ಲಾಭ. ತತ್ವಪ್ರಕಾರ- ಪೃಥ್ವಿತತ್ವ ನಡದರೆ ಹಂದಿಮರಿಗಳು. ಅಪುವಾದರೆ ಸಕಲ ಜೀವರೊಳಗೆ ವುಗರುಳ್ಳ ದಷ್ಟ ಜೀವಗಳು.

# ಯಂತ್ರ ಉಪದೇಶ

ಚಂದ್ರಸ್ವರ ನಡಿವಾಗ ಮೂಡಲು, ಒಡಗಲು, ಊರೋಳಗೆ ಹೋಗಲಾಗದು. ಚಂದ್ರಸ್ವರದಲ್ಲಿ ವಾಯು, ಅಗ್ನಿಯ ದಿಕ್ಕಿಗೆ ಹೋದರೆ ಬ್ರಹ್ಮನಾದರೂ ತಿರಗಿ ಬಾರನು. ಸೂರ್ಯಸ್ವರದಲ್ಲಿ ಟೆಂಕಲು, ಪಡವಲು ಊರೊಳಗೆ ಹೋಗಲು. ನೈಋತ್ಯ ಈಶಾನ್ಯ ದಿಕ್ಕಿನ ಊರುಗಳಿಗೆ ಹೋಗ ಲಾಗದು ಎರಡೂ ಒಮ್ಮೆಲೇ ನಡಿಯುತ್ತಿರಲು, ಇದು ಸಂಕ್ರಮಣವಾಗಿದ್ದರೆ ಊರಿಗೆ ಹೋಗಲಾಗದು. ಎರಡೂ ನಾಡಿ ಕಟ್ಟಿದರೆ ಹೋಗಲಾಗದು. ಊರಿಗೆ ಹೋಗುವಾಗ ಮಾರ್ಗದಲ್ಲಿ ಎರಡುದಾರಿ ಇರಲು ಅಲ್ಲಿ ಯಾವದಾರಿ ಗೊಂಡು ಹೋಗಬೇಕೆಂದು ತಿಳಿಯುಬಾರದಿದ್ದರೆ ಅಲ್ಲಿ ಒಂದು ತಾಸು ನಿಂತು ಸ್ವರ ನೋಡಲು ಚಂದ್ರನ ಕಂಡರೆ ಎಡದಾರಿಲೆ ಹೋಗುವದು. ಸೂರ್ಯನ ಕಂಡರೆ ಬಲದಾರಿಲೆ ಹೋಗುವದು. ಎರಡೂ ನಾಡಿ ಒಮ್ಮೆಲೇ ನಡಿಯಲು ಅಲ್ಲಿ ಘಳಿಗಿ ನಿಂತು ಯಾವ ಸ್ವರ ನಡದೀತು, ಆ ಸ್ವರಗೊಂಡು ಹೋಗ ಬೇಕು. ನೋಡದೆ ಹೋದರೆ ಕೇಡು ತಪ್ಪದು. ಪಟ್ಟ, ಅಭಿಷೇಕ, ರಾಯರಿಗೆ ಪಟ್ಟಾಭಿಷೇಕ, ಮದುವೆ, ಮುಂಜೆ, ಶುಭಕಾರ್ಯಗಳ ಮಾಡುವ ವ್ಯಾಳೆದಲ್ಲಿ ಚಂದ್ರಸ್ವರ ನಡದರೆ ಲೇಸು, ಸ್ಥಿರಾ, ಶುಭಾ ಸೂರ್ಯಸ್ವರ ನಡದರೆ ಕೆಡುವದು.

# ತತ್ವ ಕ್ರಮ

ಅಪು, ಪೃಥ್ವಿತತ್ವ ನಡೆವಾಗ ಪಟ್ಟಗಟ್ಟಲು ಸುಖ, ಆಯುಷ್ಯ. ಎರಡುತತ್ವ ಕೂಡಿ ನಡಿಯುತ್ತಿದ್ದರೆ ರಾಜಕಾರ್ಯದಿಂ ಕೆಡುವದು.

# ಯುದ್ಧ ಕ್ರಮ

ಪಾರ್ವತಿ ಪರಮೇಶ್ವರನನ್ನು ಕೇಳುತಿರ್ದಳು. ಕಾಳಗದ ಜಯವು ಎಂತೆಂದು ಬೆಸಗೊಂಡಳು ಕೋಟಿಕಾಳಗ, ಕವಿಕಾಳಗ, ಏಕಾಂಗಕಾಳಗ, ಚತುರಂಗಕಾಳಗ ಈ ನಾಲ್ಕು ವಿಧದ ಕಾಳಗವ ಹ್ಯಾಂಗೆ ಕಾದಿಸಬೇಕು. ನೀನು ಪೂರ್ವದಲ್ಲಿ ರಾಕ್ಷಸರ ಗೆದ್ದೆಯೆಂದರೆ, ಕೇಳು ಪಾರ್ವತಿ ಎಂದು ಹೇಳುತಿರ್ದನು. ಚತುರಂಗಪ್ರಶ್ನೆಯಾದಲ್ಲಿ ಪೃಥ್ವಿಕಂಡರೆ ಕಾಳಗವಾದೀತೆಂದು ಅರಿವದು. ಅಪುವಾದರೆ ಸಂಧಾನವೆಂದರಿವದು ತೇಜವಾದರೆ ಕಾಳಗವಾಗಿ ತಮ್ಮವರು ಗೆಲ್ವರು. ವಾಯುವಾದರೆ ತಮ್ಮವರು ಭಂಗವೆಂದರಿವದು. ಆಕಾಶವಾದಡೆ ಅರಸಾಗಲಿ, ಬಂಟನಾಗಲಿ ಸತ್ತನೆಂದರಿವದು.

# ಚತುರಂಗ ಯುದ್ಧ ಫಲ

ಅಥವಾ ಸಂಗ್ರಹಮಂದಲ್ಲಿ ಪ್ರಶ್ನೆಯಾದರೆ, ಚಂದ್ರನಾದಡೆ ತಾನು ಗೆದ್ದನೆಂದರಿವದು. ಆ ಸ್ವರವಾದಾತಗೆ ಕಾದಿಸಲು ಪೃಥ್ವಿತತ್ವವಾದರೆ ಸುರಗಿ ಬಂಡಿ ಮುಂದೆ ನಡಿಸುವದು ಹಿಂದೆ ಪರಿವಾರ ನಡಿಸಲು ಕಾಳಗ ಗೆಲ್ಲುವದು. ಅಪು ಕಂಡರೆ ಮುಂದೆ ಕಾಲಾಳು ನಡಿಸುವದು, ಹಿಂದೆ ಉಳಿದ ಸೈನ್ಯ ನಡಿಸುವದು, ಗೆಲ್ಲುವರು. ವಾಯು ಕಂಡರೆ ಮುಂದೆ ಕುದುರೆ, ಹಿಂದೆ ಸೈನ್ಯ, ಕಾಳಗದೊಳಗೆ ಚಂದ್ರದಿಕ್ಕಿಗೆ ಬೆನ್ನುಮಾಡಿಕೊಂಡು ನಿಂದಿರ್ದು ಅವರು ಮೊದಲೇ ಬಾಣವತೊಟ್ಟೆಸಿಯಲು ಬಳಿಕ ತಾನೆಸಿವದು ಸೂರ್ಯನಡದರೆ ಸೂರ್ಯದಿಕ್ಕಿಗೆ ಬೆನ್ನುಮಾಡಿಕೊಂಬದು. ಅದರಿಂದ ಮುಂದೆ ಎಸೆಯುತ್ತ ಹೋಗಲಾಗಿ ಅವರು ಮುರಿದೋಡುವರು.

# ಕಾಳಗ ವೇಳ್ಯೆಯಲ್ಲಿ

ಚಂದ್ರನೊಳಗಣ ಪೃಥ್ವಿತತ್ವವಾಗಲಿ ಕಾಸಿಯು ಸಿಕ್ಕಿದಡೆ ಕಳನೊಳಗೆ ಸೂರ್ಯನಡದು ತೇಜವಾದರೆ ಬಂಟ ಗೆಲ್ಲುವನು. ಬಂಟಗೆ ಕಾಳಗವಡ್ಡಿದಲ್ಲಿ ಮಿಂದು ಮಡಿವುಟ್ಟು ಹಲ್ಲಸುಲಿಕೊಂಡು ಪರಿಮಳತಿವಿಕೊಂಡು ಹುವ್ವ ಮುಡಿಕೊಂಡು ಮದುಮಗನಂತೆ ಶೃಂಗಾರವಾಗಿ ತಾ ಮಲಗುವ ಮನೆಗೆ ಸಾರಣಿಯ ಕಾರಣೆಗೊಂಡು ತಾ ಮಲಗುವ ಬಳಿಯಲ್ಲಿ ನೆಲಕ್ಕೆ ಚೌಕವಾಗಿ

ಅಕ್ಕಿಯು ಹಾಕಿ ನಡುವೆ ಒಂದು ಪಾದವನಿಕ್ಕಿ ಮೇಲೆ ಮಡಿ ಹಾಸಿಕೊಂಡು ಕುಳಿತು ಅಂದಿನವಾರ ಸ್ವರದಮೇಲೆ ಮಲಗಿಸಿ ಉದಯದಲ್ಲೇಳುವಾಗ ಸ್ವರ ಪಲ್ಲಟ್ಟಿಸಿದರೆ ಆ ದಿನ ಕಾದಿದಡೆ ತನ್ನ ಬಂಟ ಗೆಲ್ಲುವನು. ಅದೇ ಸ್ವರ ವಾದರೆ ಹಾನಿ, ಮರಣ. ಇರುಳೇ ಚಂದ್ರಸ್ವರದಲ್ಲಿ ಮಲಗಿ ಹೊತ್ತೇರಿ ಏಳುವಾಗ ಚಂದ್ರನನ್ನು ಕಂಡರೆ ಆ ದಿನ ಕಾದಿದರೆ ಇಬ್ಬರು ಬಂಟರು ಸಾವರು. ಇರುಳೆ ಮಲಗುವಾಗ ಸೂರ್ಯಸ್ವರವಾದರೆ ಹೊತ್ತೇರಿ ಏಳುವಾಗ ಸೂರ್ಯನ್ನ ಕಂಡರೆ ತನ್ನ ಬಂಟ ಓಡುವ. ಪರ ಬಂಟ ಗೆಲ್ಲುವ. ಆದ ಕಾರಣ ಆ ದಿನ ಸ್ವರ ಪಲ್ಲಟವಾಗಿದ್ದರೆ ಆ ದಿನ ತನ್ನ ಗೆಲ್ಲುವನು.

## ಹಿಂದೆ ಮುಂದೆ ತಿಳಿಯುವ ಕ್ರಮ

ಕಾದುವ ವ್ಯಾಳ್ಯದಲ್ಲಿ ಚಂದ್ರಸಿದ್ದರೆ ಎಡದ ಕಾಲನು, ಎಡದ ಕೈಯ್ಯನು ಹಿಂದಿಕ್ಕಿ, ಬಲದ ಕಾಲನು ಬಲದ ಕೈಯ್ಯನು ಮುಂದಿಕ್ಕಿ ತಾನಿದ್ದಲ್ಲಿ ನಿಂತು ಅವ ತಾನಿದ್ದಲ್ಲಿಗೆ ನಡದರೆ ಅವ ತಿವಿದಬಳಿಕ ತಾ ತಿವಿದೆಡೆ ಗೆಲ್ಲುವದು. ಸೂರ್ಯನಿರ್ದಡೆ ಬಲಗಾಲ ಬಲಗೈಯ್ಯ ಹಿಂದಿಕ್ಕಿ, ಎಡದ ಕಾಲನು ಎಡದ ಕೈಯ್ಯನು ಮುಂದಿಕ್ಕಿ ಅವನಿಂದ ಮುಂದೆ ತಾನಿರಿದರೆ ಗೆಲ್ಲುವನು. ಚಂದ್ರಗೆ ಚಂದ್ರದಿಕ್ಕು, ಸೂರ್ಯಗೆ ಸೂರ್ಯದಿಕ್ಕು ಬೆನ್ನ ಮಾಡಿ ಕಾದಿಸಲು ಗೆಲ್ಲುವದು. ಈ ಕ್ರಮದಲ್ಲಿ ಸ್ವರವಾದಿಗಳು ತಿಳಿದು ಬಂಟರ ಕಾದಿಸಿ ಗೆಲ್ಲುವದು. ಕೂಟ ಕಾಳಗ ಇದಕ್ಕೆ ತತ್ವ ಕ್ರಮದಿಂದ ಭೂಬಲವ ಬೆನ್ನ ಮಾಡಿಕೊಂಡು ಆವ ಕೊತ್ತಳದಲ್ಲಿ ಪಾಪಗ್ರಹ ಕುಳಿತಿದ್ದಿತು. ಆ ಠಾವಿನಲ್ಲಿ ಆ ಗ್ರಹ ಬಂದು ಯೋಗಿಣಿಯ ಮೇಲೆ ಬಂದು ನಡಿವದು ವ್ಯಾಳ್ಯೆವರಿತು ಸೂರ್ಯಸ್ವರ ನಡದರೆ ಲಗ್ನಮಾಡಿ ಕಾದಲು ಕೋಟೆಹೋಗುವದು. ಸೂರ್ಯನಡವಾಗ ಊರಹೊರಟು ಮೇಲೆ ಬೆಳಗುವಾಗ ಸೂರ್ಯನಿರ್ದಡೆ ಮುಂದೆ ಯುಲಿ ಐವದು. ಚಂದ್ರನಮೇಲೆ ಊರಹೊರಟು ಕಾದಲು ತಾವು ಎದ್ದೋಡುವರು.

## ಮಲ್ಲಯುದ್ಧ

ಮಲ್ಲಗಳ ಗತಾಕ್ರಮವ ಪಾರ್ವತಿ ಶಿವನ ಕೇಳಿದಳು. ಎಲೆ ದೇವ, ವರ್ಣವಂದಾಗಿ ಇವರೊಳಗೆ ಗೆಲವು ಸೋಲು ಹ್ಯಾಗಾಗ ಬಹುದು ಎಂದು

ಕೇಳಲು, ಕೃಷ್ಣನು ಕಾಂಸನು ಒಂದೇ ವರ್ಣ, ಒಂದೇ ನಾಮ. ರಾಮ ರಾವಣ ಒಂದೇ ವರ್ಣ, ಒಂದೇ ನಾಮ. ಇವರೊಳಗೆ ಒಬ್ಬ ಸತ್ತು, ಒಬ್ಬ ಹ್ಯಾಗೆ ಉಳಿದ, ಹಾಗೆ ಚಂದ್ರ ಸೂರ್ಯರನರಿದು ಕಾದಿದರೆ ಒಬ್ಬ ಗೆಲ್ಲುವ, ಒಬ್ಬ ಸೋಲುವ. ಅವರ ಗತಿಯಂ ಪೇಳ್ವೆ.

ಚಂದ್ರನಾದಡೆ, ದೀರ್ಘ ಭಯದವನಾದರೆ, ಬಹಳ ಅಕ್ಷರದ ಹೆಸರಿನವನಾದರೆ ಗೆಲ್ಲುವನು ಸೂರ್ಯಸ್ವರವಾದಡೆ ವಾಮನ ಗೆಲ್ಲುವನು. ಸ್ವಲ್ಪ ಅಕ್ಷರದ ಹೆಸರಿನವ ಗೆಲ್ಲುವ. ಇಂತಿ ಏಕವರ್ಣ ಏಕನಾಮ, ಭಿನ್ನವರ್ಣ ಭಿನ್ನನಾಮದವರು ಹ್ಯಾಂಗೆ ಗೆಲ್ಲುವರೆಂದು ಈಶ್ವರನ ಪಾರ್ವತಿ ಬೆಸಗೊಂಡಳು. ದೇವಾ ದೇವಿಗೆ ಹೇಳುತಿರ್ದನು. ಚಂದ್ರಸೂರ್ಯರನರಿದವರಿಗೆ ಇದು ತಿಳಿಯಬಾಹದು ಅರಿದಲ್ಲಾ ಭೀಮಸೇನ ತನಗಿಂದ ಕೀಚಕನ ಹ್ಯಾಂಗೆ ಕೊಂದಾ? ಸೂರ್ಯನಾಡಿ ನಡವಾಗ ಮೊದಲು ಮಧ್ಯಾನ್ನ ಪರ್ಯಂತರ ಪುರ್ವಾಸಿ ನಾನಾಗಲಿ ಕೆಂಚನಾಗಲಿ ಗೆಲ್ಲುವನು. ಅಪರಾನ್ಹ ಮೊದಲಾಗಿ ಸಾಯಂಕಾಲ ಪರ್ಯಂತರ ಅಪಾರ ಆಯುಷ್ಯದವನಾಗಲಿ ಕರಿಕನಾಗಲಿ ಗೆಲ್ಲುವನು.

## ಕಾಲಜ್ಞಾನ

ಪಾರ್ವತದೇವಿ ಈಶ್ವರನ ಕಾಲಸ್ವರೂಪವಾವುದೆಂದು ಬೆಸಗೊಂಡೊಡೆ ದೇವರು ನಿರೂಪಿಸುತಿರ್ದನು. ಕೃಷ್ಣ ಪಿಂಗಳ ಪುರುಷಕಾಲದಲ್ಲಿ ಯಮುನ ಕಾಲವಲ್ಲ. ಚಂದ್ರಸೂರ್ಯರ ಯೋಗವೆ ಕಾಲವೆನಿಸಿತ್ತು. ಸೂರ್ಯಸ್ವರಾ ಅಹೋರಾತ್ರಿಯಲ್ಲಿ ಐದು ದಿನ ನಡದರೆ ಮೂರು ತಿಂಗಳಿಂದ ಮೇಲೆ ರೋಗ ಹಾನಿ, ಮರಣ. ಹತ್ತು ದಿನ ನಡದರೆ ತಿಂಗಳಿಗೆ ರೋಗ, ಹಾನಿ, ಮರಣ. ಹದನಾಲ್ಕು ದಿನ ನಡದರೆ ರೋಗ, ಹಾನಿ, ಮರಣವಾಹದು.

## ಚಂದ್ರಸ್ವರದ ಕಾಲಜ್ಞಾನ

ಚಂದ್ರ ಐದು ದಿನ ನಡದರೆ ಒಂದು ವರುಷಕ್ಕೆ ರೋಗ, ಹಾನಿ, ಮರಣ. ಹದನೈದು ದಿನ ನಡದರೆ ಆರು ತಿಂಗಳಿಗೆ ಮಹಾ

ಹಾನಿ, ವಿಘ್ನಬಾಹದು. ಇಪ್ಪತ್ತು ದಿನ ನಡದರೆ ಮೂರು ತಿಂಗಳಿಗೆ ರೋಗ, ಹಾನಿ, ಮರಣ. ಒಂದು ತಿಂಗಳ ನಡದರೆ ಕಡಿಯು ದಿನದಲ್ಲಿ ಮರಣ. ಕಾಲಬಂದದುನರಿತು ದಾನಧರ್ಮವ ಮಾಡಲಾಗಿ ಬಿಟ್ಟು ಹೋಗಿ ಕೀರ್ತಿವಂತನಾಹನು. ಯಾವನಾದರೂ ಗೆಲ್ಲುವನು. ಆದ ಕಾರಣ ರೋಗ ಸಂಭವಿಸಿದಡೆ, ಅರಸ ಕೋಪಿಸಿದಡೆ, ವ್ಯವಹಾರ ನಾಸ್ತಿಯಾಗಿ ಬಂದಡೆ, ಮಹಾಬೆಳೆ ಬೆಳೆದರೆ, ಬಂಧುಗಳ ಕೂಡ ಕದನ ಹುಟ್ಟುತ್ತ ಬಂದರೆ, ಆವ ಕಾರ್ಯ ಕೈಗೂಡದಿದ್ದರೆ ಕಾಲಬಂತೆಂದರಿವದು ಅದಕ್ಕೆ ಅಶುದ್ಧ ದೇವತಾ ತೃಪ್ತಿ, ಗುರು-ಹಿರಿಯರ ಪೂಜೆಯ ಮಾಡುವದು, ಬ್ರಹ್ಮಸಂತುಷ್ಟಿಯ ಮಾಡುವದು, ಜಪ ಹೋಮವ ಮಾಡುವದು, ಸಕಲ ಧರ್ಮಂಗಳ ಮಾಡುವದು ಆ ಕಾಲ ಬಿಟ್ಟು ಹೋಹದು. ಬಿಡದೆ ಮೃತವಾದಡೆ ತಾ ಮಾಡಿದ ಕೀರ್ತಿಯಿಂದ ತಾನು ಕಾರಣ, ತನುವಾಗಿ ಪರಮಜ್ಞಾನದಿಂದ ಕೀರ್ತಿಯೊಳಗೆ ಯಶಸ್ಸು ಆಗಿ ಕೀರ್ತಿಯುಮರಿಯಲ್ಲಿ ಇದ್ದಾನು, ಇದು ಹುಸಿಯು ಅಲ್ಲವು. ಪಾರ್ವತಿ ಪರಮೇಶ್ವರಂಗೆ ಬಿನ್ನಹಮಾಡಿ ಕೇಳಿದಳು. ಎಲೆ ದೇವಾ, ಕಾಲ ಕರ್ಮಂಗಳು ಬಂದರೆ ತಪ್ಪಿಸಿಕೊಂಬುವ ಉಪಾಯವುಂಟೇ! ಎಂದರೆ ಅಲತಿಗಿ ಬಂಣವನು, ದಾಸಾಳದ ಹೂವನ, ಗುಲಗಂಜಿ, ಚಂದ್ರ ಹವಳ, ಇಂದ್ರಗೋಪಾಳದ ಹುಳವು, ಇವರ ಕೆಂಪುವರ್ಣ, ಇರಳು-ಹಗಲು, ಕರ್ಮಂಗಳ ಕಳದು ಪರಮ ಜ್ಞಾನದಿಂದ ಏಕಭಾವದಲ್ಲ ಧ್ಯಾನವಮಾಡಲು ಮೂರು ಲೋಕ ವೈಶ್ಯವಾಹದು ಕಂಡವರು ಮನ್ನಿಸುವರು. ಅರಸು ಮನ್ನಿಸಿದರೆ ತನ್ನ ಗುರು ಮೂನಿದರೆ ಆಗ ಕಾಸಿದ ಕುಂದಳದ ವರ್ಣದ ಚಿನ್ನದ ವರ್ಣವನು, ಅವರಿಹೂವಿನ ವರ್ಣವನು, ಸಂಪಿಗಿಹೂವಿನ ವರ್ಣವನು, ಅರಿಷಣದ ವರ್ಣವನು ಇರಳು ಹಗಲು ಧ್ಯಾನಮಾಡಲು ಮೂರು ಲೋಕವು ವೈಶ್ಯವು. ತನಗೆ ಅಪಮೃತ್ಯುಬಂದಾಗ, ಸರ್ಪ ದೇವತಿಗಳುಬಂದಾಗ, ಹಾವು ಚೇಳು ಕಚ್ಚಿದಾಗ, ತನಗೆ ಆರಾಕೆ ವೈಶ್ಯವ ಇಕ್ಕಿದಾಂಗ ಸ್ಪಟಿಕವರ್ಣ ಕೊಟ್ಟ ಮಂದಿ ಸೂರ್ಯನ ದಿನದಲ್ಲಿ ಇಹನಮಾಡುವದು ಉತ್ತಮವು, ಮಧ್ಯಮ, ಕನಿಷ್ಟ. ಆರು ತಿಂಗಳು, ಮೂರು ತಿಂಗಳು, ಒಂದ ತಿಂಗಳು. ಆರು ಜಾವ, ಮೂರು ಜಾವ, ಒಂದು ಜಾವ. ಆರು ಘಳಿಗೆ, ಮೂರು ಘಳಿಗೆ, ಒಂದು ಘಳಿಗೆ ಉತ್ತಮವು, ಮಧ್ಯಮವು, ಕನಿಷ್ಟ ಫಲವು.

## ಆದಿತ್ಯವಾರ ಮಂಗಳವಾರ ಶುಕ್ಲಪಕ್ಷ ಹಗಲು ಗರುಡ

| | | | | | |
|---|---|---|---|---|---|
| ಗ | ಪಿ | ವಾ | ಕು | ನ. | ಘ |
| ಭೋ | ಗ. | ರಾ | ನಿ. | ಮ | ೬ |
| ಗ. | ರಾ | ನಿ | ಮ | ಭೋ | ೧೨ |
| ರಾ | ನಿ. | ಮ | ಭೋ | ಗ. | ೧೮ |
| ನಿ. | ಮ | ಭೋ | ಗ | ರಾ | ೨೪ |
| ಮ | ಭೋ | ಗ. | ರಾ | ನಿ. | ೩೦ |

## ಸೋಮವಾರ ಬುಧವಾರ ಶುಕ್ಲಪಕ್ಷ ಹಗಲು ಪಿಂಗಲ

| | | | | | |
|---|---|---|---|---|---|
| ಪಿ. | ವಾ | ಕು | ನ | ಗ | ಘ |
| ಭೋ. | ಗ | ರಾ | ನಿ. | ಮ | ೬ |
| ಗ. | ರಾ | ನಿ | ಮ | ಭೋ. | ೧೨ |
| ರಾ | ನಿ. | ಮ | ಭೋ | ಗ | ೧೮ |
| ನಿ. | ಮ | ಭೋ. | ಗ. | ರಾ | ೨೪ |
| ಮ | ಭೋ. | ಗ. | ರಾ | ನಿ | ೩೦ |

## ಗುರುವಾರ ಶುಕ್ಲಪಕ್ಷ ಹಗಲು ವಾಯಸ

| | | | | | |
|---|---|---|---|---|---|
| ವಾ | ಕು | ನ | ಗ | ಪಿ | ಘ |
| ಭೋ | ಗ. | ರಾ | ನಿ | ಮ | ೬ |
| ಗ. | ರಾ | ನಿ | ಮ | ಭೋ. | ೧೨ |
| ರಾ | ನಿ. | ಮ | ಭೋ. | ಗ. | ೧೮ |
| ನಿ. | ಮ | ಭೋ. | ಗ. | ರಾ | ೨೪ |
| ಮ | ಭೋ. | ಗ. | ರಾ | ನಿ | ೩೦ |

## ಶುಕ್ರವಾರ ಶುಕ್ಲಪಕ್ಷ ಹಗಲು ಕುಕ್ಕುಟ

| | | | | | |
|---|---|---|---|---|---|
| ಕು | ನ. | ಗ | ಪಿ. | ವಾ | ಘ. |
| ಭೋ. | ಗ | ರಾ. | ನಿ. | ಮ. | ೬ |
| ಗ. | ರಾ | ನಿ. | ಮ. | ಭೋ. | ೧೨ |
| ರಾ | ನಿ. | ಮ. | ಭೋ. | ಗ. | ೧೮ |
| ನಿ | ಮ | ಭೋ | ಗ. | ರಾ. | ೨೪ |
| ಮ | ಭೋ | ಗ | ರಾ. | ನಿ. | ೩೦ |

## ಶನಿವಾರ ಶುಕ್ಲಪಕ್ಷ ಹಗಲು ನೌಲು

| | | | | | |
|---|---|---|---|---|---|
| ನೌ. | ಗ. | ಪಿ. | ವಾ. | ಕು. | ಘ. |
| ಭೋ. | ಗ. | ರಾ | ನಿ. | ಮ | ೬ |
| ಗ. | ರಾ. | ನಿ. | ಮ. | ಭೋ | ೧೨ |
| ರಾ | ನಿ. | ಮ. | ಭೋ. | ಗ | ೧೮ |
| ನಿ. | ಮ. | ಭೋ. | ಗ | ರಾ | ೨೪ |
| ಮ. | ಭೋ | ಗ. | ರಾ | ನಿ | ೩೦ |

## ಆದಿತ್ಯವಾರ ಮಂಗಳವಾರ ಶುಕ್ಲಪಕ್ಷ ರಾತ್ರಿ ನೌಲು

| | | | | | |
|---|---|---|---|---|---|
| ನೌ. | ಪಿ | ವಾ | ಕು. | ಗ. | ಘ |
| ಭೋ | ಗ. | ರಾ | ನಿ | ಮ | ೬. |
| ಗ. | ರಾ | ನಿ. | ಮ | ಭೋ. | ೧೨ |
| ರಾ | ನಿ. | ಮ | ಭೋ. | ಗ. | ೧೮ |
| ನಿ. | ಮ | ಭೋ | ಗ. | ರಾ | ೨೪ |
| ಮ | ಭೋ. | ಗ. | ರಾ | ನಿ. | ೩೦ |

## ಸೋಮವಾರ ಬುಧವಾರ ಶುಕ್ಲಪಕ್ಷ ರಾತ್ರಿ ಕುಕ್ಕುಟ

| | | | | | |
|---|---|---|---|---|---|
| ಕು | ನಾ. | ಪಿ. | ಗ. | ವಾ | ಘ |
| ಭೋ | ಗ. | ರಾ | ನಿ. | ಮು | ೬ |
| ಗ. | ರಾ | ನಿ. | ಮು | ಭೋ. | ೧೨ |
| ರಾ | ನಿ | ಮು | ಭೋ. | ಗ. | ೧೮ |
| ನಿ. | ಮು | ಭೋ | ಗ. | ರಾ | ೨೪ |
| ಮು | ಭೋ | ಗ. | ರಾ | ನಿ. | ೩೦ |

## ಗುರುವಾರ ಶುಕ್ಲಪಕ್ಷ ರಾತ್ರಿ ವಾಯಸ

| | | | | | |
|---|---|---|---|---|---|
| ವಾ | ಪಿ. | ಗ | ನ | ಕು | ಘ |
| ಭೋ | ಗ | ರಾ | ನಿ | ಮು | ೬ |
| ಗ. | ರಾ | ನಿ | ಮು | ಭೋ. | ೧೨ |
| ರಾ | ನಿ. | ಮು | ಭೋ. | ಗ | ೧೮ |
| ನಿ. | ಮು | ಭೋ. | ಗ | ರಾ | ೨೪ |
| ಮು | ಭೋ. | ಗ. | ರಾ | ನಿ | ೩೦ |

## ಶುಕ್ರವಾರ ಶುಕ್ಲಪಕ್ಷ ರಾತ್ರಿ ಪಿಂಗಲ

| | | | | | |
|---|---|---|---|---|---|
| ಪಿ | ಗ | ನಾ. | ಕು | ವಾ | ಘ |
| ಭೋ | ಗ. | ರಾ | ನಿ | ಮು | ೬ |
| ಗ. | ರಾ | ನಿ. | ಮು | ಭೋ. | ೧೨ |
| ರಾ | ನಿ. | ಮು | ಭೋ. | ಗ. | ೧೮ |
| ನಿ. | ಮು | ಭೋ. | ಗ. | ರಾ | ೨೪ |
| ಮು | ಭೋ. | ಗ. | ರಾ | ನಿ | ೩೦ |

## ಶನಿವಾರ ಶುಕ್ಲಪಕ್ಷ ರಾತ್ರಿ ಗರುಡ

| | | | | | |
|---|---|---|---|---|---|
| ಗ. | ನೌ. | ಕು | ವಾ. | ಪಿ | ಘ. |
| ಭೋ. | ಗ | ರಾ. | ನಿ. | ಮ. | ೬ |
| ಗ. | ರಾ | ನಿ | ಮ. | ಭೋ. | ೧೨ |
| ರಾ | ನಿ. | ಮ. | ಭೋ. | ಗ. | ೧೮ |
| ನಿ | ಮ | ಭೋ | ಗ | ರಾ. | ೨೪ |
| ಮ | ಭೋ | ಗ | ರಾ. | ನಿ. | ೩೦ |

## ಆದಿತ್ಯವಾರ ಮಂಗಳವಾರ ಕೃಷ್ಣಪಕ್ಷ ಹಗಲು ಕುಕ್ಕುಟ

| | | | | | |
|---|---|---|---|---|---|
| ಕು | ವಾ. | ಪಿ | ಗ. | ನೌ. | ಘ. |
| ಭೋ. | ಗ. | ರಾ | ನಿ. | ಮ | ೬ |
| ಗ. | ರಾ. | ನಿ. | ಮ. | ಭೋ | ೧೨ |
| ರಾ. | ನಿ. | ಮ. | ಭೋ. | ಗ | ೧೮ |
| ನಿ | ಮ. | ಭೋ. | ಗ | ರಾ | ೨೪ |
| ಮ. | ಭೋ | ಗ | ರಾ | ನಿ | ೩೦ |

## ಶನಿವಾರ ಸೋಮವಾರ ಕೃಷ್ಣಪಕ್ಷ ಉದಯ ನೌಲು

| | | | | | |
|---|---|---|---|---|---|
| ನೌ. | ಕು. | ವಾ | ಪಿ | ಗ. | ಘ |
| ಭೋ. | ಗ. | ರಾ | ನಿ | ಮ | ೬ |
| ಗ. | ರಾ | ನಿ. | ಮ | ಭೋ. | ೧೨ |
| ರಾ | ನಿ. | ಮ | ಭೋ. | ಗ. | ೧೮ |
| ನಿ. | ಮ | ಭೋ | ಗ. | ರಾ | ೨೪ |
| ಮ | ಭೋ. | ಗ. | ರಾ | ನಿ. | ೩೦ |

## ಬುಧವಾರ ಕೃಷ್ಣಪಕ್ಷ ಉದಯ ವಾಯಸ

| | | | | | |
|---|---|---|---|---|---|
| ವಾ | ಪಿ | ಗ. | ನಾ. | ಕು | ಘ |
| ಭೋ | ಗ. | ರಾ | ನಿ. | ಮ | ೬ |
| ಗ. | ರಾ | ನಿ | ಮ | ಭೋ. | ೧೨ |
| ರಾ | ನಿ. | ಮ | ಭೋ | ಗ. | ೧೮ |
| ನಿ. | ಮ | ಭೋ. | ಗ. | ರಾ | ೨೪ |
| ಮ | ಭೋ. | ಗ. | ರಾ | ನಿ. | ೩೦ |

## ಗುರುವಾರ ಕೃಷ್ಣಪಕ್ಷ ಉದಯ ಪಿಂಗಲಿ

| | | | | | |
|---|---|---|---|---|---|
| ಪಿ. | ಗ | ನಾ. | ಕು | ವಾ | ಘ |
| ಭೋ. | ಗ | ರಾ | ನಿ | ಮ | ೬ |
| ಗ. | ರಾ | ನಿ | ಮ | ಭೋ. | ೧೨ |
| ರಾ | ನಿ | ಮ | ಭೋ | ಗ | ೧೮ |
| ನಿ. | ಮ | ಭೋ | ಗ | ರಾ | ೨೪ |
| ಮ | ಭೋ | ಗ | ರಾ | ನಿ | ೩೦ |

## ಶುಕ್ರವಾರ ಕೃಷ್ಣಪಕ್ಷ ಉದಯ ಗರುಡ

| | | | | | |
|---|---|---|---|---|---|
| ಗ. | ನಾ. | ಕು | ವಾ | ಪಿ | ಘ |
| ಭೋ | ಗ. | ರಾ | ನಿ | ಮ | ೬ |
| ಗ | ರಾ | ನಿ | ಮ | ಭೋ. | ೧೨ |
| ರಾ | ನಿ. | ಮ | ಭೋ | ಗ. | ೧೮ |
| ನಿ | ಮ | ಭೋ. | ಗ. | ರಾ | ೨೪ |
| ಮ | ಭೋ. | ಗ. | ರಾ | ನಿ | ೩೦ |

## ಆದಿತ್ಯವಾರ ಮಂಗಳವಾರ ಕೃಷ್ಣಪಕ್ಷ ರಾತ್ರಿ ಪಿಂಗಲಿ

| ಪಿ | ವಾ | ಕು | ನಾ. | ಗ. | ಘ. |
|---|---|---|---|---|---|
| ಭೋ. | ಗ | ರಾ. | ನಿ. | ಮು. | ೬ |
| ಗ. | ರಾ | ನಿ | ಮು. | ಭೋ | ೧೨ |
| ರಾ | ನಿ | ಮು | ಭೋ. | ಗ. | ೧೮ |
| ನಿ. | ಮು | ಭೋ | ಗ | ರಾ. | ೨೪ |
| ಮು | ಭೋ | ಗ | ರಾ. | ನಿ | ೩೦ |

## ಬುಧವಾರ ಕೃಷ್ಣಪಕ್ಷ ರಾತ್ರಿ ವಾಯಸ

| ವಾ | ಪಿ. | ನಾ. | ಗ | ಕು | ಘ. |
|---|---|---|---|---|---|
| ಭೋ. | ಗ | ರಾ | ನಿ. | ಮು | ೬ |
| ಗ. | ರಾ | ನಿ. | ಮು. | ಭೋ | ೧೨ |
| ರಾ. | ನಿ. | ಮು | ಭೋ. | ಗ | ೧೮ |
| ನಿ | ಮು. | ಭೋ | ಗ | ರಾ | ೨೪ |
| ಮು. | ಭೋ | ಗ | ರಾ | ನಿ | ೩೦ |

## ಗುರುವಾರ ಕೃಷ್ಣಪಕ್ಷ ರಾತ್ರಿ ಕುಕ್ಕುಟ

| ಕು | ನಾ. | ಗ | ಪಿ | ವಾ | ಘ |
|---|---|---|---|---|---|
| ಭೋ | ಗ | ರಾ | ನಿ | ಮು | ೬ |
| ಗ. | ರಾ | ನಿ | ಮು | ಭೋ | ೧೨ |
| ರಾ | ನಿ | ಮು | ಭೋ. | ಗ. | ೧೮ |
| ನಿ | ಮು | ಭೋ | ಗ. | ರಾ | ೨೪ |
| ಮು | ಭೋ | ಗ. | ರಾ | ನಿ | ೩೦ |

## ಶುಕ್ರವಾರ ಕೃಷ್ಣಪಕ್ಷ ರಾತ್ರಿ ನೌಲು

| | | | | | |
|---|---|---|---|---|---|
| ನೌ. | ಗ. | ಪಿ | ವಾ | ಕು | ಘ |
| ಭೋ। | ಗ | ರಾ | ನಿ | ಮ | ೬ |
| ಗ | ರಾ | ನಿ | ಮ | ಭೋ. | ೧೨ |
| ರಾ | ನಿ. | ಮ | ಭೋ. | ಗ. | ೧೮ |
| ನಿ | ಮ | ಭೋ. | ಗ. | ರಾ | ೨೪ |
| ಮ | ಭೋ. | ಗ. | ರಾ | ನಿ | ೩೦ |

## ಶನಿವಾರ ಸೋಮವಾರ ಕೃಷ್ಣಪಕ್ಷ ರಾತ್ರಿ ಗರುಡ

| | | | | | |
|---|---|---|---|---|---|
| ಗ | ಪಿ. | ವಾ | ಕು | ನೌ | ಘ |
| ಭೋ. | ಗ | ರಾ | ನಿ | ಮ | ೬ |
| ಗ. | ರಾ | ನಿ | ಮ | ಭೋ। | ೧೨ |
| ರಾ | ನಿ | ಮ | ಭೋ. | ಗ. | ೧೮ |
| ನಿ. | ಮ | ಭೋ. | ಗ. | ರಾ | ೨೪ |
| ಮ | ಭೋ. | ಗ. | ರಾ | ನಿ | ೩೦ |

# ಪಂಚಪಕ್ಷಿ ಶಾಸ್ತ್ರವು

ಭಾನುಭೌಮಖೇರುಂಡಂ ಬುಧಚಂದ್ರೆ ಪಿಂಗಲಸ್ತಥಾ ।
ಗುರುವಾರೆ ವಾಯಸಂಚ ಭೃಗುವಾರೆ ಕಕ್ಕುಟಸ್ಯ ।
ಮಂದವಾರೆ ಮಯೂರಕಃ ॥

ಇದು ಶುಕ್ಲಪಕ್ಷ ಲಕ್ಷಣ.

ಮಂದಚಂದ್ರೆ ಮಯೂರಂಚ ಭಾನುಭೌಮಂಚ ಕುಕ್ಕುಟಂ ।
ಬುಧುವಾರೆ ವಾಯುಸಂಚ ಗರುವಾರೆ ಪಿಂಗಲಸ್ತಥಾ ।
ಭೃಗುವಾರೆ ಭೇರುಂಡಂಚಃ ॥

ಇದು ಕೃಷ್ಣಪಕ್ಷದ ಲಕ್ಷಣ ಅಕ್ಷರ ಪಕ್ಷಿ ನಿಜ ಅಕ್ಷರ ಗರುಡ. ಗುಡಸು ಪಿಂಗಲ, ಕೊಂಬು ವಾಯುಸ, ಮೆಲತೆ ಕುಕ್ಕಟ, ವಾತಾ ಗೋತಾ ನವಿಲು. ಮೂಡಲು ಗರುಡ, ದಕ್ಷಿಣ ಪಿಂಗಲಿ, ಪಶ್ಚಿಮ ವಾಯುಸ, ಉತ್ತರ ಕಕ್ಕುಟ, ಈಶಾನ್ಯಾದಿ ನಾಲ್ಕು ಕೋಣೆ ನವಿಲು.

# ಆಕಶವಾಸ ನವಿಲು ಭೋಜನದ ಫಲ

ರಾಜ್ಯಸುಭಿಕ್ಷಮಾರೋಗ್ಯಂ ಸ್ರುಷ್ಟಿದೃಷ್ಟಿ ಸರಂಜಿಯಂ ।
ಸೌಖ್ಯಸೌಭಾಗ್ಯಶೋಭನಂಚ ಆಯುರ್ಭೋಗ ಮಹಾಲಾಭಂ
ಪಕ್ಷಿಂಚ ಭುಕ್ತಿಲಕ್ಷಣಂ ॥

ಅಂತ್ಯಾಂತ ಲಾಭವುಂಟೆ ಅಂದರೆ ಮಹಾ ಲಾಭವೆಂದು ಹೇಳುವದು. ರೋಗವಾದಿತೆಂದರೆ ಮರಣವೆಂದು ಹೇಳುವದು. ಉಳಿದ ಶುಭಕಾರ್ಯಂಗಳಿಗೆ ಮಹಾ ಲೇಸು ಎಂದು ಹೇಳುವದು. ಅವರು ನುಡಿದಂತೆ ನಿಜವೆಂದು ಹೇಳುವದು.

ಅರ್ಗಮತಿ ವೃಷ್ಟಿಂಚೈವ ವಿಬ್ರುಷ್ಟಂ ಧನಸಂಚಯಃ ।
ದುರಗಮನಾ ಪ್ರಯಾಣಂಚ ಪಕ್ಷಿಂಚ ಭುಕ್ತಿಲಕ್ಷಣಂ ॥

ಅರ್ಘವುಂಟೆಂದರೆ ಉಂಟು ಮಳೆ ಉಂಟೆಂದರೆ ಮಹಾ ವೃಷ್ಟಿಯು ಎಂದು ಹೇಳುವದು. ಹೋದ ವಸ್ತು ಬಂದೀತೆಂದು ಕೇಳಿದರೆ ಬಾರದೆಂದು ಹೇಳುವದು. ರೋಗ ವಾದಿತೆಂದು ಕೇಳಿದರೆ ಮಾಯುದೆಂದು ಹೇಳುವದು.

# ಗಮನ ಲಕ್ಷಣ

## (ರಾಜ್ಯದ ಫಲಂ)

ಭಯಂ ಸೌಖ್ಯಂ ಅಕ್ಷಯ ರೋಗನಾಶನಂ ।
ಸ್ತ್ರೀಸಂಗಂ ಅಲ್ಪವೃಷ್ಟಿಃ ಶ್ಯಸಮರ್ತಸು ರಾಜ್ಯಲಕ್ಷಣಂ ॥

ಜಯವು, ಸೌಖ್ಯವು, ಅಕ್ಷಯವು, ರೋಗನಾಶವು, ಸ್ತ್ರೀಯರಸಂಗವು. ಅಲ್ಪವೃಷ್ಟಿಪ್ರಮಾಣ್ಯವೆಂದರೆ, ಸಮರ್ಥತ್ವವು ಬಾಹುದೆಂದರೆ ಪಕ್ಷಿರಾಜ ಮಾಡುವಾಗ್ಗೆ ಆವದೊಂದು ಕಾರ್ಯವು ಆದಾವೆಂದು ಹೇಳುವದು.

# ನಿದ್ರೆಯ ಫಲ

**ಯಾತ್ರೆಹೋ ನಿದ್ರಾಣಾಂ ವೃಷ್ಟಿಕಾರ್ಯಚ ಹಾನಿಚ ।**
**ಅನರ್ಥಂ ದೀರ್ಘರೋಗಂಚ ಪಕ್ಷಿಣಾಂ ಸುಪ್ತಿಲಕ್ಷಣಂ ॥**

ನಿದ್ರೆಯಮಾಡುವ ಕಾಲದಲ್ಲಿ ತೆರಳಿ ಹೋಗೆಂದು ಹೇಳುವದು. ಮಳಿ ಯಾದೀತೆಂದು ಕೇಳಿದರೆ ತಡಿಯಿಂದ ಎಂದು ಹೇಳುವದು. ಕಾರ್ಯವಾದೀತೆ ಎಂದು ಕೇಳಿದರೆ ಆಗದೆಂದು ಹೇಳುವದು. ಸ್ತ್ರೀಯರು ಕಂಡಾರೆಂದು ಕೇಳಿದರೆ ಕಾಣರೆಂದು ಹೇಳುವದು. ಅರ್ಥವುಂಟೆಂದರೆ ಅನರ್ಥವೆಂದು ಹೇಳುವದು.

# ಮರಣದ ಫಲ

**ಅಪಮೃತ್ಯುಭಯಂಚೈವ ರೋಗಿಮೃತ್ಯುವಿನಾಶಂಚ ।**
**ಸರ್ವಕಾರ್ಯಹಾನಿಚ ಅಥ ದೇವಶ್ಚೈವ ಪಕ್ಷಿಣಾಂ ಮೃತ್ಯುಲಕ್ಷಣಂ ॥**

ಅಪಮೃತ್ಯುವುಂಟೆಂದರೆ ಇಲ್ಲವೆಂದು ಹೇಳುವದು. ಯಾವ ಕಾರ್ಯ ಕೇಳಿದರೂ ಆಗದೆಂದು ಹೇಳುವದು.

# ದೇವರ ಹೇಳುವದು

ವ್ಯಾಧಿಯುವರು ಕೇಳಿದರೆ ಅಂದಿನದ ಪಕ್ಷಿ ಭೋಜನದಲ್ಲಿದ್ದರೆ ಸತ್ತಾರೆಂದು ಹೇಳುವದು. ಮರಣದಲ್ಲಿದ್ದರೆ ಬದಿಕ್ಯಾರೆಂದು ಹೇಳುವದು. ಗಮನದಲ್ಲಿದ್ದರೆ ಕಾಲಿಂದಬಂದ ಭೂತವೆಂದು ಹೇಳುವದು. ಅದಕ್ಕೆ ಕೆಂಪಿನ ಆಹಾರ ಕೊಡುವದು. ರಾಜ್ಯದಲ್ಲಿದ್ದರೆ ಆದಿ ದೇವರು ಎಂದು ಹೇಳುವದು. ನಿದ್ರೆಯಲ್ಲಿದ್ದರೆ ಕಾಳಬ್ರಹ್ಮವೆಂದು ಹೇಳುವದು. ಇದಕ್ಕೆ ಒಬ್ಬ ಹಸಿದವನ ಭೋಜನವ ಮಾಡಿಸಲು ಲೇಸಕ್ಕುಂ.

# ದಿಕ್ಕ ಪಕ್ಷಿಯಮೇಲೆ ದೇವರ ಹೇಳುವದು

**ಭೇರುಂಡಗೆ ದೇವರು** ಬಸವಣ್ಣ, ಸರ್ಪ ಬ್ರಹ್ಮನ ಮೂಲಸ್ಥಾನದ ಕಲ್ಲಯ್ಯದೇವರು.

**ಪಿಂಗಲಿಗೆ ದೇವರು** ಮೇಲುಚಕ್ರದಲ್ಲಿಯ ವೀರಭದ್ರ, ಹಿರಿಯದೇವಿ, ಜಕ್ಕಣಿ.

**ವಾಯುಸಗೆ ದೇವರು** ಹನುಮಂತದೇವರು, ವೀರನಾರಾಯಣ.

**ಕುಕ್ಕುಟಗೆ ದೇವರು** ಯಕ್ಕಲಾತಿ ಮೈಲಾರದೇವರು, ಚೌಡೇಶ್ವರಿ.

**ಮಯೂರಗೆ ದೇವರು** ಈಶ್ವರಾ ಕರಿಯಾದೇವರು, ಜಟ್ಟಿಂಗ ಬ್ರಹ್ಮ ಇಪರಿಯಲ್ಲಿ ಹೇಳುವದು.

# ಪಕ್ಷಿಯ ಮಾತು ಹೇಳುವದು

ಭೋಜನ ಕೆಂಪು ಗಮನ, ಬಿಳಿದು ರಾಜ್ಯ, ಕರಿದು ನಿದ್ರಿ, ಹಸರು ಬಿಳಿದು ಮರಣ, ಧೂಮ್ರವರ್ಣ ಸುಣ್ಣಕಲ್ಲ ಛಾಯಾ.

# ದಿಕ್ಕಿನ ಮಾತು ಹೇಳುವದು

ಭೇರುಂಡ ಹೊಂಬಣ್ಣ, ಪಿಂಗಲಿ ಬಿಳಿದು, ವಾಯುಸ ರಕ್ತವರ್ಣ. ಕುಕ್ಕುಟ ತಾಂಬ್ರವರ್ಣ, ಮಯೂರ ಪಂಚವರ್ಣ.

## ತಾನು ಊರಿಗೆ ಹೋಗಬೇಕಾದರೆ

ತನ್ನ ಪಕ್ಷಿ ಭೋಜನ, ಗಮನ, ರಾಜ್ಯದಲ್ಲಿದ್ದರೆ ಹೋಗಬಹುದು. ನಿದ್ರಿ, ಮರಣದಲ್ಲಿದ್ದರೆ ಹೋಗಲಾಗದು.

## ವ್ಯವಹಾರದಲ್ಲಿ

ತಾನು ಕೊಂಬುವಲ್ಲಿ, ಕೊಡುವಲ್ಲಿ ರಾಜ್ಯ, ಭೋಜನ, ಗಮನದಲ್ಲಿ ಇರಬೇಕು. ಧಾನ್ಯ, ಕಬ್ಬಿಣವನ್ನು ಧೊರಿಗಳನ್ನು ನಿದ್ರಿ, ಮರಣದಲ್ಲಿ ಕಾಣಿಸಿಕೊಂಬುವದು.

ಭೇರುಂಡಗೆ ದಿನ ೧೫, ಜಾವ ೧೫. ಪಿಂಗಲಿಗೆ ದಿನ ೫೦, ಜಾವ ೫೦. ವಾಯಸಗೆ ದಿನ ೨೦, ಜಾವ ೨೦. ಕುಕ್ಕುಟಗೆ ದಿನ ೨೦೦, ಜಾವ ೩೦. ಮಯೂರಗೆ ದಿನ ೬೦, ಜಾವ ೬೦. ಮತ್ತೆ ದಿನ ೬೦೦ ಇಷ್ಟು ದಿನಕ್ಕೆ ಫಲಶ್ರುತಿಯು ಕಾಣಬಹುದು.

## ಊರಿಗೆ ಹೋದವರು ಎಂದು ಬರುವರೆಂದು ಕೇಳಿದರೆ

ಪಕ್ಷಿ ಭೋಜನಮಾಡುವಾಗ್ಗೆ ಊರಿಗೆ ಹೋದವರು ಬಂದಾರೆಂದು ಕೇಳಿದರೆ ೫ ದಿನಕ್ಕೆ ಬಂದಾರೆಂದು ಹೇಳುವದು. ರಾಜ್ಯಕ್ಕೆ ೨ ದಿನಕ್ಕೆ ಬಂದಾರೆಂದು ಹೇಳುವದು. ನಿದ್ರಿಯಲ್ಲಿ ಇದ್ದರೆ ಅದೇ ದಿನಕ್ಕೆ ಬಂದಾರೆಂದು ಹೇಳುವದು. ಮರಣಕ್ಕೆ ೧ ದಿನಕ್ಕೆ ಬಂದಾರೆಂದು ಹೇಳುವದು. ಗಮನಕ್ಕೆ ೧ ಘಳಿಗಿ ೧ ತಿಂಗಳಿಗೆ ಬಂದಾರೆಂದು ಹೇಳುವದು. ೫ ಚಕ್ರಕ್ಕೆ ೫ ಘಳಿಗಿ ೫ ತಿಂಗಳು ಇದೇ ಪ್ರಕಾರ ಹೇಳುವದು.

## ಕಾರ್ಯ ಆಗುವದೋ ಇಲ್ಲವೋ ಎಂದು ಕೇಳಿದರೆ

ಕಂದ ಇಂದ್ರನೊಳ್, ನೈಋತ್ಯನೊಳ್, ಸಂದಿರ್ದ ವರುಣ ಕುಬೇರನ ದೆಶಿಯೊಳ್ ಬಂದು ಬಾಯುಳಿದು ಬೆಸಗೊಳ್ಳೆ ಬಂದುದು ಶುಭಕಾರ್ಯವೆಂದು ಪೇಳ್ವಲಕ್ಕು. ಈಶಾನ್ಯ, ಅಗ್ನಿ, ಯಮ, ವಾಯು ಈ ನಾಲ್ಕು ದಿಕ್ಕಿನೊಳ್ ಬೆಸಗೊಳ್ಳೆ ಕಾರ್ಯ ಹಾನಿ.

# ಪಂಚಪಕ್ಷಿ ರಾಶಿಯು ಹೇಳುವದು

## ಭೇರುಂಡಗೆ ರಾಶಿ

ಮೇಷ, ವೃಷಭ, ಮಿಥುನ ಇವು ಮೂರು. ನಕ್ಷತ್ರ ಹೇಳವದು— ಅಶ್ವಿನಿ, ಭರಣಿ, ಕೃತ್ತಿಕ, ರೋಹಿಣಿ, ಮೃಗಶಿರ, ಆರಿದ್ರಾ ಈ ೬ ನಕ್ಷತ್ರ.

## ಪಿಂಗಲಿಗೆ ರಾಶಿ

ಕರ್ಕಾಟಕ, ಸಿಂಹ. ನಕ್ಷತ್ರವು— ಪುನರ್ವಸು, ಪುಷ್ಯ, ಆಶ್ಲೇಷ, ಮಘೆ, ಹುಬ್ಬಿ ಈ ೫ ಪಿಂಗಲಿಗೆ.

## ವಾಯುಸಗೆ ರಾಶಿ

ಕನ್ಯಾ, ತುಲಾ, ವೃಶ್ಚಿಕ. ಇದಕ್ಕೆ ನಕ್ಷತ್ರವು— ಉತ್ರಿ, ಹಸ್ತಾ, ಚಿತ್ತಿ, ಸ್ವಾತಿ, ವಿಶಾಖಾ, ಅನುರಾಧಾ ಈ ೬ ವಾಯುಸಗೆ.

## ಕುಕ್ಕುಟಗೆ ರಾಶಿ

ಧನು, ಮಕರ. ಇದಕ್ಕೆ ನಕ್ಷತ್ರವು— ಜ್ಯೇಷ್ಠ, ಮೂಲ, ಪೂರ್ವಾಷಾಢ, ಉತ್ರಾಷಾಢ, ಶ್ರವಣ, ಧನಿಷ್ಠ ಈ ಆರು ಕುಕ್ಕುಟಗೆ ಸಲುವಳಿ.

## ನೌಲಿಗೆ ರಾಶಿ

ಕುಂಭ, ಮೀನ. ಇದಕ್ಕೆ ನಕ್ಷತ್ರವು— ಶತತಾರಾ, ಪೂರ್ವಾಭಾದ್ರಪದ, ಉತ್ರಾಭಾದ್ರಪದ ಈ ೫ ಸಲುವಳಿ.

# ಕೃಷ್ಣಪಕ್ಷದ ಫಲ

ಆದಿತ್ಯವಾರ ಮಂಗಳವಾರ ಭೋಜನ ಎಂಬ ಹೆಸರು ೬ ಘಳಿಗಿ ತನಕ ಆದರ ಹೆಸರು ಬಾಲಸ್ವರಾ. ಗಮನದ ಹೆಸರು ಗಮನಸ್ವರಾ ಅದರಸ್ವರಾ ಹೃದಯಸ್ವರಾ ಕುಮಾರಸ್ವರಾ. ಮರಣವೆಂಬುವದು ಮೃತ್ಯುಸ್ವರಾ. ನಿದ್ರೆಯೆಂಬುವದು ರಾಜಸ್ವರಾ ಐದು ಸ್ವರಗಳು.

## ಸ್ವರಭೇದಗಳು

ರಾಜ್ಯಸ್ವರದಲ್ಲಿ ಪಿಂಗಲಿದಿಕ್ಕಿನಲ್ಲಿ ಕೇಳಿದರೆ ಊರಿಗೆ ಹೋದವರು ಆಲಸ್ಯವೆಂಬುವದು. ನಷ್ಟವಾದಿತೆಂದರೆ ನಷ್ಟವಾದಿತೆಂದು ಹೇಳುವದು. ಜಯವುಂಟೆಂದು ಕೇಳಿದರೆ ಜಯವುಂಟೆಂದು ಹೇಳುವದು. ರೋಗಿಗೆ ಕೇಳಿದರೆ ಮರಣವೆಂಬುವದು. ಲಾಭವಾದಿತೆಂದರೆ ಲಾಭವೆಂದು ಹೇಳುವದು. ಮಳೆ ಬಂದಿತೆಂದರೆ ಬಂದಿತೆಂದು ಹೇಳುವದು. ಬಾರದೆಂದು ಕೇಳಿದರೆ ಬಾರದೆಂದು ಹೇಳುವದು. ಅವರು ಕೇಳಿದ ಹಾಗೆ ಹೇಳುವದು.

# ಗಮನ ಲಕ್ಷಣ

ದನ ಹೋದದ್ದು ಕೇಳಿದರೆ ಬಾರದು ಹೋದ ವಡವಿಯು ಕೇಳಿದರೆ ಬಾರದು. ಊರಿಗೆ ಹೋದವರು ಕೇಳಿದರೆ ನಾಲ್ಕು ದಿನದಾಗ ಬಂದಾರು ಎಂದು ಹೇಳುವದು. ಅರ್ಥವುಂಟೆಂದರೆ ಕುಂದಾಗುವದು. ಇದು ಗಮನ ಲಕ್ಷಣಂ.

ಸೋಮುವಾರಬುಧವಾರ ಭೋಜನದಲ್ಲಿ ಕೇಳಿದರೆ ಮರಣವೆಂಬುವದು. ಉಳಿದ ಸರ್ವ ಕೆಲಸ ಲೇಸೆಂದು ಹೇಳುವದು.

# ನಿದ್ರಿಯು ಫಲ

ಲೇಸಿಗೆ ಕೇಳಿದರೆ ಆಗದೆಂದು ಹೇಳುವದು. ಮಳಿ ಕೇಳಿದರೆ ಅತಿ ಕಂಡಲ ಮಂಡಲ. ನಷ್ಟಕಾರ್ಯ ಕೇಳಿದರೆ ಮಹಾ ಲೇಸು ಎಂದು ಹೇಳುವದು. ಕಾಲಟ್ಟಿಯರು ಕೇಳಿದರೆ ಮಹಾ ಲೇಸು. ಅಂಸುಕಾರ್ಯವಾಗದು. ತನ್ನ ಪಕ್ಷಿ ನಿದ್ರಿಯಲ್ಲಿ ಇರಲಾಗದು. ನಿದ್ರಿಯಂತೆ ನಿದ್ರಿಫಲ. ಕುಮಾರ ಸ್ವರದಲ್ಲಿ ಶುಭಕಾರ್ಯಂಗಳ ಮಾಡಲಾಗದು, ಆವದೊಂದು ಪ್ರಶ್ನೆ ಕೇಳಿದರೆ ಮಹಾ ಲೇಸು. ರಾಜ್ಯಸ್ವರದಲ್ಲಿ ಶುಭಗಳು ಅಶುಭಗಳು ೨ ಕಾರ್ಯಂಗಳು ಆದಿತೆಂದು ಹೇಳುವದು. ನಿದ್ರಿಯಮೇಲೆ, ಮರಣದಮೇಲೆ ಹೋಗಲಾಗದು. ಸಾಲಕೊಂಬುವದಕ್ಕೆ ಆತನ ಪಕ್ಷಿಯನರಿದು ಭೋಜನದ ವ್ಯಾಳ್ಯಕ್ಕೆ ಮಹಾ ಲೇಸು.

# ಶಿವಲಿಖಿತದ ಫಲ

ವ್ಯತೀಪಾತ, ವೈಧೃತಿ, ಹುಣ್ಣಿವೆ, ಅಮವಾಸಿ, ವಾರಾ, ತಿಥಿ, ಸೂರ್ಯಗ್ರಹಣ, ಚಂದ್ರಗ್ರಹಣ, ಯೋಗ ನೋಡಲಾಗದು; ಪಯಣಕ್ಕೆ ಸಿದ್ಧಿ. ಶೂನ್ಯಬಂದರೆ ಮರಣ, ಚಕ್ರಬಂದರೆ ಬಹು ವಿಳಂಬವಾಗಿ ಚಿಂತಿ ಆಗುವದು. ಉದ್ಯೋಗ ವ್ಯಾಪಾರದವರಿಗೆ, ಅಮೃತಬಂದರೆ ಕಾರ್ಯ ಆಗುವದು. ಮಹೇಂದ್ರಬಂದರೆ ಆಗಬಾರದಕಾರ್ಯ ಆಗುವದು, ಅಮೃತಬಂದರೆ ಸಕಲ ಕೆಲಸ ಮದುವೆ, ಮುಂಜೆ, ಲೇಸಾದ ಕಾರ್ಯ ಮಾಡಬಹುದು.

## ಆಶ್ವಿನ, ಕಾರ್ತಿಕ, ಮಾರ್ಗಶಿರ, ಪುಷ್ಯ, ಮಾಘ ಈ ಪಂಚ ಮಾಸಗಳ ಫಲಶ್ರುತಿ ಹೇಳುವದು.

| ಆದಿತ್ಯವಾರ ಹಗಲು | | ಸೋಮವಾರ ಹಗಲು | | ಮಂಗಳವಾರ ಹಗಲು | | ಬುಧವಾರ ಹಗಲು | | ಗುರುವಾರ ಹಗಲು | | ಶುಕ್ರವಾರ ಹಗಲು | | ಶನಿವಾರ ಹಗಲು | |
|---|---|---|---|---|---|---|---|---|---|---|---|---|---|
| ಘ. | ಫಲ | ಘ. | ಫಲ | ಘ. | ಫಲ | ಘ. | ಫಲ | ಘ. | ಫಲ | ಘ. | ಫಲ | ಘ. | ಫಲ |
| ೬ | ಅಮೃತ | ೪ | ಅಮೃತ | ೨ | ಅಮೃತ | ೨ | ಶೂನ್ಯ | ೪ | ಅಮೃತ | ೨ | ಅಮೃತ | ೬ | ಚಕ್ರ |
| ೮ | ಚಕ್ರ | ೪ | ಚಕ್ರ | ೨ | ಶೂನ್ಯ | ೪ | ಮಹೇಂದ್ರ | ೬ | ಚಕ್ರ | ೬ | ಚಕ್ರ | ೬ | ಅಮೃತ |
| ೬ | ಅಮೃತ | ೮ | ಅಮೃತ | ೧೦ | ಅಮೃತ | ೨ | ಅಮೃತ | ೪ | ಅಮೃತ | ೬ | ಅಮೃತ | ೨ | ಮಹೇಂದ್ರ |
| ೨ | ಶೂನ್ಯ | ೧೬ | ಚಕ್ರ | ೬ | ಚಕ್ರ | ೨ | ಶೂನ್ಯ | ೪ | ಶೂನ್ಯ | ೬ | ಚಕ್ರ | ೮ | ಅಮೃತ |
| ೨ | ಮಹೇಂದ್ರ | | | ೬ | ಶೂನ್ಯ | ೪ | ಚಕ್ರ | ೪ | ಅಮೃತ | ೮ | ಅಮೃತ | ೮ | ಶೂನ್ಯ |
| ೪ | ಶೂನ್ಯ | | | ೪ | ಚಕ್ರ | ೬ | ಅಮೃತ | ೬ | ಶೂನ್ಯ | ೨ | ಶೂನ್ಯ | | |
| ೨ | ಚಕ್ರ | | | | | ೮ | ಶೂನ್ಯ | ೨ | ಅಮೃತ | | | | |
| | | | | | | ೨ | ಅಮೃತ | | | | | | |

# ಆಶ್ವಿನ, ಕಾರ್ತಿಕ, ಮಾರ್ಗಶಿರ, ಪುಷ್ಯ, ಮಾಘ

## ಈ ಪಂಚ ಮಾಸಗಳ ಫಲಶ್ರುತಿ ಹೇಳುವದು.

| ಆದಿತ್ಯವಾರ ರಾತ್ರಿ | | ಸೋಮವಾರ ರಾತ್ರಿ | | ಮಂಗಳವಾರ ರಾತ್ರಿ | | ಬುಧವಾರ ರಾತ್ರಿ | | ಗುರುವಾರ ರಾತ್ರಿ | | ಶುಕ್ರವಾರ ರಾತ್ರಿ | | ಶನಿವಾರ ರಾತ್ರಿ | |
|---|---|---|---|---|---|---|---|---|---|---|---|---|---|
| ಘ | ಫಲ | ಘ. | ಫಲ | ಘ. | ಫಲ | ಘ | ಫಲ | ಘ. | ಫಲ | ಘ. | ಫಲ | ಘ. | ಫಲ |
| ೨ | ಶೂನ್ಯ | ೬ | ಚಕ್ರ | ೬ | ಚಕ್ರ | ೪ | ಚಕ್ರ | ೨ | ಶೂನ್ಯ | ೪ | ಚಕ್ರ | ೧೪ | ಅಮೃತ |
| ೪ | ಚಕ್ರ | ೮ | ಅಮೃತ | ೨ | ಅಮೃತ | ೪ | ಅಮೃತ | ೮ | ಅಮೃತ | ೪ | ಅಮೃತ | ೪ | ಶೂನ್ಯ |
| ೬ | ಅಮೃತ | ೮ | ಚಕ್ರ | ೨ | ಶೂನ್ಯ | ೮ | ಚಕ್ರ | ೬ | ಚಕ್ರ | ೪ | ಶೂನ್ಯ | ೪ | ಚಕ್ರ |
| ೬ | ಚಕ್ರ | ೨ | ಅಮೃತ | ೬ | ಅಮೃತ | ೬ | ಅಮೃತ | ೪ | ಅಮೃತ | ೨ | ಮಹೇಂದ್ರ | ೨ | ಶೂನ್ಯ |
| ೪ | ಅಮೃತ | ೬ | ಚಕ್ರ | ೪ | ಶೂನ್ಯ | ೮ | ಶೂನ್ಯ | ೬ | ಚಕ್ರ | ೬ | ಚಕ್ರ | ೪ | ಚಕ್ರ |
| ೪ | ಚಕ್ರ | | | ೨ | ಮಹೇಂದ್ರ | | | ೨ | ಮಹೇಂದ್ರ | ೪ | ಶೂನ್ಯ | ೨ | ಅಮೃತ |
| ೨ | ಶೂನ್ಯ | | | ೪ | ಅಮೃತ | | | ೨ | ಶೂನ್ಯ | ೬ | ಅಮೃತ | | |
| ೨ | ಚಕ್ರ | | | ೪ | ಶೂನ್ಯ | | | | | | | | |

## ಫಾಲ್ಗುಣ, ಚೈತ್ರ, ವೈಶಾಖ, ಶ್ರಾವಣ, ಭಾದ್ರಪದ

### ಈ ಪಂಚ ಮಾಸಗಳ ಫಲಶ್ರುತಿ ಹೇಳುವದು.

| ಆದಿತ್ಯವಾರ ಹಗಲು | | ಸೋಮವಾರ ಹಗಲು | | ಮಂಗಳವಾರ ಹಗಲು | | ಬುಧವಾರ ಹಗಲು | | ಗುರುವಾರ ಹಗಲು | | ಶುಕ್ರವಾರ ಹಗಲು | | ಶನಿವಾರ ಹಗಲು | |
|---|---|---|---|---|---|---|---|---|---|---|---|---|---|
| ಘ. | ಫಲ | ಘ | ಫಲ | ಘ. | ಫಲ | ಘ | ಫಲ | ಘ. | ಫಲ | ಘ. | ಫಲ | ಘ. | ಫಲ |
| ೨ | ಮಹೇಂದ್ರ | ೪ | ಅಮೃತ | ೪ | ಚಕ್ರ | ೪ | ಚಕ್ರ | ೬ | ಅಮೃತ | ೨ | ಶೂನ್ಯ | ೪ | ಶೂನ್ಯ |
| ೨ | ಚಕ್ರ | ೮ | ಚಕ್ರ | ೨ | ಶೂನ್ಯ | ೪ | ಅಮೃತ | ೪ | ಶೂನ್ಯ | ೧೬ | ಅಮೃತ | ೪ | ಚಕ್ರ |
| ೮ | ಅಮೃತ | ೬ | ಅಮೃತ | ೬ | ಅಮೃತ | ೨ | ಶೂನ್ಯ | ೪ | ಚಕ್ರ | ೮ | ಚಕ್ರ | ೪ | ಶೂನ್ಯ |
| ೬. | ಚಕ್ರ | ೬ | ಚಕ್ರ | ೬ | ಚಕ್ರ | ೪ | ಚಕ್ರ | ೬ | ಅಮೃತ | ೨ | ಅಮೃತ | ೪ | ಅಮೃತ |
| ೧೦ | ಶೂನ್ಯ | ೪ | ಅಮೃತ | ೨ | ಅಮೃತ | ೨ | ಮಹೇಂದ್ರ | ೬ | ಚಕ್ರ | ೨ | ಶೂನ್ಯ | ೬ | ಚಕ್ರ |
| ೨ | ಮಹೇಂದ್ರ | ೨ | ಶೂನ್ಯ | ೪ | ಶೂನ್ಯ | ೪ | ಅಮೃತ | ೪ | ಅಮೃತ | | | ೪ | ಶೂನ್ಯ |
| | | | | ೬ | ಅಮೃತ | ೪ | ಚಕ್ರ | | | | | ೪ | ಚಕ್ರ |
| | | | | | | ೪ | ಅಮೃತ | | | | | | |

## ಫಾಲ್ಗುಣ, ಚೈತ್ರ, ವೈಶಾಖ, ಶ್ರಾವಣ, ಭಾದ್ರಪದ
### ಈ ಪಂಚ ಮಾಸಗಳ ಫಲಶ್ರುತಿ ಹೇಳುವದು.

| ಆದಿತ್ಯವಾರ ರಾತ್ರಿ ಘ. | ಫಲ | ಸೋಮವಾರ ರಾತ್ರಿ ಘ. | ಫಲ | ಮಂಗಳವಾರ ರಾತ್ರಿ ಘ. | ಫಲ | ಬುಧವಾರ ರಾತ್ರಿ ಘ | ಫಲ | ಗುರುವಾರ ರಾತ್ರಿ ಘ. | ಫಲ | ಶುಕ್ರವಾರ ರಾತ್ರಿ ಘ. | ಫಲ | ಶನಿವಾರ ರಾತ್ರಿ ಘ. | ಫಲ |
|---|---|---|---|---|---|---|---|---|---|---|---|---|---|
| ೪ | ಶೂನ್ಯ | ೨ | ಚಕ್ರ | ೪ | ಅಮೃತ | ೨ | ಶೂನ್ಯ | ೪ | ಚಕ್ರ | ೨ | ಶೂನ್ಯ | ೨ | ಶೂನ್ಯ |
| ೪ | ಮಹೇಂದ್ರ | ೬ | ಅಮೃತ | ೨ | ಶೂನ್ಯ | ೬ | ಅಮೃತ | ೪ | ಮಹೇಂದ್ರ | ೪ | ಚಕ್ರ | ೪ | ಚಕ್ರ |
| ೨ | ಶೂನ್ಯ | ೬ | ಚಕ್ರ | ೨ | ಅಮೃತ | ೪ | ಶೂನ್ಯ | ೨ | ಅಮೃತ | ೬ | ಅಮೃತ | ೪ | ಅಮೃತ |
| ೪ | ಅಮೃತ | ೮ | ಅಮೃತ | ೪ | ಚಕ್ರ | ೬ | ಚಕ್ರ | ೮ | ಚಕ್ರ | ೪ | ಶೂನ್ಯ | ೪ | ಚಕ್ರ |
| ೨ | ಶೂನ್ಯ | ೮ | ಚಕ್ರ | ೬ | ಶೂನ್ಯ | ೪ | ಶೂನ್ಯ | ೪ | ಅಮೃತ | ೬ | ಅಮೃತ | ೬ | ಅಮೃತ |
| ೬ | ಚಕ್ರ | | | ೪ | ಅಮೃತ | ೮ | ಅಮೃತ | ೪ | ಶೂನ್ಯ | ೨ | ಮಹೇಂದ್ರ | ೪ | ಚಕ್ರ |
| ೬ | ಶೂನ್ಯ | | | ೨ | ಚಕ್ರ | | | ೪ | ಅಮೃತ | ೬ | ಶೂನ್ಯ | ೨ | ಅಮೃತ |
| ೨ | ಮಹೇಂದ್ರ | | | ೨ | ಅಮೃತ | | | | | | | ೪ | ಶೂನ್ಯ |
| | | | | ೪ | ಶೂನ್ಯ | | | | | | | | |

## ಜ್ಯೇಷ್ಠ, ಆಷಾಢ

## ಈ ಎರಡು ಮಾಸಗಳ ಫಲಶ್ರುತಿ ಹೇಳುವದು.

| ಆದಿತ್ಯವಾರ ಹಗಲು | | ಸೋಮವಾರ ಹಗಲು | | ಮಂಗಳವಾರ ಹಗಲು | | ಬುಧವಾರ ಹಗಲು | | ಗುರುವಾರ ಹಗಲು | | ಶುಕ್ರವಾರ ಹಗಲು | | ಶನಿವಾರ ಹಗಲು | |
|---|---|---|---|---|---|---|---|---|---|---|---|---|---|
| ಘ. | ಫಲ | ಘ. | ಫಲ | ಘ. | ಫಲ | ಘ | ಫಲ | ಘ. | ಫಲ | ಘ. | ಫಲ | ಘ. | ಫಲ |
| ೪ | ಶೂನ್ಯ | ೮ | ಚಕ್ರ | ೪ | ಅಮೃತ | ೬ | ಶೂನ್ಯ | ೨ | ಅಮೃತ | ೪ | ಶೂನ್ಯ | ೪ | ಶೂನ್ಯ |
| ೮ | ಅಮೃತ | ೪ | ಅಮೃತ | ೪ | ಚಕ್ರ | ೮ | ಅಮೃತ | ೪ | ಶೂನ್ಯ | ೧೪ | ಅಮೃತ | ೪ | ಚಕ್ರ |
| ೬ | ಚಕ್ರ | ೨ | ಶೂನ್ಯ | ೮ | ಶೂನ್ಯ | ೬ | ಚಕ್ರ | ೬ | ಚಕ್ರ | ೮ | ಚಕ್ರ | ೨ | ಶೂನ್ಯ |
| ೬ | ಅಮೃತ | ೪ | ಚಕ್ರ | ೬ | ಚಕ್ರ | ೮ | ಅಮೃತ | ೬ | ಅಮೃತ | ೨ | ಅಮೃತ | ೬ | ಅಮೃತ |
| ೪ | ಚಕ್ರ | ೬ | ಅಮೃತ | ೨ | ಮಹೇಂದ್ರ | ೨ | ಶೂನ್ಯ | ೨ | ಶೂನ್ಯ | ೨ | ಶೂನ್ಯ | ೨ | ಶೂನ್ಯ |
| ೨ | ಶೂನ್ಯ | ೬ | ಮಹೇಂದ್ರ | ೪ | ಚಕ್ರ | | | ೪ | ಚಕ್ರ | | | ೨ | ಅಮೃತ |
| | | | | ೨ | ಅಮೃತ | | | ೬ | ಅಮೃತ | | | ೪ | ಶೂನ್ಯ |
| | | | | | | | | | | | | ೬ | ಚಕ್ರ |

## ಜ್ಯೇಷ್ಠ, ಆಷಾಢ

## ಈ ಎರಡು ಮಾಸಗಳ ಫಲಶ್ರುತಿ ಹೇಳುವದು.

| ಆದಿತ್ಯವಾರ ರಾತ್ರಿ ಘ. | ಫಲ | ಸೋಮವಾರ ರಾತ್ರಿ ಘ. | ಫಲ | ಮಂಗಳವಾರ ರಾತ್ರಿ ಘ. | ಫಲ | ಬುಧವಾರ ರಾತ್ರಿ ಘ. | ಫಲ | ಗುರುವಾರ ರಾತ್ರಿ ಘ. | ಫಲ | ಶುಕ್ರವಾರ ರಾತ್ರಿ ಘ. | ಫಲ | ಶನಿವಾರ ರಾತ್ರಿ ಘ. | ಫಲ |
|---|---|---|---|---|---|---|---|---|---|---|---|---|---|
| ೪ | ಅಮೃತ | ೪ | ಶೂನ್ಯ | ೪ | ಶೂನ್ಯ | ೧೦ | ಅಮೃತ | ೪ | ಶೂನ್ಯ | ೪ | ಅಮೃತ | ೪ | ಚಕ್ರ |
| ೪ | ಶೂನ್ಯ | ೮ | ಚಕ್ರ | ೪ | ಚಕ್ರ | ೨ | ಚಕ್ರ | ೪ | ಅಮೃತ | ೨ | ಶೂನ್ಯ | ೪ | ಅಮೃತ |
| ೪ | ಚಕ್ರ | ೮ | ಅಮೃತ | ೬ | ಅಮೃತ | ೪ | ಶೂನ್ಯ | ೪ | ಶೂನ್ಯ | ೬ | ಅಮೃತ | ೬ | ಚಕ್ರ |
| ೬ | ಅಮೃತ | ೪ | ಚಕ್ರ | ೪ | ಚಕ್ರ | ೪ | ಅಮೃತ | ೬ | ಚಕ್ರ | ೬ | ಶೂನ್ಯ | ೪ | ಅಮೃತ |
| ೮ | ಚಕ್ರ | ೨ | ಶೂನ್ಯ | ೨ | ಅಮೃತ | ೬ | ಚಕ್ರ | ೬ | ಅಮೃತ | ೮ | ಅಮೃತ | ೪ | ಶೂನ್ಯ |
| ೪ | ಅಮೃತ | ೪ | ಶೂನ್ಯ | ೨ | ಶೂನ್ಯ | ೪ | ಶೂನ್ಯ | ೬ | ಚಕ್ರ | ೨ | ಮಹೇಂದ್ರ | ೪ | ಚಕ್ರ |
| | | | | ೪ | ಚಕ್ರ | | | | | ೨ | ಶೂನ್ಯ | ೨ | ಅಮೃತ |
| | | | | ೪ | ಅಮೃತ | | | | | | | ೨ | ಚಕ್ರ |

# ವರ್ಗದ ಅಕ್ಷರಗಳು

| | | | |
|---|---|---|---|
| ಕ ಖ ಗ ಘ ಙ | ಚ ಛ ಜ ಝ ಞ | ಟ ಠ ಡ ಢ ಣ | ತ ಥ ದ ಧ ನ |
| ಬೆಕ್ಕು | ಸಿಂಹ | ಸ್ವಾನ | ಸರ್ಪ |
| ಪ ಫ ಬ ಭ ಮ | ಯ ರ ಲ ವ ಶ | ಸ ಹ ಳ ಕ್ಷ | ಅ ಆ ಇ ಈ |
| ಇಲಿ | ಗಜ | ಯರಳೆ | ಗರುಡ |

| ಪಾದ | ಫಳಿಗಿ | ಪಾದ | ಫಳಿಗಿ | ಪಾದ | ಫಳಿಗಿ | ಪಾದ | ಫಳಿಗಿ |
|---|---|---|---|---|---|---|---|
| ೮೧ | ೧ | ೧ | ೧೬ | ೭ | ೯ | ೯ | ೨೪ |
| ೩೯ | ೨ | ೨ | ೧೭ | ೬ | ೧೦ | ೧೦ | ೨೫ |
| ೨೪ | ೩ | ೩ | ೧೮ | ೫ | ೧೧ | ೧೨ | ೨೬ |
| ೧೬ | ೪ | ೪ | ೧೯ | ೪ | ೧೨ | ೧೬ | ೨೭ |
| ೧೨ | ೫ | ೫ | ೨೦ | ೩ | ೧೩ | ೨೪ | ೨೮ |
| ೧೦ | ೬ | ೬ | ೨೧ | ೨ | ೧೪ | ೩೯ | ೨೯ |
| ೯ | ೭ | ೭ | ೨೨ | ೧ | ೧೫ | ೮೧ | ೩೦ |
| ೮ | ೮ | ೮ | ೨೩ | | | | |

ಪೂರ್ವ (ಇಂದ್ರ) ದಿಕ್ಕಿನಲ್ಲಿ
ಆದಿತ್ಯವಾರ
ಶನಿ

ಆಗ್ನೇಯ ದಿಕ್ಕಿನಲ್ಲಿ
ಆದಿತ್ಯವಾರ
ರಾಹು

ದಕ್ಷಿಣ (ಯಮ) ದಿಕ್ಕಿನಲ್ಲಿ
ಆದಿತ್ಯವಾರ
ಸೂರ್ಯ

ನೈಋತ್ಯ ದಿಕ್ಕಿನಲ್ಲಿ
ಆದಿತ್ಯವಾರ
ಚಂದ್ರ

ಪಶ್ಚಿಮ (ವರುಣ) ದಿಕ್ಕಿನಲ್ಲಿ
ಆದಿತ್ಯವಾರ
ಮಂಗಳ

ವಾಯುವ್ಯ ದಿಕ್ಕಿನಲ್ಲಿ
ಆದಿತ್ಯವಾರ
ಬುಧ

ಉತ್ತರ (ಕುಬೇರ) ದಿಕ್ಕಿನಲ್ಲಿ
ಆದಿತ್ಯವಾರ
ಗುರು

ಈಶಾನ್ಯ ದಿಕ್ಕಿನಲ್ಲಿ
ಆದಿತ್ಯವಾರ
ಶುಕ್ರ

## ಆದಿತ್ಯವಾರದ

## ಕುಂಡಲಿ ತಿಳಿಯಬೇಕು.

ಪೂರ್ವ (ಇಂದ್ರ) ದಿಕ್ಕಿನಲ್ಲಿ
ಸೋಮವಾರ
ಶುಕ್ರ

ಈಶಾನ್ಯದಿಕ್ಕಿನಲ್ಲಿ
ಸೋಮವಾರ
ಗುರು

ಅಗ್ನಿದಿಕ್ಕಿನಲ್ಲಿ
ಸೋಮವಾರ
ಶನಿ

ಉತ್ತರ (ಕುಬೇರ) ದಿಕ್ಕಿನಲ್ಲಿ
ಸೋಮವಾರ
ಬುಧ

ಸೋಮವಾರದ
ಕುಂಡಲಿ ತಿಳಯುಬೇಕು.

ದಕ್ಷಿಣ (ಯಮ) ದಿಕ್ಕಿನಲ್ಲಿ
ಸೋಮವಾರ
ರಾಹು

ವಾಯುವ್ಯದಿಕ್ಕಿನಲ್ಲಿ
ಸೋಮವಾರ
ಮಂಗಳ

ನೈಋುತ್ಯದಿಕ್ಕಿನಲ್ಲಿ
ಸೋಮವಾರ
ಸೂರ್ಯ

ಪಶ್ಚಿಮ (ವರುಣ) ದಿಕ್ಕಿನಲ್ಲಿ
ಸೋಮವಾರ
ಚಂದ್ರ

ಪೂರ್ವ (ಇಂದ್ರ) ದಿಕ್ಕಿನಲ್ಲಿ
ಮಂಗಳವಾರ
ಗುರು

ಈಶಾನ್ಯದಿಕ್ಕಿನಲ್ಲಿ
ಮಂಗಳವಾರ
ಬುಧ

ಅಗ್ನಿದಿಕ್ಕಿನಲ್ಲಿ
ಮಂಗಳವಾರ
ಶುಕ್ರ

ಉತ್ತರ (ಕುಬೇರ) ದಿಕ್ಕಿನಲ್ಲಿ
ಮಂಗಳವಾರ
ಮಂಗಳ

## ಮಂಗಳವಾರದ
## ಕುಂಡಲಿ ತಿಳಿಯುಬೇಕು.

ದಕ್ಷಿಣ (ಯಮ) ದಿಕ್ಕಿನಲ್ಲಿ
ಮಂಗಳವಾರ
ಶನಿ

ವಾಯುವ್ಯದಿಕ್ಕಿನಲ್ಲಿ
ಮಂಗಳವಾರ
ಚಂದ್ರ

ನೈಋತ್ಯದಿಕ್ಕಿನಲ್ಲಿ
ಮಂಗಳವಾರ
ರಾಹು

ಪಶ್ಚಿಮ (ವರುಣ) ದಿಕ್ಕಿನಲ್ಲಿ
ಮಂಗಳವಾರ
ಸೂರ್ಯ

| | | |
|---|---|---|
| ಈಶಾನ್ಯದಿಕ್ಕಿನಲ್ಲಿ<br>ಬುಧುವಾರ<br>ಮಂಗಳ | ಪೂರ್ವ (ಇಂದ್ರ) ದಿಕ್ಕಿನಲ್ಲಿ<br>ಬುಧುವಾರ<br>ಬುಧ | ಅಗ್ನಿದಿಕ್ಕಿನಲ್ಲಿ<br>ಬುಧುವಾರ<br>ಗುರು |
| ಉತ್ತರ (ಕುಬೇರ) ದಿಕ್ಕಿನಲ್ಲಿ<br>ಬುಧುವಾರ<br>ಚಂದ್ರ | ಬುಧುವಾರದ<br>ಕುಂಡಲಿ ತಿಳಯುಬೇಕು. | ದಕ್ಷಿಣ (ಯಮ) ದಿಕ್ಕಿನಲ್ಲಿ<br>ಬುಧುವಾರ<br>ಶಂಕ್ರ |
| ವಾಯುವ್ಯದಿಕ್ಕಿನಲ್ಲಿ<br>ಬುಧುವಾರ<br>ಸೂರ್ಯ | ಪಶ್ಚಿಮ (ವರುಣ) ದಿಕ್ಕಿನಲ್ಲಿ<br>ಬುಧುವಾರ<br>ರಾಹು | ನೈಋತ್ಯದಿಕ್ಕಿನಲ್ಲಿ<br>ಬುಧುವಾರ<br>ಶನಿ |

ಪೂರ್ವ (ಇಂದ್ರ) ದಿಕ್ಕಿನಲ್ಲಿ
ಗುರುವಾರ
ಮಂಗಳ

ಈಶಾನ್ಯದಿಕ್ಕಿನಲ್ಲಿ
ಗುರುವಾರ
ಚಂದ್ರ

ಅಗ್ನಿದಿಕ್ಕಿನಲ್ಲಿ
ಗುರುವಾರ
ಬುಧ

ಉತ್ತರ (ಕುಬೇರ) ದಿಕ್ಕಿನಲ್ಲಿ
ಗುರುವಾರ
ಸೂರ್ಯ

## ಗುರುವಾರದ

**ಕುಂಡಲಿ ತಿಳಿಯುಬೇಕು.**

ದಕ್ಷಿಣ (ಯಮ) ದಿಕ್ಕಿನಲ್ಲಿ
ಗುರುವಾರ
ಗುರು

ವಾಯುವ್ಯದಿಕ್ಕಿನಲ್ಲಿ
ಗುರುವಾರ
ರಾಹು

ನೈಋತ್ಯದಿಕ್ಕಿನಲ್ಲಿ
ಗುರುವಾರ
ಶುಕ್ರ

ಪಶ್ಚಿಮ (ವರುಣ) ದಿಕ್ಕಿನಲ್ಲಿ
ಗುರುವಾರ
ಶನಿ

ಈಶಾನ್ಯದಿಕ್ಕಿನಲ್ಲಿ
ಶುಕ್ರವಾರ
ಸೂರ್ಯ

ಪೂರ್ವ (ಇಂದ್ರ) ದಿಕ್ಕಿನಲ್ಲಿ
ಶುಕ್ರವಾರ
ಚಂದ್ರ

ಅಗ್ನಿದಿಕ್ಕಿನಲ್ಲಿ
ಶುಕ್ರವಾರ
ಮಂಗಳ

ಉತ್ತರ (ಕುಬೇರ) ದಿಕ್ಕಿನಲ್ಲಿ
ಶುಕ್ರವಾರ
ರಾಹು

ಶುಕ್ರವಾರದ
**ಕುಂಡಲಿ ತಿಳಿಯುಬೇಕು.**

ದಕ್ಷಿಣ (ಯಮ) ದಿಕ್ಕಿನಲ್ಲಿ
ಶುಕ್ರವಾರ
ಬುಧ

ವಾಯುವ್ಯದಿಕ್ಕಿನಲ್ಲಿ
ಶುಕ್ರವಾರ
ಶನಿ

ಪಶ್ಚಿಮ (ವರುಣ) ದಿಕ್ಕಿನಲ್ಲಿ
ಶುಕ್ರವಾರ
ಶುಕ್ರ

ನೈಋತ್ಯದಿಕ್ಕಿನಲ್ಲಿ
ಶುಕ್ರವಾರ
ಗುರು

ಈಶಾನ್ಯದಿಕ್ಕಿನಲ್ಲಿ
ಶನಿವಾರ
ರಾಹು

ಪೂರ್ವ (ಇಂದ್ರ) ದಿಕ್ಕಿನಲ್ಲಿ
ಶನಿವಾರ
ಸೂರ್ಯ

ಆಗ್ನಿದಿಕ್ಕಿನಲ್ಲಿ
ಶನಿವಾರ
ಚಂದ್ರ

ಉತ್ತರ (ಕುಬೇರ) ದಿಕ್ಕಿನಲ್ಲಿ
ಶನಿವಾರ
ಶನಿ

ಶನಿವಾರದ
ಕುಂಡಲಿ ತಿಳಯಬೇಕು.

ದಕ್ಷಿಣ (ಯಮ) ದಿಕ್ಕಿನಲ್ಲಿ
ಶನಿವಾರ
ಮಂಗಳ

ವಾಯುವ್ಯದಿಕ್ಕಿನಲ್ಲಿ
ಶನಿವಾರ
ಶುಕ್ರ

ಪಶ್ಚಿಮ (ವರುಣ) ದಿಕ್ಕಿನಲ್ಲಿ
ಶನಿವಾರ
ಗುರು

ನೈಋತ್ಯದಿಕ್ಕಿನಲ್ಲಿ
ಶನಿವಾರ
ಬುಧ

# ಸ್ತ್ರೀ ಜಾತಕ



## ಮೈನೆರದ ತಿಥಿಯ ಫಲ

ಪಾಡ್ಯದಲ್ಲಿ ನೆರದರೆ ಬ್ಯಾರೆ ಹೋಗುವಳು. ಬಿದಿಗಿಯಲ್ಲಿ ನೆರದರೆ ರೋಗಿ ಆಗುವಳು. ತದಗಿಯಲ್ಲಿ ನೆರದರೆ ಅಪಮೃತ್ಯುವಾಗುವಳು. ಚವತಿಯಲ್ಲಿ ನೆರದರೆ ಬಡತನ ಅನುಭೋಗಿಸುವಳು. ಪಂಚಮಿಯಲ್ಲಿ ನೆರದರೆ ಧನವ ಕೂಡನಿಕ್ಕುವಳು. ಷಷ್ಠಿಯಲ್ಲಿ ನೆರದರೆ ಜಗಳಗಂಟೆ ಆಗುವಳು ಸಪ್ತಮಿಯಲ್ಲಿ ನೆರದರೆ ಒಳ್ಳೆ ಗುಣದವಳು ಆಗುವಳು. ಅಷ್ಟಮಿಯಲ್ಲಿ ನೆರದರೆ ದಯವಂತಿ ಆಗುವಳು. ನವಮಿಯಲ್ಲಿ ನೆರದರೆ ರೋಗಿಯಾಗಿ ಬದಕುವಳು ದಶಮಿಯಲ್ಲಿ ನೆರದರೆ ಪುತ್ರವಂತಿ ಆಗುವಳು. ಏಕಾದಶಿಯಲ್ಲಿ ನೆರದರೆ ವಿಚಾರವಂತಿ ಆಗುವಳು. ದ್ವಾದಶಿಯಲ್ಲಿ ನೆರದರೆ ನಿಂದಾ ಮಾಡಿಸಿಕೊಂಬುವಳು. ತ್ರಯೋದಶಿಯಲ್ಲಿ ನೆರದರೆ ಸಕಲರಿಂದ ಪಾಡ ಅನಿಸಿಕೊಂಬುವಳು. ಚತುರ್ದಶಿಯಲ್ಲಿ ನೆರದರೆ ದುರಾಚಾರ ನಡತಿಯಿಂದ ನಡಿಯುವಳು. ಪೌರ್ಣಿಮೆಯಲ್ಲಿ ನೆರದರೆ ದುಃಖ ಅನುಭೋಗಿಸುವಳು.

## ವಾರದ ಫಲ

ಆದಿತ್ಯವಾರ ನೆರದರೆ ವ್ಯಾಧಿಯಿಂದ ಒಣಗುವಳು. ಸೋಮವಾರ ನೆರದರೆ ಪತಿವ್ರತಿಯಾಗುವಳು. ಮಂಗಳವಾರ ನೆರದರೆ ಅಪಮೃತ್ಯುವಿಗೆ ಒಳಗಾಗುವಳು. ಬುಧವಾರ ನೆರದರೆ ಧಾನ್ಯಸಮೃದ್ಧಿಯಿಂದ ಬಾಳುವಳು. ಗುರುವಾರ ನೆರದರೆ ಬಂಧು-ಬಳಗಕ್ಕೆ ಸುಖದಲ್ಲಿ ಇದ್ದು ಮುತ್ತೈದಿಯಾಗಿ ಮರಣಹೊಂದುವಳು. ಶುಕ್ರವಾರ ನೆರದರೆ ಸೌಭಾಗ್ಯಲಕ್ಷ್ಮಿಯಾಗಿ ಬಾಳುವಳು. ಶನಿವಾರ ನೆರದರೆ ಪಾಪಿಯಾಗಿ ಗಿರಣಿಹುಣ್ಣಿನಿಂದ ಮರಣ ಹೊಂದುವಳು.

# ದಿಕ್ಕಿನಮೇಲೆ ಹೆಣ್ಣಿನಬಣ್ಣ ಹೇಳುವದು

## ಇಂದ್ರನಲ್ಲಿ ನಿಂತು ಕೇಳಲು

ಹೆಣ್ಣಿನ ತನು ಕೆಂಪು, ಮುಖಾ ನೀಳವು, ಗಲ್ಲ ತಿಳವು, ಗುಳ್ಳಿ ಗಣ್ಣು, ಬಟ್ಟ ಕುಚ, ಕೇಶ ಗುರಳು, ಪರವರ ತೆರವು, ಆಕೆಯು ಜಾತಕದಲ್ಲಿ ಹಸ್ತನಿ, ಆ ಹೆಣ್ಣಿಗೆ ಐದು ಮಕ್ಕಳ ಫಲವುಂಟು.

## ಅಗ್ನಿಯಲ್ಲಿ ನಿಂತು ಕೇಳಲು

ತನವು ಕೆಂಪು, ಕುಚ ಗಾತ್ರ, ಬಟ್ಟ ಮುಖವು, ಕಣ್ಣು ದೊಡ್ಡವು, ಗುಲದೆರವು, ಮಂಡಿ ಉನ್ನ, ಆಕೆಯು ಗುಣವಂತಿ, ಜಾತಕದಲ್ಲಿ ಪದ್ಮಿನಿ, ಆಕಿಗೆ ಎಂಟು ಮಕ್ಕಳ ಫಲವು.

## ಯಮನಲ್ಲಿ ನಿಂತು ಕೇಳಲು

ತನು ಶಾಮವರ್ಣ, ಕುಚ ಗಾತ್ರ, ಮುಖದೆರವು, ಮಂಡಿ ಉನ್ನತ, ಕೇಶ ಕಿರಿದು, ನೇತ್ರಗಳು ದೊಡ್ಡವು, ಕಡಿ ಕೆಂಪಾಗಿ ಕಾಣಿಸುತ್ತಿಹವು, ಆಕಿಗೆ ಮೂರು ಸಂಗ ಉಂಟು. ಆಕಿ ಜಾತಕದಲ್ಲಿ ಶಂಕಿನಿ, ಆಕಿಗೆ ಎಂಟು ಮಕ್ಕಳ ಫಲವುಂಟು

## ನೈಋತ್ಯದಲ್ಲಿ ನಿಂತು ಕೇಳಲು

ಆ ಹೆಣ್ಣಿನ ತನು ಕೆಂಪು, ಉದ್ದನ್ನವಳು, ಕೊರಳು ಕಿರಿದು, ಮುಖ ಬಟ್ಟವು, ಗಲ್ಲದಮೇಲೆ ರೋಮವುಂಟು, ಆಕಿ ಜಾತಕದಲ್ಲಿ ಚಿತ್ತಿನಿ, ಆಕಿಗೆ ಎಂಟು ಮಕ್ಕಳ ಫಲವುಂಟು.

## ವರುಣನಲ್ಲಿ ನಿಂತು ಕೇಳಲು

ಹೆಣ್ಣಿನ ತನುವು ಕರಿದು, ಎರಡು ಕಡಿಯಲ್ಲಿ ಪ್ರೀತಿಯುಳ್ಳವಳು, ಅವಳು ಗಂಡನಮೇಲೆ ಪ್ರೀತಿಯುಳ್ಳವಳು, ಕೇಶ ಉನ್ನತ, ಜಾತಕದಲ್ಲಿ ಆಕಿ ಹಸ್ತನಿ, ಅವಳಿಗೆ ಎಂಟು ಮಕ್ಕಳ ಫಲವುಂಟು.

## ವಾಯುವ್ಯದಲ್ಲಿ ನಿಂತು ಕೇಳಲು

ತನು ಸಾದವರ್ಣ, ಆಕಿಗೆ ಬಲದತೊಡಿಯಲ್ಲಿ ಮಚ್ಚೆವುಂಟು, ಗಂಡನ ಮೇಲೆ ಪ್ರೀತಿಯುಳ್ಳವಳು, ಜಾತಕದಲ್ಲಿ ಕಮಲಮುಖಿಯುಳು, ಮೊದಲು ಗಂಡು ಹಡೆವಳು, ನಾಲ್ಕು ಹೆಣ್ಣು ಹಡೆವಳು.

## ಕುಬೇರನಲ್ಲಿ ನಿಂತು ಕೇಳಲು

ಆ ಹೆಣ್ಣಿನ ತನು ಶಾಮವರ್ಣ, ಆಕಿ ಪತಿವ್ರತಿ, ಗಂಡನಮೇಲೆ ಪ್ರೀತಿಯುಳ್ಳವಳು, ನಡುಬೆನ್ನಿನಮೇಲೆ ಸುಳಿಯುಂಟು, ಹಸ್ತದಲ್ಲಿ ಮೂರು ರೇಖೆಯುಂಟು, ಮಹಾ ಭಾಗ್ಯವಂತಿ, ಬಟ್ಟಮುಖಾ, ದೊಡ್ಡ ಕಣ್ಣು, ಜಾತಕದಲ್ಲಿ ಕಮಲಮುಖಿಯುಳು.

## ಈಶಾನ್ಯದಲ್ಲಿ ನಿಂತು ಕೇಳಲು

ತನುವು ಸಾದಗರದು, ಹೊಟ್ಟೆಯಮೇಲೆ ಮಚ್ಚೆವುಂಟು, ಗಂಡನ ಮೇಲೆ ಪ್ರೀತಿಯಿಲ್ಲವು, ಆಕಿ ಜಾತಕದಲ್ಲಿ ಚಿತ್ತಿನಿ, ಅವಳಿಗೆ ಎಂಟು ಮಕ್ಕಳ ಫಲವುಂಟು.

# ನಕ್ಷತ್ರದ ಫಲ

**ಅಶ್ವಿನಿಯಲ್ಲಿ ನೆರದರೆ** ಮಹಾ ಲೇಸು. ಐದು ವರುಷದಮೇಲೆ ಫಲವುಂಟು.

**ಭರಣಿಯಲ್ಲಿ ನೆರದರೆ** ಮಹಾ ಲೇಸು. ಐದು ಸಂವತ್ಸರದಮೇಲೆ ಫಲವುಂಟು.

**ಕೃತ್ತಿಕದಲ್ಲಿ ನೆರದರೆ** ಗಂಡಗೆ ಹೀನ, ಚೈತ್ರಮಾಸ ಹೀನ, ಭಯಾ. ಮಕ್ಕಳ ಫಲ ಮಧ್ಯಮ. ಎಂದು ಹೇಳುವದು.

**ರೋಹಿಣಿಯಲ್ಲಿ ನೆರದರೆ** ಹೆಣ್ಣುಮಕ್ಕಳ ಫಲ ರೋಗಿ.

**ಮೃಗಶಿರದಲ್ಲಿ ನೆರದರೆ** ಹೆಣ್ಣುಮಕ್ಕಳ ಫಲ, ಪಾಪಿಯಿರುವಳು.

ಆರಿದ್ರಾದಲ್ಲಿ ನೆರದರೆ ಗಂಡುಮಕ್ಕಳ ಫಲವುಂಟು, ನೀತಿವಂತಳು.

ಪುನರ್ವಸುವಿನಲ್ಲಿ ನೆರದರೆ ಚೊಚ್ಚಲ ಹೆಣ್ಣು, ಆರು ಮಕ್ಕಳ ಫಲವುಂಟು, ಶುಭ.

ಪುಷ್ಯದಲ್ಲಿ ನೆರದರೆ ಗಂಡುಮಕ್ಕಳ ಫಲವುಂಟು, ಮಹಾ ಸಂತೋಷ

ಆಶ್ಲೇಷಾದಲ್ಲಿ ನೆರದರೆ ಅತ್ತಿ-ಮಾವಗೆ ಹೀನ, ೫ ಮಕ್ಕಳುಂಟು.

ಮಘಾದಲ್ಲಿ ನೆರದರೆ ಬಸರು ಜಯವು, ದುರ್ಜನಿ ಎನಿಸುವಳು.

ಹುಬ್ಬಿಯಲ್ಲಿ ನೆರದರೆ ಮೂರು ಫಲವುಂಟು. ಕುಂಟಣಿಯಾಗಿ ಬಾಳುವಳು.

ಉತ್ರಿಯಲ್ಲಿ ನೆರದರೆ ಗಂಡು ಆಗುವವು, ಮಹಾ ಲೇಸು.

ಹಸ್ತದಲ್ಲಿ ನೆರದರೆ ಹೆಣ್ಣುಮಕ್ಕಳ ಫಲ, ಕುಂಭ ದಾಟಿತು.

ಚಿತ್ತಿಯಲ್ಲಿ ನೆರದರೆ ಹೆಣ್ಣುಮಕ್ಕಳ ಫಲ, ಕುಂಭ ದಾಟಿತು.

ಸ್ವಾತಿಯಲ್ಲಿ ನೆರದರೆ ಐದು ಗಂಡುಮಕ್ಕಳ ಫಲವುಂಟು, ದುಃಖ ತಪ್ಪದು

ವಿಶಾಖಾದಲ್ಲಿ ನೆರದರೆ ಬಳಗಕ್ಕೆ ಹೀನ, ಗಂಡುಮಕ್ಕಳ ಫಲವುಂಟು.

ಅನುರಾಧದಲ್ಲಿ ನೆರದರೆ ಮಕ್ಕಳು ಏಳು. ಕುಂಭ ದಾಟಿತು, ಮಹಾ ಲೇಸು.

ಜ್ಯೇಷ್ಠದಲ್ಲಿ ನೆರದರೆ ಮಕ್ಕಳಫಲ, ಕುಂಭ ದಾಟಿತು. ಸುಳ್ಳು ಮಾತಿನವಳು.

ಮೂಲಾದಲ್ಲಿ ನೆರದರೆ ಗಂಡಗೆ ಹೀನ. ಅವಕಾಶದಿಂದ ಮಕ್ಕಳು ಆದಾವು

ಪೂರ್ವಾಷಾಢದಲ್ಲಿ ನೆರದರೆ ಚೊಚ್ಚಲ ಹೆಣ್ಣು, ಒಂಭತ್ತು ಫಲವುಂಟು, ಲೇಸು.

ಉತ್ರಾಷಾಢದಲ್ಲಿ ನೆರದರೆ ಚೊಚ್ಚಲ ಗಂಡು, ಏಳು ಮಕ್ಕಳ ಫಲವುಂಟು

**ಶ್ರವಣಾದಲ್ಲಿ ನೆರದರೆ** ವ್ಯಾಧಿ, ಅಲಗಿನ ಭಯ, ಫಲ ಮಧ್ಯಮ.

**ಧನಿಷ್ಠದಲ್ಲಿ ನೆರಧರೆ** ಮಕ್ಕಳ ಫಲ ಎರಡು, ಆಲಸ್ಯದಿಂದ ದ್ರವ್ಯ ಕೂಡುವದು.

**ಶತತಾರದಲ್ಲಿ ನೆರದರೆ** ಹೆಣ್ಣುಮಕ್ಕಳ ಫಲ, ಅಪಜಯವುಂಟು.

**ಪೂರ್ವಾಭಾದ್ರಪದದಲ್ಲಿ ನೆರದರೆ** ಒಂಭತ್ತು ಫಲವುಂಟು ಚೊಚ್ಚಲ ಗಂಡು, ಗಂಡನಮನಿಗೆ ಜಯವಿಲ್ಲ.

**ಉತ್ತರಾಭಾದ್ರಪದದಲ್ಲಿ ನೆರದರೆ** ಶುಭ, ಲೇಸು, ಅರ್ಥಲಾಭ, ಗಂಡುಮಕ್ಕಳು ಹನ್ನೊಂದು ಫಲವುಂಟು.

**ರೇವತಿಯಲ್ಲಿ ನೆರದರೆ** ಹೆಣ್ಣುಮಕ್ಕಳು ಐದು ಫಲ, ಮಹಾ ಒಳಿತು.

# ಪ್ರಹರದ ಫಲ

ಮುಂಜಾನೆ ನೆರದರೆ ಶುಭ. ಮಧ್ಯಾನ್ಹಕ್ಕೆ ನೆರದರೆ ಶುಭ. ಒಂಭತ್ತು ತಾಸಿಗೆ ನೆರದರೆ ದರಿದ್ರಳಾಗುವಳು. ರಾತ್ರಿ ನೆರದರೆ ರೋಗಿಷ್ಟಿಯಾಗುವಳು.

# ಮೈನೆರದಫಲ ಕೇಳಬಂದಾಗ ದಿಕ್ಕುನೋಡಿ ಹೇಳುವದು

**ಇಂದ್ರನಲ್ಲಿ ನಿಂತು ಕೇಳಲು** ಆಕೆ ಒಂದುಜಾವದಲ್ಲಿ ರುಜವ ಕಂಡಳು. ಕೇಳುವ ತನು ಕೆಂಪು, ಉಟ್ಟಿರುವ ಶೀರಿಯು ಶೆರಗು ಹರಕು, ಬಿಳಿಗೆಂಪು, ಆಕೆ ಬಲು ಗಂಭೀರಳು, ಗಂಡಗೆ ಶೇರಳು, ಐದು ಮಕ್ಕಳ ಫಲವುಂಟು.

**ಅಗ್ನಿಯಲ್ಲಿ ನಿಂತು ಕೇಳಲು** ಆಕೆ ಎರಡು ಜಾವದಲ್ಲಿ ರುಜುವ ಕಂಡಳು. ತನು ಕೆಂಪು, ಉಟ್ಟಶೀರಿ ಬಿಳಿದು, ೮ ಮಕ್ಕಳ ಫಲವುಂಟು.

**ಯಮನಲ್ಲಿ ನಿಂತು ಕೇಳಲು** ಮೂರು ಜಾವದಲ್ಲಿ ರುಜವ ಕಂಡಳು, ಆಕಿಗೆ ಪರರು ತೋರಿದರು, ಆಕಿ ಶಾಮವರ್ಣ, ಉಟ್ಟಶೀರಿ ಕಪ್ಪು, ಮೂರು ಮಕ್ಕಳ ಫಲವುಂಟು, ಪರವಶ ಆಗುವಳು.

**ನೈಋತ್ಯದಲ್ಲಿ ನಿಂತು ಕೇಳಲು** ತನು ಕೆಂಪು, ಆಕಿ ನಾಲ್ಕನೇ ಜಾವದಲ್ಲಿ ರುಜವ ಕಂಡಳು. ಉಟ್ಟಶೀರಿ ಬಿಳಿದು-ಕರಿದು-ಕೆಂಪು ಸರಿಬೆರಿಕೆ, ೪–೫ ಫಲವುಂಟು.

**ವರುಣನಲ್ಲಿ ನಿಂತು ಕೇಳಲು** ಉಟ್ಟಶೀರಿ ಶರಗು ಬಣ್ಣದ್ದು, ಆಕಿ ಅಸ್ತಮಾನವಾದ ಜಾವಕ್ಕೆ ರುಜವ ಕಂಡಳು. ಪರರು ತೋರಿದರು. ಆಕಿ ಗಂಡನಿಗೆ ಪ್ರೀತಿಯು, ಐದು ಫಲವುಂಟು.

**ವಾಯುವ್ಯದಲ್ಲಿ ನಿಂತು ಕೇಳಲು** ಆಕಿ ಎರಡುಜಾವದಲ್ಲಿ ರುಜವ ಕಂಡಳು. ಆಕಿ ಸಾದವರ್ಣ, ಉಟ್ಟಶೀರಿ ತೊಗರಿಬಣ್ಣದ್ದು, ಆಕಿ ಗಂಡನ ಮೇಲೆ ಪ್ರೀತಿಯುಳ್ಳಾಕಿ, ಗಂಡುಮಕ್ಕಳ ಫಲವು.

**ಕುಬೇರನಲ್ಲಿ ನಿಂತು ಕೇಳಲು** ಆಕಿ ನಡು (ಇರಳು) ರಾತ್ರಿಯಲ್ಲಿ ರುಜವ ಕಂಡಳು. ಆಕಿ ಸಾವಧಿ, ಸಾವಧಿವರ್ಣ, ಉಟ್ಟಶೀರಿ ಕೆಂಪುಶರಗು, ಪತಿವ್ರತೆ, ಮಕ್ಕಳಿಲ್ಲದಂತಿಹಳು ಬಂಜಿ.

**ಈಶಾನ್ಯದಲ್ಲಿ ನಿಂತು ಕೇಳಲು** ಬೆಳಗಾದ ಜಾವದಲ್ಲಿ ರುಜವ ಕಂಡಳು. ಆಕಿ ತನು ಕೆಂಪು, ಎಗ್ಗಳವಾಗಿ ಗಂಡನ ಬಿಟ್ಟು ೮ ಮಕ್ಕಳ ಫಲವುಂಟು.



# ಶಕುನ ಫಲವು

## ಅಶ್ವಿನಿ ನಕ್ಷತ್ರದ ಫಲ

ಪಶುವ ಕಟ್ಟುವದು, ದ್ವಾರವಾಟ ನಿಲ್ಲಿಸುವದು, ಪ್ರೈಣಮಾಡಬಹುದು, ಭೂಮಿಗೆ ಬೀಜ ಬಿತ್ತಬಹುದು, ಎತ್ತಿಗೆ ಮುಗದಾಣ ಹಾಕಬಹುದು, ಹುಟ್ಟಿದ ಶಿಶುವು ಹಿರೇತನ ಮಾಡಬಹುದು

## ಭರಣಿ ನಕ್ಷತ್ರದ ಫಲ

ಆಭರಣಮಾಡಿಸುವದು, ಹುಡುಗರಿಗೆ ಕಿವಿಯು ಚುಚ್ಚಿಸಬಹುದು, ಹೆಣ್ಣುಮಕ್ಕಳಿಗೆ ಶೀರೆ–ಕುಪ್ಪಸನುಡಿಸಬಹುದು, ಹೊಲವನ್ನು ಬಿತ್ತೆ ಲೇಸು, ಹುಟ್ಟಿದ ಶಿಶುವು ಸುಖದಿಂದ ಬಾಳುವದು.

## ಕೃತ್ತಿಕ ನಕ್ಷತ್ರದ ಫಲ

ಮಂತ್ರವ ಕಲಿಯುಬಹುದು, ಒಲಿಯು ಹಾಕಬಹುದು, ರಾಹು ಬಲನ ಮಾಡಿ ಎಡಕ್ಕೆ ಹೋಗಬಹುದು, ಮೇಟಿಯು ನಡಿಸಬಹುದು, ಹುಟ್ಟಿದ ಶಿಶುವಿಗೆ ಜಯುವಿಲ್ಲ

## ರೋಹಿಣಿಯು ನಕ್ಷತ್ರದ ಫಲ

ರಾಶಿಯು ಮುಗಚಬಹದು, ಲಗ್ನಮಾಡಬಹುದು, ಊರಿಗೆ ಹೋಗಲಾಗದು, ಭೂಮಿಯು ಹೊಸದಾಗಿ ಹಿಡಿಯುಲಾಗದು, ಹೆಣ್ಣು ಹುಟ್ಟಿದರೆ ತನ್ನ ಪುರುಷನ ಬಿಟ್ಟು ಅನ್ಯ ಪುರುಷನಿಗೆ ವಶವಾಗುವಳು. ಗಂಡಾದರೆ ಅಧರ್ಮನಾಗುವನು.

## ಮೃಗಶಿರ ನಕ್ಷತ್ರದ ಫಲ

ಕಣಜು, ತಲಬಾಗಿಲ ಇನಕ್ಕೆ ಲೇಸು. ಹೊಲವನ್ನು ಬಿತ್ತಲಿಕ್ಕೆ ಲೇಸು, ನೇಗಿಲ ಹೊಡಯಲಿಕ್ಕೆ ಲೇಸು, ಹುಟ್ಟಿದ ಶಿಶುವು ಪರೋಪಕಾರಿ

# ಆರಿದ್ರಾ ನಕ್ಷತ್ರದ ಫಲ

ಹೆಣ್ಣು ನಿಶ್ಚಯ ಮಾಡಬಹುದು, ಕೆರಿ-ಭಾಂವಿ ತೆಗೆಸಬಹುದು, ಬಣವಿಯನೊಟ್ಟಲಾಗದು, ಊರಿಗೆ ಹೋಗಲಾಗದು, ಹುಟ್ಟಿದ ಶಿಶುವು ಬಡತನಲ್ಲಿ ಬಾಳ್ವದು.

# ಪುನರ್ವಸು ನಕ್ಷತ್ರದ ಫಲ

ಮನಿಯಿಂದ ಮನಿಗೆ ಹೋಗುವದು, ಬಣವಿಯನೊಟ್ಟಲಾಗದು, ವ್ಯಾಧಿಸೇರಿದರೆ ಮರಣ, ಊರಿಗೆ ಹೋಗಲಾಗದು, ಹುಟ್ಟಿದ ಶಿಶುವು ಅಪಜಯದಿಂದ ಬಾಳ್ವದು.

# ಪುಷ್ಯ ನಕ್ಷತ್ರದ ಫಲ

ಊರಿಗೆ ಹೋಗಬಹುದು, ಬೀಜವ ಬಿತ್ತಬಹುದು, ಹೈನ ಕೊಳ್ಳಬಹುದು, ಹುಟ್ಟಿದ ಶಿಶುವು ದೈವುಳ್ಳದ್ದಾಗುವದು.

# ಆಶ್ಲೇಷಾ ನಕ್ಷತ್ರದ ಫಲ

ಮನಿಯಕಟ್ಟಲಾಗದು, ನೀರಲಸಸಿಯ ಹಚ್ಚಬಹುದು, ಹುಟ್ಟಿದ ಶಿಶುವು ಸಾಮಾನ್ಯ.

# ಮಘಾ ನಕ್ಷತ್ರದ ಫಲ

ಎಮ್ಮಿ ಕೊಳ್ಳಬಹುದು, ಬಣವಿಯನೊಟ್ಟಬಹುದು, ಹಗೆ ಹಾಕಬಹುದು, ಹುಟ್ಟಿದ ಶಿಶುವಿಗೆ ವಿದ್ಯ ಪ್ರಾಪ್ತಿಸಬಹುದು.

# ಹುಬ್ಬಿ ನಕ್ಷತ್ರದ ಫಲ

ಹೋಳಿಯ ಸುಡಬಹುದು, ರಾಹು ಭಿನ್ನಮಾಡಿ ಕದನಕ್ಕೆ ಹೋಗಬಹುದು, ಬಣವಿಯ ಒಟ್ಟಿದರೆ ಬೆಂಕಿ:ಹತ್ತಬಹುದು, ಹುಟ್ಟಿದ ಶಿಶುವು ಜಾರಿಯಾಗಬಹುದು, ಗಂಡಾದರೆ ಬಹು ಕಾಮಿ.

## ಉತ್ರಿ ನಕ್ಷತ್ರದ ಫಲ

ಎತ್ತು ಕೊಳ್ಳಬಹುದು, ಬೀಜವ ಬಿತ್ತಬಹುದು, ಸರ್ವ ಧಾನ್ಯ ಬಚ್ಚಿಡಬಹುದು, ಲಗ್ನವ ಮಾಡಬಹುದು, ಹುಟ್ಟಿದ ಶಿಶುವು ಸಂತೋಷ ದಿಂದ ಇರುವದು.

## ಹಸ್ತಾ ನಕ್ಷತ್ರದ ಫಲ

ಲಗ್ನವ ಮಾಡಬಹದು, ಹೊಸ ವಸ್ತ್ರ ಹೊದಿಯಲೇಸು, ಹೈನವ ಕೊಳ್ಳಲಿಕ್ಕೆ ಲೇಸು, ಊರಿಗೆ ಹೋಗೆಲೇಸು, ಬೀಜವ ಬಿತ್ತಲೇಸು, ಹುಟ್ಟಿದ ಶಿಶುವು ಪರಿಣಾಮದಲ್ಲಿ ಬಾಳ್ವದು.

## ಚಿತ್ತಿ ನಕ್ಷತ್ರದ ಫಲ

ಚಿತ್ತಿಯು ನಕ್ಷತ್ರದಲ್ಲಿ ಮನಿಯ ಕಟ್ಟಿಸಬಹುದು, ಪ್ರೈಣ ಮಾಡ ಲಾಗದು, ಹೆಣ್ಣಿನಸಂಗ ಮಾಡಬಹುದು, ಹೊಸದಾಗಿ ಹೋರಿಗೆ ಸೊಬರಾ ಹಾಕಬಹುದು, ಹುಟ್ಟಿದ ಶಿಶುವು ಗಂಡಾದರೆ ದೇಶ ಪರ್ಯಾಟನ. ಹೆಣ್ಣಾದರೆ ಜಾರ ಸ್ತ್ರೀ ಆಗುವಳು.

## ಸ್ವಾತಿ ನಕ್ಷತ್ರದ ಫಲ

ಬೀಜ ಬಿತ್ತಬಹುದು, ಗುಡಿ ಕಟ್ಟಿಸೆಲೇಸು, ಹುಟ್ಟಿದ ಶಿಶುವು ಕಷ್ಟ ಬಟ್ಟು ಮುಂದೆ ಜಯವಕ್ಕುಂ.

## ವಿಶಾಖಾ ನಕ್ಷತ್ರದ ಫಲ

ಒಕ್ಕಲು ಹೋಗಲಾಗದು, ಸರ್ಪು ಕಚ್ಚಲಾಗದು, ಆಯುಧ ಕೊಳ್ಳೆ ಲೇಸು, ಹುಟ್ಟಿದ ಶಿಶುವು ಚೋರನಾಗುವನು.

## ಅನುರಾಧಾ ನಕ್ಷತ್ರದ ಫಲ

ಒಕ್ಕಲು ಹೋದರೂ ಮಕ್ಕಳಿಗೆ ದನಕರುವಿಗೆ ಜಯವಿಲ್ಲ, ಹುಟ್ಟಿದ ಶಿಶು ಆಪತ್ತು ಬಟ್ಟು ಮುಂದೆ ಜಯವು.

## ಜ್ಯೇಷ್ಠಾ ನಕ್ಷತ್ರದ ಫಲ

ನೇಗಿಲ ಸಾಗಿಸಬಹುದು, ಸಾಲವಕೊಟ್ಟರೆ ತಿರುಗಿ ಬಾರದು, ಹುಟ್ಟಿದ ಶಿಶುವು ವಿದ್ಯವಂತನು ಆಗುವನು.

## ಮೂಲಾ ನಕ್ಷತ್ರದ ಫಲ

ಎತ್ತು ಕೊಂಡರೆ ಲೇಸು, ಮದುವೆ ಮುಂತಾದ ಕಾರ್ಯಮಾಡಲು ಲೇಸು, ವ್ಯಾಪಾರ ಉದ್ಯೋಗಕ್ಕೆ ನಷ್ಟ, ಹೋದ ಕಳವು ತಿರುಗಿ ಬಾರದು, ಗಮನಕ್ಕೆ ಲೇಸು. ಹುಟ್ಟಿದ ಶಿಶುವು ತಂದೆ-ತಾಯಿ ಕಳೆದಿರುವದು.

## ಪೂರ್ವಾಷಾಢಾ ನಕ್ಷತ್ರದ ಫಲ

ಪೈಣ ಮಾಡಲಾಗದು, ಒಣವಿಯ ಒಟ್ಟಲಾಗದು, ಅಲ್ಲಿ ಅಭಿಜಿತು ಪಾದವಿರುವದು, ಹುಟ್ಟಿದ ಶಿಶುವು ಬಂಜೆ, ನಡುವಿನ ಪಾದದಲ್ಲಿ ಹುಟ್ಟೆ ಬಂಜೆ ತಂದಿಯು ಕಳಿಯುವದು.

## ಉತ್ರಾಷಾಢಾ ನಕ್ಷತ್ರದ ಫಲ

ಹೊಲಾ ಕೊಯ್ಯಲಿಕ್ಕೆ ಲೇಸು, ನ್ಯಾಯಕ್ಕೆ ಹೋಗಲೇಸು, ಲಗ್ನದ ಆರಂಭ ಲೇಸು, ಬೀಜ ಬಿತ್ತೆ ಲೇಸು, ಪೈಣಕ್ಕೆ ಸುಖ, ಹುಟ್ಟಿದ ಶಿಶುವು ದೈವುಳ್ಳದ್ದು, ತಂದೆಯು ಕಳೆಯುವದು, ಸುಳ್ಳ ಐಶ್ವರ್ಯವುಳ್ಳವನಾಗಿ ಸುಖ ಲೇಸು.

## ಶ್ರವಣಾ ನಕ್ಷತ್ರದ ಫಲ

ಮನಿಯು ಕಟ್ಟಿಸೆ ಲೇಸು, ಊರಿಗ ಹೋಗಲೇಸು, ಕಟ್ಟಿಗೆಯು ಹೊಸ ಸಾಮಾನುಗಳ ಕೊಳ್ಳಲಿಕ್ಕೆ ಲೇಸು, ಸರಮಂಡಲಾ ತರಲೇಸು, ಹುಟ್ಟಿದ ಶಿಶುವು ಸಂತೋಷದಲ್ಲಿ ಇರುವದು. ಪರಂತು ಅಭಿಜಿತುವಿನ ಎಡಪಾದ ಇರುವದು ಬಂಜೆ.

## ಧನಿಷ್ಠಾ ನಕ್ಷತ್ರದ ಫಲ

ಉದಯು ದೀಕ್ಷೆಯು ಮಾಡಬಹುದು, ಆಳು-ಬಂಟರ ಇಡಲಾಗದು, ಹುಟ್ಟಿದ ಶಿಶುವು ಒಡೆಯುನೆನಿಸುವದು.

## ಶತತಾರಾ ನಕ್ಷತ್ರದ ಫಲ

ಊರಿಗೆ ಹೋಗಲಾಗದು, ಹೊಲವ ಬಿತ್ತಲಾಗದು, ಹುಟ್ಟಿದ ಶಿಶುವಿಗೆ ವ್ಯಾಧಿ ಮತ್ತು ವಿದ್ಯೆಯು ಕಲಿಯುವನು.

## ಪೂರ್ವಾಭಾದ್ರಪದ ನಕ್ಷತ್ರದ ಫಲ

ಹಗೇವು ಭಾಂವಿ ತಗಿಯಲೇಸು, ಬಣವಿಯು ಒಟ್ಟಲಾಗದು, ಹುಟ್ಟಿದ ಶಿಶುವು ಹೆಣ್ಣಾದರೆ ರಂಡಿಯಾಗುವಳು, ಗಂಡಾದರೆ ತಂದೆಯು ಕಳೆಯುವದು.

## ಉತ್ರಾಭಾದ್ರಪದ ನಕ್ಷತ್ರದ ಫಲ

ಸಕಲಕ್ಕೂ ಒಳ್ಳೇದು, ಹುಟ್ಟಿದ ಶಿಶುವು ರಾಜಮನ್ನಣೆ, ಸೌಭಾಗ್ಯ ಸಂಪನ್ನನಾಗುವನು.

## ರೇವತಿ ನಕ್ಷತ್ರದ ಫಲ

ಕಟ್ಟಿಯು ಕಟ್ಟಬಹುದು, ಹೊರಸು ಹೆಣಿಯುಬಹುದು, ಉದ್ಯೋಗ ವ್ಯಾಪಾರಕ್ಕೆ ಹೀನ, ಆಳಿಡಲೇಸು, ನೆಲವ ಕಡಿಯಲೇಸು, ಪೈಣಗತಿಗೆ ಲೇಸು, ಹುಟ್ಟಿದ ಶಿಶುವು ಒಡೆಯನಾಗುವನು

## ಸಾರಾಂಶ

ರೋಹಿಣಿ, ಮೃಗಶಿರ, ಪುಷ್ಯ, ಉತ್ರಿ, ಹಸ್ತ, ಉತ್ರಾಷಾಢ, ಉತ್ರಾಭಾದ್ರಪದ, ರೇವತಿ, ಚಿತ್ತಿ, ಅನುರಾಧಾ, ಸ್ವಾತಿ, ಧನಿಷ್ಠಾ, ಮಘಾ, ಮೂಲಾ ಈ ೧೪ ನಕ್ಷತ್ರಗಳಲ್ಲಿ ಯಾವತ್ತೂ ಧಾನ್ಯ ಬಿತ್ತುವದು. ಗುರು ಉದಯದಲ್ಲಿ ಕೂರಿಗೆಯು ಹೂಡುವದು. ಆದಿತ್ಯ, ಗುರು, ಶುಕ್ರ ಈ ಮೂರು ವಾರಗಳಲ್ಲಿ ಬಿತ್ತಿದರೆ ಲೇಸು; ಸೋಮ, ಬುಧ ಈ ವಾರದಲ್ಲಿ ಬಿತ್ತಿದರೆ ಬೆಳೆ ಮಂದ; ಮಂಗಳ, ಶನಿವಾರ ಕನಿಷ್ಟ. ಮೇಲೆ ಬರೆದಿರುವ ನಕ್ಷತ್ರದಲ್ಲಿ ಶುಭವಾರದಲ್ಲಿ ಬಿತ್ತುವದಕ್ಕೆ, ನೇಗಿಲ ಹೊಡಿಯುವದಕ್ಕೆ, ಹೊಲಾ ಕೊಯ್ಯಲಿಕ್ಕೆ, ರಾಶಿಯು ಮುಗಚಲಿಕ್ಕೆ, ರಾಶಿಯು ಮನಿಗೆತರಲಿಕ್ಕೆ ಈ ನಕ್ಷತ್ರಗಳು ಶುಭವು.

# ಶೀನಿನ ಫಲ



## ಆದಿತ್ಯವಾರ

ಮೂಡಲದಿಕ್ಕಿಗೆ ಶನಿ ಇರುವನು, ಶೀತರೆ ಕಲಹ ಹುಟ್ಟುವದು. ಅಗ್ನಿಯಲ್ಲಿ ರಾಹು ಇರುವನು, ಮರಣ ಯಮದಿಕ್ಕಿನಲ್ಲಿ ಸೂರ್ಯ ಇರುವನು, ಕಾರ್ಯನಾಶ. ನೈಋತ್ಯದಲ್ಲಿ ಚಂದ್ರನಿಹನು, ಸಕಲಕಾರ್ಯ ಸಿದ್ಧಿ. ವರುಣನಲ್ಲಿ ಮಂಗಳನಿಹನು, ದುಷ್ಟವಾರ್ತೆ. ವಾಯುವ್ಯದಲ್ಲಿ ಬುಧನಿಹನು, ಬಾಂಧವರ ದರುಶನ. ಕುಬೇರನಲ್ಲಿ ಗುರು ಇಹನು, ಧನಲಾಭ. ಈಶಾನ್ಯದಲ್ಲಿ ಶುಕ್ರನಿರುವನು, ಭೋಜನ ಪ್ರಾಪ್ತಿಸುವದು.

## ಸೋಮವಾರ

ಇಂದ್ರನಲ್ಲಿ ಶುಕ್ರನಿಹನು, ಲೇಸುಂಟು. ಅಗ್ನಿಯಲ್ಲಿ ಶನಿಯಿಹನು, ಕಲಹ. ಯಮನಲ್ಲಿ ರಾಹು ಇಹನು, ಮರಣ. ನೈಋತ್ಯದಲ್ಲಿ ಸೂರ್ಯನಿಹನು, ಕಾರ್ಯನಾಶ ವರುಣನಲ್ಲಿ ಚಂದ್ರನಿರುವನು, ಸಕಲಕಾರ್ಯ ಸಿದ್ಧಿ. ವಾಯುವ್ಯದಲ್ಲಿ ಮಂಗಳನಿಹನು, ದ ವಾರ್ತೆ. ಕುಬೇರನಲ್ಲಿ ಬುಧ ಇಹನು, ಲೇಸು. ಈಶಾನ್ಯದಲ್ಲಿ ಗುರು ಇಹನು, ಕಾರ್ಯ ಲೇಸು.

## ಮಂಗಳವಾರ

ಇಂದ್ರನಲ್ಲಿ ಗುರು ಇಹನು, ಧನಲಾಭ. ಅಗ್ನಿಯಲ್ಲಿ ಶುಕ್ರನಿಹನು, ಲೇಸುಂಟು. ಯಮನಲ್ಲಿ ಶನಿಯಿರುವನು, ಕಾರ್ಯಹಾನಿ. ನೈಋತ್ಯದಲ್ಲಿ ರಾಹು ಇಹನು, ಮರಣ. ವರುಣನಲ್ಲಿ ಸೂರ್ಯನಿರುವನು, ಕಾರ್ಯಹಾನಿ. ವಾಯುವ್ಯದಲ್ಲಿ ಚಂದ್ರನಿಹನು, ಸಕಲ ಸಿದ್ಧಿ. ಕುಬೇರನಲ್ಲಿ ಮಂಗಳನಿಹನು, ದುರ್ವಾರ್ತೆ. ಈಶಾನ್ಯದಲ್ಲಿ ಬುಧ ಇಹನು, ಬಂಧುಗಳ ಪ್ರೀತಿ

## ಬುಧವಾರ

ಇಂದ್ರನಲ್ಲಿ ಬುಧನಿಹನು, ಅಗ್ನಿಸ್ತಂಭನವು. ಅಗ್ನಿಯಲ್ಲಿ ಗುರು ಇರುವನು, ಧನಲಾಭ. ಯಮನಲ್ಲಿ ಶುಕ್ರನಿಹನು, ಸುಭೋಜನ. ನೈಋತ್ಯದಲ್ಲಿ ಶನಿಯಿರುವನು, ಕಲಹ. ವರುಣನಲ್ಲಿ ರಾಹು ಇರುವನು, ಮರಣ. ವಾಯುವ್ಯದಲ್ಲಿ ಸೂರ್ಯನಿರುವನು, ಕಾರ್ಯಹಾನಿ. ಕುಬೇರನಲ್ಲಿ ಚಂದ್ರ ಇಹನು, ಸಕಲ ಸಿದ್ಧಿ. ಈಶಾನ್ಯದಲ್ಲಿ ಮಂಗಳನಿಹನು, ದುರ್ವಾರ್ತೆ.

## ಗುರುವಾರ

ಇಂದ್ರನಲ್ಲಿ ಮಂಗಳನಿಹನು, ದುರ್ವಾರ್ತೆ. ಅಗ್ನಿಯಲ್ಲಿ ಬುಧ ಇಹನು ಬಂಧುಗಳ ಪ್ರೀತಿ. ಯಮನಲ್ಲಿ ಗುರು ಇರುವನು, ಧನಲಾಭ. ನೈಋತ್ಯದಲ್ಲಿ ಶುಕ್ರ ಇರುವನು, ಲೇಸುಂಟು. ವರುಣನಲ್ಲಿ ಶನಿ ಇರುವನು, ಕಲಹ. ವಾಯುವ್ಯದಲ್ಲಿ ರಾಹು ಇರುವನು, ಕಾರ್ಯಹಾನಿ ಕುಬೇರನಲ್ಲಿ ಸೂರ್ಗ್ಯ ಇರುವನು, ಯಾವದಾದರೂ ಹಾನಿ. ಈಶಾನ್ಯದಲ್ಲಿ ಚಂದ್ರ ಇರುವನು, ಸಕಲ ಸಿದ್ಧಿ

## ಶುಕ್ರವಾರ

ಇಂದ್ರನಲ್ಲಿ ಚಂದ್ರ ಇರುವನು, ಸಕಲ ಸಿದ್ಧಿ. ಅಗ್ನಿಯಲ್ಲಿ ಮಂಗಳ ಇಹನು, ದುರ್ವಾರ್ತೆ. ಯಮನಲ್ಲಿ ಬುಧ ಇರುವನು, ಸರ್ವ ಸಿದ್ಧಿ. ನೈಋತ್ಯನಲ್ಲಿ ಗುರು ಇರುವನು, ಧನಲಾಭ. ವರುಣನಲ್ಲಿ ಶುಕ್ರನಿರುವನು, ಲೇಸುಂಟು. ವಾಯುವ್ಯದಲ್ಲಿ ಶನಿ ಇರುವನು, ಕಲಹ. ಕುಬೇರನಲ್ಲಿ ರಾಹು ಇರುವನು, ಈಶಾನ್ಯದಲ್ಲಿ ಸೂರ್ಯ ಇರುವನು, ಕಾರ್ಯ ಹಾನಿ.

## ಶನಿವಾರ

ಇಂದ್ರನಲ್ಲಿ ಸೂರ್ಯ ಇರುವನು, ಕಾರ್ಯ ಹಾನಿ. ಅಗ್ನಿಯಲ್ಲಿ ಚಂದ್ರ ಇರುವನು, ಸಕಲ ಸಿದ್ಧಿ. ಯಮನಲ್ಲಿ ಮಂಗಳನಿಹನು, ಕೇಡಿನ ಸುದ್ದಿ. ನೈಋತ್ಯದಲ್ಲಿ ಬುಧ ಇರುವನು, ಧನಲಾಭ. ವರುಣನಲ್ಲಿ ಗುರು ಇರುವನು, ಧನಲಾಭ. ವಾಯುವ್ಯದಲ್ಲಿ ಶುಕ್ರ ಇರುವನು, ಸುಭೋಜನ.

ಕುಬೇರನಲ್ಲಿ ಶನಿ ಇರುವನು, ಕಲಹ. ಈಶಾನ್ಯದಲ್ಲಿ ರಾಹು ಇರುವನು, ಮರಣ

ಹಿಂದೆ ಬರೆದ ಕುಂಡಲದಲ್ಲಿ ಏಳು ವಾರಗಳಲ್ಲಿ ಎಂಟು ದಿಕ್ಕುಗಳ ಕ್ರಮವಾಗಿ ಗ್ರಹಗಳು ಸ್ಥಾನಭ್ರಷ್ಟವಾಗುತ್ತವೆ. ಆದರಂದಶಿಯಿಂದ ಯಾವ ವಾರದಲ್ಲಿ ಯಾವ ಗ್ರಹ ಯಾವ ದಿಕ್ಕಿನ ವಸ್ತಿ ತಿಳಿಯತಕ್ಕದ್ದು.

# ಗ್ರಾಮ ಸಾಲಾವಳಿಯ ಕ್ರಮ

ಊರ ನಕ್ಷತ್ರವ ಮೊದಲುಮಾಡಿಕೊಂಡು ಕೇಳುವಾತನ ನಕ್ಷತ್ರದ ಮೇರಿಗೆ ಎಣಿಸಬೇಕು. ೫ ಶಿರಕ್ಕೆ ಅರ್ಥಲಾಭ. ೩ ಮುಖಕ್ಕೆ ಹೀನ, ಆತನ ಮರಣ. ೫ ಹೊಟ್ಟೆಗೆ ಧನಲಾಭ ೬ ಪಾದಕ್ಕೆ ದಾರಿದ್ರ್ಯ. ೧೦ ಪ್ರಾಣ ನಾಶ. ೪ ಹೊಂಕುಳಕ್ಕೆ ಶುಭ ೧ ಎಡದ ಹಸ್ತಕ್ಕೆ ದಾರಿದ್ರ್ಯ. ೨ ಶರೀರ ಪೀಡಾ.

# ಪೈಣ ಪ್ರಸಂಗದ ಫಲ

ಆದಿತ್ಯನಲ್ಲಿ ನಿಂತು ಕೇಳಲು ಪೈಣ ಹೋಗುವದಕ್ಕೆ ಸುಖ. ಚಂದ್ರನಲ್ಲಿ ನಿಂತು ಕೇಳಲು ಹಾನಿ. ಊರಿಗೆ ಹೋಗುವವನ ಇದರಿಗೆ ಇರಲಾಗದು. ಹೇಳುವವನ ಬೆನ್ನಮೇಲೆ ಇದ್ದರೆ ಹೋಗಲಾಗದು. ಮಂಗಳನಮೇಲೆ ನಿಂತು ಕೇಳಲು ಕಾರ್ಯ ಸಿದ್ಧಿಯಾಗುವದು. ಬುಧನಮೇಲೆ ನಿಂತು ಕೇಳಲು ಲೇಸಿಲ್ಲದೆ ತಿರುಗುವನು. ಗುರುವಿನಮೇಲೆ ನಿಂತು ಕೇಳಲು ಹೋದ ಕಾರ್ಯ ಜಯವಾಗಿ ಚೆನ್ನಾಗಿ ಬರುವನು. ಶುಕ್ರನಮೇಲೆ ನಿಂತು ಕೇಳಲು ವ್ಯರ್ಥವಾಗುವದು. ಶನಿಯಮೇಲೆ ನಿಂತು ಕೇಳಲು ಪೈಣ ತಾಮಸ, ಹೋದಲ್ಲಿ ರೋಗದಿಂದ ಮಲಗುವನು. ರಾಹುವಿನಮೇಲೆ ನಿಂತು ಕೇಳಲು ಲೇಸಿಲ್ಲವೆಂದು ಹೇಳುವದು.

# ಉತ್ತಮ ತಿಥಿಗಳು

ಹುಣ್ಣಿವೆ, ಅಮಾವಾಸಿ ಆದಿತ್ಯವಾರ ಬಂದರೆ ಸ್ಥಿರಕಾರ್ಯಕ್ಕೆ ಒಳ್ಳೇದು. ಬಿದಿಗಿ ಸೋಮವಾರ, ಅಷ್ಟಮಿ ಮಂಗಳವಾರ, ಷಷ್ಟಿ ಬುಧವಾರ, ದಶಮಿ

ಗುರುವಾರ, ದ್ವಾದಶಿ ಶುಕ್ರವಾರ, ಚತುರ್ಥಿ ಶನಿವಾರ ಇಂತಿ ತಿಥಿ ವಾರ ಕೂಡಿ ಬಂದರೆ ನೋಡಿ ಮದುವೆ, ಮುಂಜಿ, ಕೆರೆ, ಭಾಂವಿ. ಮಠ, ಮನಿ, ಗುಡಿ ಶುಭಕಾರ್ಯಕ್ಕೆ ಲೇಸು. ಇನ್ನು ಲೇಸು ಅಲ್ಲದ ತಿಥಿಗಳು- ಬಿದಿಗಿ ಮಂಗಳವಾರ ಗಮನಮಾಡಿ ನಳರಾಜ ಕೆಟ್ಟನು. ತದಗಿ ಶುಕ್ರವಾರ ಹೊರಟು ಬಲಚಕ್ರವರ್ತಿ ಕೆಟ್ಟನು. ಚತುರ್ಥಿ ಆದಿತ್ಯವಾರ ಗಮನಮಾಡಿ ಸುಗ್ರೀವ ಕೆಟ್ಟನು. ಪಂಚಮಿ ಬುಧವಾರ ಗಮನಮಾಡಿ ಅರ್ಜುನ ಕೆಟ್ಟ. ಷಷ್ಠಿ ಶನಿವಾರ ಗಮನಮಾಡಿ ರಾವಣ ಕೆಟ್ಟ. ಸಪ್ತಮಿ ಸೋಮವಾರ ಗಮನಮಾಡಿ ರಾಮದೇವರು ಕೆಟ್ಟರು. ಇಂತಿ ವಾರ ತಿಥಿಯಲ್ಲಿ ಗಮನ, ವ್ಯವಹಾರ, ಬೇಸಾಯ, ಹೆಣ್ಣು ವ್ಯವಸಿದರೆ ಬಂಜಿ, ಸಾಲಪಕೊಟ್ಟರೆ ಬಾರದು.

# ಹೆಣ್ಣಿಗೆ ಹೋಗುವಾಗ ಕೇಳಿದರೆ ಹೇಳುವ ಫಲ

ಇಂದ್ರನಲ್ಲಿ ನಿಂತು ಕೇಳಲು ನೆಂಟರು ಬಂದಾರೆಂದು ಹೇಳುವದು. ಅಗ್ನಿಯಲ್ಲಿ ನಿಂತು ಕೇಳಲು ಮಾತು ಲೇಸು ಆಗುವದು. ಯಮನಲ್ಲಿ ನಿಂತು ಕೇಳಲು ಹೆಣ್ಣು ಬಾಳ್ವೆ ಮಾಡಲರಿಯದು. ನೈಋತ್ಯದಲ್ಲಿ ನಿಂತು ಕೇಳಲು ಆ ಹೆಣ್ಣಿಗೆ ಮೂರು ಸಂಗ ಉಂಟು ವರುಣನಲ್ಲಿ ನಿಂತು ಕೇಳಲು ಹೆಣ್ಣು ಭಾಗ್ಯವಂತಿ, ಧರ್ಮಗುಣ. ಕುಬೇರನಲ್ಲಿ ನಿಂತು ಕೇಳಲು ಹೆಣ್ಣು ಪತಿವ್ರತಿ, ಭಾಗ್ಯವಂತಿ. ಈಶಾನ್ಯದಲ್ಲಿ ನಿಂತು ಕೇಳಲು ಆ ಹೆಣ್ಣಿನ ಗಂಡನ ಮರಣ ತಪ್ಪದು.

# ದ್ಯೂತ ಲಕ್ಷಣ ಹೇಳುವ ಕ್ರಮ

ಇಂದ್ರ ವರುಣನೊಳು ನಿಂತು ಕೇಳಲು ಮಾತು ಲೇಸು ಆಗುವದು. ದಕ್ಷಿಣ ಕುಬೇರನಲ್ಲಿ ನಿಂತು ಕೇಳಲು ಆಲಸ್ಯದಿಂದ ಆಗುವದು. ಈಶಾನ್ಯ ಅಗ್ನಿಯಲ್ಲಿ ನಿಂತು ಕೇಳಲು ಇಂದ-ನಾಳೆ ಆದೀತು ಎಂದು ಹೇಳುವದು. ವಾಯುವ್ಯ ನೈಋತ್ಯದಲ್ಲಿ ನಿಂತು ಕೇಳಲು ಕಾರ್ಯ ಮಂದ ಆದೀತು ಎಂದು ಹೇಳುವದು.

# ಬೇನೆಬಂದ ನಕ್ಷತ್ರದ ಫಲ

**ಅಶ್ವಿನಿಯಲ್ಲಿ** ಬೇನೆಬಂದರೆ ೯ ದಿನಕ್ಕೆ ಮರಣ ತಪ್ಪಿದರೆ ೧೦ ದಿನಕ್ಕೆ ಮಾಣ್ಗು.

**ಭರಣಿಯಲ್ಲಿ** ಬೇನೆಬಂದರೆ ೮ ದಿನಕ್ಕೆ ಮರಣ ತಪ್ಪಿದರೆ ೧೨ ದಿನಕ್ಕೆ ಮಾಣ್ಗು.

**ಕೃತ್ತಿಕದಲ್ಲಿ** ಬೇನೆಬಂವರೆ ೭ ದಿನಕ್ಕೆ ಮರಣ. ತಪ್ಪಿದರೆ ೯ ದಿನಕ್ಕೆ ಮಾಣ್ಗು.

**ರೋಹಿಣಿಯಲ್ಲಿ** ಬೇನೆಬಂದರೆ ೭ ದಿನಕ್ಕೆ ಮರಣ ತಪ್ಪಿದರೆ ೯ ದಿನಕ್ಕೆ ಮಾಣ್ಗು.

**ಮೃಗಶಿರದಲ್ಲಿ** ಬೇನೆಬಂದರೆ ೨ ದಿನಕ್ಕೆ ಮರಣ ತಪ್ಪಿದರೆ ೨೭ ದಿನಕ್ಕೆ ಮಾಣ್ಗು

**ಆರಿದ್ರಾದಲ್ಲಿ** ಬೇನೆಬಂದರೆ ೧೦ ದಿನಕ್ಕೆ ಮರಣ. ತಪ್ಪಿದರೆ ೧೪ ದಿನಕ್ಕೆ ಮಾಣ್ಗು.

**ಪುನರ್ವಸುವಿನಲ್ಲಿ** ಬೇನೆಬಂದರೆ ೧೨ ದಿನಕ್ಕೆ ಮರಣ ತಪ್ಪಿದರೆ ೨೨ ದಿನಕ್ಕೆ ಮಾಣ್ಗು.

**ಪುಷ್ಯದಲ್ಲಿ** ಬೇನೆಬಂದರೆ ೭ ದಿನಕ್ಕೆ ಮರಣ. ತಪ್ಪಿದರೆ ೧೩ ದಿನಕ್ಕೆ ಮಾಣ್ಗು

**ಆಶ್ಲೇಷದಲ್ಲಿ** ಬೇನೆಬಂದರೆ ೪ ದಿನಕ್ಕೆ ಮರಣ ತಪ್ಪಿದರ ೫ ದಿನಕ್ಕೆ ಮಾಣ್ಗು.

**ಮಘೆಯಲ್ಲಿ** ಬೇನೆಬಂದರೆ ೧೨ ದಿನಕ್ಕೆ ಮರಣ. ತಪ್ಪಿದರೆ ೧೫ ದಿನಕ್ಕೆ ಮಾಣ್ಗು.

**ಹುಬ್ಬಿಯಲ್ಲಿ** ಬೇನೆಬಂದರೆ ೧೨ ದಿನಕ್ಕೆ ಮರಣ. ತಪ್ಪಿದರೆ ೨೦ ದಿನಕ್ಕೆ ಮಾಣ್ಗು.

**ಉತ್ರಿಯಲ್ಲಿ** ಬೇನೆಬಂದರೆ ೭ ದಿನಕ್ಕೆ ಮರಣ ತಪ್ಪಿದರೆ ೭೨ ದಿನಕ್ಕೆ ಮಾಣ್ಗು.

ಹಸ್ತಾದಲ್ಲಿ ಬೇನೆಬಂದರೆ ೭ ದಿನಕ್ಕೆ ಮರಣ. ತಪ್ಪಿದರೆ ೧೫ ದಿನಕ್ಕೆ ಮಾಣ್ಸು.

ಚಿತ್ತಿಯಲ್ಲಿ ಬೇನೆಬಂದರೆ ೨ ದಿನಕ್ಕೆ ಮರಣ. ತಪ್ಪಿದರೆ ೨೫ ದಿನಕ್ಕೆ ಮಾಣ್ಸು.

ಸ್ವಾತಿಯಲ್ಲಿ ಬೇನೆಬಂದರೆ ೪ ದಿನಕ್ಕೆ ಮರಣ. ತಪ್ಪಿದರೆ ೧೨ ದಿನಕ್ಕೆ ಮಾಣ್ಸು.

ವಿಶಾಖಿಯಲ್ಲಿ ಬೇನೆಬಂದರೆ ೧೨ ದಿನಕ್ಕೆ ಮರಣ. ತಪ್ಪಿದರೆ ೧೩ ದಿನಕ್ಕೆ ಮಾಣ್ಸು.

ಅನುರಾಧದಲ್ಲಿ ಬೇನೆಬಂದರೆ ೧೦ ದಿನಕ್ಕೆ ಮರಣ. ತಪ್ಪಿದರೆ ೧೯ ದಿನಕ್ಕೆ ಮಾಣ್ಸು.

ಜ್ಯೇಷ್ಠದಲ್ಲಿ ಬೇನೆಬಂದರೆ ೧೦ ದಿನಕ್ಕೆ ಮರಣ. ತಪ್ಪಿದರೆ ೧೯ ದಿನಕ್ಕೆ ಮಾಣ್ಸು.

ಮೂಲಾದಲ್ಲಿ ಬೇನೆಬಂದರೆ ೯ ದಿನಕ್ಕೆ ಮರಣ. ತಪ್ಪಿದರೆ ೧೫ ದಿನಕ್ಕೆ ಮಾಣ್ಸು.

ಪೂರ್ವಾಷಾಢದಲ್ಲಿ ಬೇನೆಬಂದರೆ ೭ ದಿನಕ್ಕೆ ಮರಣ. ತಪ್ಪಿದರೆ ೯ ದಿನಕ್ಕೆ ಮಾಣ್ಸು.

ಉತ್ರಾಷಾಢದಲ್ಲಿ ಬೇನೆಬಂದರೆ ೭ ದಿನಕ್ಕೆ ಮರಣ. ತಪ್ಪಿದರೆ ೧೨ ದಿನಕ್ಕೆ ಮಾಣ್ಸು. ಮತ್ತೆ ತಪ್ಪಿದರೆ ೨೭ ದಿನಕ್ಕೆ ಮಾಣ್ಸು.

ಶ್ರವಣದಲ್ಲಿ ಬೇನೆಬಂದರೆ ೯ ದಿನಕ್ಕೆ ಮರಣ. ತಪ್ಪಿದರೆ ೧೨ ದಿನಕ್ಕೆ ಮಾಣ್ಸು

ಧನಿಷ್ಠದಲ್ಲಿ ಬೇನೆಬಂದರೆ ೯ ದಿನಕ್ಕೆ ಮರಣ. ತಪ್ಪಿದರೆ ೧೩ ದಿನಕ್ಕೆ ಮಾಣ್ಸು.

ಶತತಾರದಲ್ಲಿ ಬೇನೆಬಂದರೆ ೧೨ ದಿನಕ್ಕೆ ಮರಣ. ತಪ್ಪಿದರೆ ೧೪ ದಿನಕ್ಕೆ ಮಾಣ್ಸು.

ಪೂರ್ವಾಭಾದ್ರಪದದಲ್ಲಿ ಬೇನೆಬಂದರೆ ೮ ದಿನಕ್ಕೆ ಮರಣ. ತಪ್ಪಿದರೆ ೩೦ ದಿನಕ್ಕೆ ಮಾಣ್ಸು.

**ಉತ್ರಾಭಾದ್ರಪದದಲ್ಲಿ** ಬೇನೆಬಂದರೆ ೯ ದಿನಕ್ಕೆ ಮರಣ. ತಪ್ಪಿದರೆ ೧೯ ದಿನಕ್ಕೆ ಮಾಣ್ಕ್ಯ.

**ರೇವತಿಯಲ್ಲಿ** ಬೇನೆಬಂದರೆ ೧೨ ದಿನಕ್ಕೆ ಮರಣ. ತಪ್ಪಿದರೆ ೧೮ ದಿನಕ್ಕೆ ಮಾಣ್ಕ್ಯ.

# ಯೋಗಿಣಿಯ ಶಕುನ ಫಲ

ಇಂದ್ರ, ಅಗ್ನಿ, ಯಮ, ನೈಋತ್ಯ, ವರುಣ, ವಾಯವ್ಯ, ಕುಬೇರ, ಈಶಾನ್ಯ ಇವು ಎಂಟು ದಿಕ್ಕಿನಲ್ಲಿ ಪಾಡ್ಯಮೊದಲಾಗಿ ಹದಿನೈದು ತಿಥಿಯಂ ಪೇಳ್ವೆ

**ಪಾಡ್ಯ, ನವಮಿಯಲ್ಲಿ** ಮೂಡಲು ಇರುವದು.

**ಬಿದಗಿ, ದಶಮಿಯಲ್ಲಿ** ಉತ್ತರದಲ್ಲಿಹಳು.

**ತದಗಿ, ಏಕಾದಶಿಯಲ್ಲಿ** ಅಗ್ನಿಯಲ್ಲಿಹಳು.

**ಚೌತಿ, ದ್ವಾದಶಿಯಲ್ಲಿ** ನೈಋತ್ಯದಲ್ಲಿಹಳು.

**ಪಂಚಮಿ, ತ್ರಯೋದಶಿಯಲ್ಲಿ** ದಕ್ಷಿಣಕ್ಕೆ ಇಹಳು.

**ಷಷ್ಠಿ, ಚತುರ್ದಶಿಯಲ್ಲಿ** ಪಶ್ಚಿಮದಲ್ಲಿಹಳು.

**ಸಪ್ತಮಿ, ಅಮಾವಾಸಿ, ಹುಣ್ಣಿವೆಯಲ್ಲಿ** ವಾಯುವ್ಯದಲ್ಲಿಹಳು.

**ಅಷ್ಟಮಿಯಲ್ಲಿ** ಈಶಾನ್ಯದಲ್ಲಿಹಳು.

ಯೋಗಿಣಿಯು ಎದುರಾಗಿ ಹೋಗಲಾಗದು. ಗಮನಕ್ಕೆ, ಕಾಳಗಕ್ಕೆ ಹೋಗಲಾಗದು. ಕಾರಹುಣ್ಣಿವೆಯ ದಿನ ಎತ್ತು ಉಣಿಸಲಾಗದು. ಭೂಮಿಯಲ್ಲಿ ಬೀಜವ ಬಿತ್ತಲಾಗದು. ಕಾರಣಕ್ಕೆ, ಪರಸ್ಥಳಕ್ಕೆ ಹೋಗಲಾಗದು. ಇಷ್ಟು ಕಾರ್ಯವನ್ನು ಯೋಗಿಣಿಯು ಎದುರಾಗಿ ಮಾಡಲಾಗದು. ಬೆನ್ನು ಮಾಡಿಕೊಂಡು ಮಾಡಲು ಲೇಸು. ಎಡಕ್ಕೆ ಮಾಡಿಕೊಂಡು ಹೋಗಲು ಮಧ್ಯಮ. ಬಲಕ್ಕೆ, ಎದುರಾಗಿ ಹೋದರೆ ಕನಿಷ್ಟ. ಇಷ್ಟು ಕಾರ್ಯ ಬೆನ್ನು ಮಾಡಿಕೊಂಡು ಹೋಗುವದು.

# ಮೈನೆರದ ತಿಥಿಗಳ ಫಲ

ಪಾಡ್ಯದಲ್ಲಿ ನೆರದರೆ ಒಳಿತು. ಬಿದಿಗಿಯಲ್ಲಿ ನೆರದರೆ ಭಾಗ್ಯವಂತಿ. ತದಿಗಿಯಲ್ಲಿ ನೆರದರೆ ಸರ್ವ ಸಂಪದವು. ಚೌತಿಯಲ್ಲಿ ನೆರದರೆ ಮನೆಗೆ ಒಳಿತಲ್ಲ ಪಂಚಮಿಯಲ್ಲಿ ನೆರೆದರೆ ಸೌಭಾಗ್ಯವುಂಟಾಗುವದು. ಷಷ್ಠಿಯಲ್ಲಿ ನೆರದರೆ ಹೀನಳಾಗುವಳು. ಸಪ್ತಮಿಯಲ್ಲಿ ನೆರದರೆ ತೇಜಸ್ವಿ, ಒಳಿತು. ಅಷ್ಟಮಿಯಲ್ಲಿ ನೆರದರೆ ಹುಟ್ಟಿದವನಿಗೂ ಕೊಟ್ಟವನಿಗೂ ನಷ್ಟ. ನವಮಿಯಲ್ಲಿ ನೆರದರೆ ಪಾಪಿ, ಪೀಡಾಕಾರಕ. ದಶಮಿಯಲ್ಲಿ ನೆರದರೆ ಉತ್ತಮ ಭೋಗಂ ಏಕಾದಶಿಯಲ್ಲಿ ನೆರದರೆ ಲಾಭ ದ್ವಾದಶಿಯಲ್ಲಿ ನೆರದರೆ ಉತ್ತಮ. ತ್ರಯೋದಶಿಯಲ್ಲಿ ನೆರದರೆ ಬಹು ಸುಳ್ಳನಾಡುವಳು. ಚತುರ್ದಶಿಯಲ್ಲಿ ನೆರದರೆ ಕುಂಟಣಗಿತ್ತಿಯಾಗುವಳು ಹುಣ್ಣಿವೆ ಅಮಾವಾಸಿಯಲ್ಲಿ ನೆರದರೆ ೩ ತಿಂಗಳ ಅಥವಾ ೩ ವರ್ಷದೊಳಗೆ ರಂಡಿಯಾಗುವಳು.

# ಮೈನೆರದ ಮಾಸದ ಫಲ

ಚೈತ್ರದಲ್ಲಿ ಮೈನೆರದರೆ ರೋಗಿಯಾಗುವಳು.

ವೈಶಾಖದಲ್ಲಿ ಮೈನೆರದರೆ ಪುತ್ರವಂತಿಯಾಗುವಳು.

ಜ್ಯೇಷ್ಠದಲ್ಲಿ ಮೈನೆರದರೆ ರೋಗಿಯಾಗುವಳು.

ಆಷಾಢದಲ್ಲಿ ಮೈನೆರದರೆ ಬಂಧುನಾಶ.

ಶ್ರಾವಣದಲ್ಲಿ ಮೈನೆರದರೆ ಧನಸಂಪತ್ತು.

ಭಾದ್ರಪದದಲ್ಲಿ ಮೈನೆರದರೆ ಕೇಡು ಪ್ರಾಪ್ತಿಸುವದು.

ಆಶ್ವಿಜದಲ್ಲಿ ಮೈನೆರದರೆ ಮಕ್ಕಳ ಫಲವುಂಟು.

ಕಾರ್ತಿಕದಲ್ಲಿ ಮೈನೆರದರೆ ತೀವ್ರ ಮಕ್ಕಳಾಗುವವು.

ಮಾರ್ಗಶೀರ್ಷದಲ್ಲಿ ಮೈನೆರದರೆ ಹೀನ.

ಪುಷ್ಯ, ಮಾಘ, ಫಾಲ್ಗುಣ ಈ ಮೂರು ಮಾಸಗಳಲ್ಲಿ ಮೈನೆರದರೆ ಲೇಸುಂಟು.

# ನಷ್ಟವಸ್ತುವಿನ ಪ್ರಶ್ನೆ ಹೇಳುವದು

| ರೋಹಿಣಿ | ಮೃಗಶಿರ | ಆರಿದ್ರಾ | ಪುನರ್ವಸು |
|---|---|---|---|
| ಮಘಿ | ಆಶ್ಲೇಷ | ಪುಷ್ಯ | ೦ |
| ೦ | ಹುಬ್ಬಿ | ಉತ್ರಿ | ಹಸ್ತಾ |
| ವಿಶಾಖಾ | ಸ್ವಾತಿ | ಚಿತ್ತಿ | ೦ |
| ೦ | ಅನುರಾಧಾ | ಜ್ಯೇಷ್ಠ | ಮೂಲಾ |
| ಶ್ರವಣ | ಉತ್ರಾಷಾಢ | ಪೂರ್ವಾಷಾಢ | ೦ |
| ೦ | ಧನಿಷ್ಠ | ಶತತಾರಾ | ಪೂರ್ವಾಭಾದ್ರ. |
| ಅಶ್ವಿನಿ | ರೇವತಿ | ಉತ್ರಾಭಾದ್ರಪದ | ೦ |
| ೦ | ಭರಣಿ | ಕೃತ್ತಿಕಾ | ೦ |
| ಕನಿಷ್ಟ ಸಿಗಂದಿಲ್ಲ ಎಂದು ಹೇಳುವದು. | ಮಧ್ಯಮ ನೋಡಿದರೆ ದಣಿಸಿ ಸಿಗುವದೆಂದು ಹೇಳುವದು. | ಸಾಧಾರಣ ಸಿಕ್ಕಿತೆಂದು ಹೇಳುವದು. | ಉತ್ತಮ ತಾತ್ಕಾಲಕ್ಕೆ ಸಿಕ್ಕಿತೆಂದು ಹೇಳುವದು. |

# ಜನ್ಮನಾಮದ ಅಕ್ಷರುಗಳು ೧೦೮

ಅಶ್ವಿನಿ, ಭರಣಿ, ಕೃತ್ತಿಕ ಪಾದಂ **ಮೇಷರಾಶಿ.**

ಕೃತ್ತಿಕ ತ್ರಿಯೋಪಾದಂ, ರೋಹಿಣಿ, ಮೃಗಶಿರಾರ್ಧ **ವೃಷಭರಾಶಿ.**

ಮೃಗಶಿರ ಅರ್ಧ, ಆರಿದ್ರಾ, ಪುನರ್ವಸು ತ್ರಿಯೋಪಾದಂ **ಮಿಥುನ ರಾಶಿ.**

ಪುನರ್ವಸು ಅಂತ್ಯಪಾದಂ, ಪುಷ್ಯ, ಆಶ್ಲೇಷ **ಕರ್ಕರಾಶಿ.**

ಮಘ, ಹುಬ್ಬ, ಉತ್ರಿ ಪಾದಂ **ಸಿಂಹರಾಶಿ.**

ಉತ್ರಿ ತ್ರಿಯೋಪಾದಂ, ಹಸ್ತಾ, ಚಿತ್ತಿ ಅರ್ಧ **ಕನ್ಯಾರಾಶಿ.**

**ಚಿತ್ತಿ** ಅರ್ಧ, ಸ್ವಾತಿ, ವಿಶಾಖಾ ತ್ರಿಯೋಪಾದಂ **ತುಲಾರಾಶಿ.**

ವಿಶಾಖಾ ಏಕಪಾದಂ, ಅನುರಾಧಾ, ಜ್ಯೇಷ್ಠ **ವೃಶ್ಚಿಕರಾಶಿ.**

ಮೂಲಾ, ಪೂರ್ವಾಷಾಢಾ, ಉತ್ರಾಷಾಢಾ ಪಾದಂ **ಧನುರಾಶಿ.**

ಉತ್ರಾಷಾಢಾ ತ್ರಿಯೋಪಾದಂ, ಶ್ರವಣ, ಧನಿಷ್ಠ ಅರ್ಧಪಾದಂ **ಮಕರರಾಶಿ.**

ಧನಿಷ್ಠ ಅರ್ಧ, ಶತತಾರಾ, ಪೂರ್ವಾಭಾದ್ರಪದ ತ್ರಿಯೋಪಾದಂ **ಕುಂಭರಾಶಿ.**

ಪೂರ್ವಾಭಾದ್ರಪದ ಪಾದಂ, ಉತ್ರಾಭಾದ್ರಪದ, ರೇವತಿ **ಮೀನರಾಶಿ.**

ಅಶ್ವಿನಿ, ಮೃಗಶಿರ, ಪುಷ್ಯ, ಸ್ವಾತಿ, ಹಸ್ತಾ, ಪುನರ್ವಸು, ಅನುರಾಧ ರೇವತಿ, ಶ್ರವಣ **ಈ ನಕ್ಷತ್ರ ದೇವಗಣ.**

ಕೃತ್ತಿಕ, ಮಘ, ವಿಶಾಖಾ, ಆಶ್ಲೇಷಾ, ಶತತಾರಾ, ಧನಿಷ್ಠ, ಚಿತ್ತಿ, ಜ್ಯೇಷ್ಠ, ಮೂಲಾ **ಈ ನಕ್ಷತ್ರ ರಾಕ್ಷಸಗಣ.**

ಭರಣಿ, ರೋಹಿಣಿ, ಆರಿದ್ರಾ, ಹುಬ್ಬಾ, ಪೂರ್ವಾಷಾಢಾ, ಪೂರ್ವಾಭಾದ್ರಪದ, ಉತ್ರಿ, ಉತ್ರಾಷಾಢಾ, ಉತ್ರಾಭಾದ್ರಪದ **ಈ ನಕ್ಷತ್ರ ಮನುಷ್ಯಗಣ.**

ಹೆಣ್ಣಿಂದು ಗಂಡಿಂದು ಗಣ ಒಂದೇ ಆದರೆ ಉತ್ತಮ. ದೇವಗಣ ಮನುಷ್ಯಗಣ ಆದರೆ ಮಧ್ಯಮ. ದೇವಗಣ ದೈತ್ಯಗಣವಾದರೆ ಕಲಹ. ಮನುಷ್ಯಗಣ ರಾಕ್ಷಸಗಣ ಆದರೆ ಮರಣ.

# ಹೆಣ್ಣಿನ ಸಾಲಾವಳಿಯ ನೋಡುವದು

**ಚು ಚೆ ಚೊ ಲಾ ಅಶ್ವಿನಿ,** ಯೋನಿ ಗಂಡುಕುದರಿ, ದೇವಗಣ, ಮೇಷರಾಶಿ, ಗ್ರಹ ಮಂಗಳ ಒಡೆಯನು.

**ಲಿ ಲು ಲೆ ಲೊ ಭರಣಿ,** ಯೋನಿ ಆನೆ, ಮನುಷ್ಯಗಣ, ಮೇಷ ರಾಶಿ, ಗ್ರಹ ಮಂಗಳ ಒಡೆಯನು.

**ಅ ಇ ಉ ಏ ಕೃತ್ತಿಕಾ,** ಯೋನಿ ಆಡು, ರಾಕ್ಷಸಗಣ, ಮೇಷ ರಾಶಿ, ಗ್ರಹ ಮಂಗಳ ಒಡೆಯನು.

**ವೊ ವ ವಿ ವಾ ರೋಹಿಣಿ,** ಯೋನಿ ಹೆಣ್ಣುನಾಗರ, ಮನುಷ್ಯ ಗಣ, ವೃಷಭರಾಶಿ, ಗ್ರಹ ಶುಕ್ರ ಒಡೆಯನು.

**ಯೋ ವೈ ಕಾ ಕಿ ಮೃಗಶಿರಾ,** ಯೋನಿ ಗಂಡುಸರ್ಪ, ದೇವಗಣ, ವೃಷಭರಾಶಿ, ಗ್ರಹ ಶುಕ್ರ ಒಡೆನು.

**ಕಾ ಗಂ ಜಾ ಜಿ ಆರಿದ್ರಾ,** ಯೋನಿ ಶುನಕಾ, ಮನುಷ್ಯಗಣ, ಮಿಥುನರಾಶಿ, ಗ್ರಹ ಬುಧ ಒಡೆಯನು.

**ಕೆ ಕೊ ಹಾ ಹಿ ಪುನರ್ವಸು,** ಯೋನಿ ಬೆಕ್ಕು, ದೇವಗಣ, ಮಿಥುನರಾಶಿ, ಗ್ರಹ ಬುಧ ಒಡೆಯನು.

**ಹೂ ಹೆ ಹೊ ಡಾ ಪುಷ್ಯ,** ಯೋನಿ ಹೋತು, ದೇವಗಣ, ಕರ್ಕಾಟಕರಾಶಿ, ಗ್ರಹ ಚಂದ್ರ ಒಡೆಯನು.

**ಡಿ ಡು ಡೆ ಡೊ ಆಶ್ಲೇಷಾ,** ಯೋನಿ ಮಾರ್ಜಲಾ, ರಾಕ್ಷಸಗಣ, ಕರ್ಕಾಟಕರಾಶಿ, ಗ್ರಹ ಚಂದ್ರ ಒಡೆಯನು.

**ಮಾ ಮಿ ಮು ಮೆ ಮಘಾ,** ಯೋನಿ ಇಲಿ, ರಾಕ್ಷಸಗಣ, ಸಿಂಹ ರಾಶಿ, ಗ್ರಹ ಸೂರ್ಯ ಒಡೆಯನು.

**ಮೊ ಟ ಟಿ ಟು ಹುಬ್ಬಾ,** ಯೋನಿ ಹೆಣ್ಣು ಇಲಿ, ರಾಕ್ಷಸಗಣ, ಸಿಂಹರಾಶಿ, ಗ್ರಹ ಸೂರ್ಯ ಒಡೆಯನು.

**ಟೆ ಟು ಪಾ ಪಿ ಉತ್ರ,** ಯೋನಿ ಎತ್ತು, ಮನುಷ್ಯಗಣ, ಕನ್ಯಾ ರಾಶಿ, ಗ್ರಹ ಬುಧ ಒಡೆಯನು.

**ಪು ಷ ಣಾ ಠಾ ಹಸ್ತಾ,** ಯೋನಿ ಎಮ್ಮೆ, ದೇವಗಣ, ಕನ್ಯಾ ರಾಶಿ, ಗ್ರಹ ಬುಧ ಒಡೆಯನು.

**ಪೆ ಪೊ ರಾ ರಿ ಚಿತ್ತಿ,** ಯೋನಿ ಗಂಡುಹುಲಿ, ರಾಕ್ಷಸಗಣ, ಪಾದ೨ ಕನ್ಯಾರಾಶಿ, ತುಲಾರಾಶಿ ೨ ಪಾದ, ಗ್ರಹ ಶುಕ್ರ ಒಡೆಯನು.

**ರು ರೆ ರೊ ತಾ ಸ್ವಾತಿ,** ಯೋನಿ ಕೋಣ, ದೇವಗಣ, ತುಲಾ ರಾಶಿ, ಗ್ರಹ ಶುಕ್ರ ಒಡೆಯನು.

**ತಿ ತು ತೆ ತೊ ವಿಶಾಖಾ,** ಯೋನಿ ಹೆಣ್ಣು ವ್ಯಾಘ್ರ, ಮನುಷ್ಯ ಗಣ, ಪಾದ ೩ ತುಲಾರಾಶಿ, ಪಾದ ೧ ವೃಶ್ಚಿಕರಾಶಿ, ಗ್ರಹ ಮಂಗಳ ಒಡೆಯನು.

**ನಾ ನಿ ನು ನೆ ಅನುರಾಧಾ,** ಯೋನಿ ಹುಲಿ, ದೇವಗಣ, ವೃಶ್ಚಿಕ ರಾಶಿ, ಗ್ರಹ ಮಂಗಳ ಒಡೆಯನು

**ನೊ ಯಾ ಯಿ ಯು ಜ್ಯೇಷ್ಠಾ,** ಯೋನಿ ಯರಳೆ, ರಾಕ್ಷಸಗಣ, ವೃಶ್ಚಿಕರಾಶಿ, ಗ್ರಹ ಮಂಗಳ ಒಡೆಯನು.

**ಯೆ ಯೊ ಭಾ ಭಿ ಮೂಲಾ,** ಯೋನಿ ಶುನಕಾ, ರಾಕ್ಷಸಗಣ, ಧನುರಾಶಿ, ಗ್ರಹ ಬೃಹಸ್ಪತಿ ಒಡೆಯನು.

**ಬು ಧ ಬಾ ಡ ಪೂರ್ವಾಷಾಢಾ,** ಯೋನಿ ಮರ್ಕಟ, ಮನುಷ್ಯ ಗಣ, ಧನುರಾಶಿ, ಗ್ರಹ ಬೃಹಸ್ಪತಿ ಒಡೆಯನು.

**ಬೆ ಬೊ ಜಾ ಜಿ ಉತ್ರಾಷಾಢಾ,** ಯೋನಿ ಮುಂಗಲಿ, ಮನುಷ್ಯ ಗಣ, ಪಾದ ೧ ಧನುರಾಶಿ, ಪಾದ ೩ ಮಕರರಾಶಿ, ಗ್ರಹ ಶನಿ ಒಡೆಯನು.

**ಜು ಜೆ ಜೊ ಕಾ ಅಭಿಜಿತು,** ಯೋನಿ ಮರ್ಕಟ, ದೇವಗಣ, ಮಕರರಾಶಿ, ಗ್ರಹ ಶನಿ ಒಡೆಯನು.

**ಖಿ ಖು ಖೆ ಖೊ ಶ್ರವಣ,** ಯೋನಿ ಮರ್ಕಟ, ದೇವಗಣ, ಮಕರ ರಾಶಿ, ಗ್ರಹ ಶನಿ ಒಡೆಯನು.

**ಗಾ ಗಿ ಗು ಗೆ ಧನಿಷ್ಠಾ,** ಯೋನಿ ಹೆಣ್ಣುಸಿಂಹ, ರಾಕ್ಷಸಗಣ, ಪಾದ ೨ ಮಕರರಾಶಿ, ಪಾದ ೨ ಕುಂಭರಾಶಿ, ಗ್ರಹ ಶನಿ ಒಡೆಯನು.

**ಗೊ ಸ ಸಿ ಸು ಶತತಾರಾ,** ಯೋನಿ ಹೆಣ್ಣು ಕುದುರೆ, ರಾಕ್ಷಸ ಗಣ, ಕುಂಭರಾಶಿ, ಗ್ರಹ ಶನಿ ಒಡೆಯನು.

**ಸೆ ಸೊ ದಾ ದಿ ಪೂರ್ವಾಭಾದ್ರಪದ,** ಯೋನಿ ಗಂಡುಸಿಂಹ, ಮನುಷ್ಯಗಣ, ಪಾದ ೩ ಕುಂಭರಾಶಿ, ಪಾದ ೧ ಮೀನರಾಶಿ, ಗ್ರಹ ಶನಿ ಒಡೆಯನು.

**ದು ಸಂ ಜ ತೆ ಉತ್ರಾಭಾದ್ರಪದ,** ಯೋನಿ ಆಕಳವು, ಮನುಷ್ಯ ಗಣ, ಮೀನರಾಶಿ, ಗ್ರಹ ಬ್ರಹಸ್ಪತಿ ಒಡೆಯನು.

**ದೆ ದೊ ಚಾ ಚಿ ರೇವತಿ,** ಯೋನಿ ಹೆಣ್ಣು ಆನಿ, ಮೀನರಾಶಿ, ಗ್ರಹ ಬ್ರಹಸ್ಪತಿ ಒಡೆಯನು.

# ನಕ್ಷತ್ರ, ಯೋನಿಕೂಟ, ಗಣಕೂಟ

## ಹೇಳುವದು

ಯೋನಿಕೂಟದಲ್ಲಿ ಹೆಣ್ಣಿಗೆ ಗಂಡಿಗೆ ಗಂಡು ಕೂಡಿದರೆ ಮುಂದೆ ಮಕ್ಕಳು ಇಲ್ಲವು.

# ಗಣಕೂಟದ ವಿವರವು

ಎರಡು ಗಣ ಒಂದೇ ಆದರೆ ಉತ್ತಮ. ದೇವಗಣಕ್ಕೆ ಮನುಷ್ಯ ಗಣಕ್ಕೆ ಮಧ್ಯಮ. ಮನುಷ್ಯಗಣಕ್ಕೆ ರಾಕ್ಷಸಗಣಕ್ಕೆ ಮರಣ. ದೇವಗಣಕ್ಕೆ ದೈತ್ಯಗಣಕ್ಕೆ ಕಲಹ.

# ರಾಶಿಯ ವೈರ ವಿವರವು

ಮೇಷರಾಶಿಗೆ ವೃಶ್ಚಿಕರಾಶಿಗ ವೈರ. ವೃಷಭರಾಶಿಗೆ ತುಲಾರಾಶಿಗೆ ವೈರ ಮೀನರಾರಾಶಿಗೆ ಮಕರರಾಶಿಗ ವೈರ. ಕರ್ಕಾಟಕರಾಶಿಗೆ ಧನು

ರಾಶಿಗೆ ವೈರ. ಸಿಂಹರಾಶಿಗೆ ಮೀನರಾಶಿಗೆ ವೈರ. ಕನ್ಯಾರಾಶಿಗೆ ಕುಂಭ ರಾಶಿಗೆ ವೈರ.

# ಗ್ರಹಗಳ ವೈರ ವಿವರವು

ಸೂರ್ಯಗೆ ಶನಿಗೆ ವೈರವು. ಮಂಗಳಗೆ ಶನಿಗೆ ವೈರವು. ಬ್ರಹಸ್ಪತಿಗೆ ಶುಕ್ರಗೆ ವೈರವು. ಚಂದ್ರಗೆ ಶನಿಗೆ ವೈರವು. ಶುಕ್ರಗೆ ರಾಹುವಿಗೆ ವೈರವು. ಬುಧವಿಗೆ ಮಂಗಳಗೆ ವೈರವು. ಬುಧವಿಗೆ ಚಂದ್ರಗೆ ವೈರವು. ಬುಧವಿಗೆ ಶುಕ್ರಗೆ ವೈರವು. ರಾಹು, ಬ್ರಹಸ್ಪತಿ, ಸೂರ್ಯಗೆ ವೈರವು. ಚಂದ್ರಗೂ ಸೂರ್ಯಗೂ ವೈರವು.

# ಯೋನೀವರ್ಗ ವಿವರವು

ಆಕಳಿಗೂ ಹುಲಿಗೂ ವೈರವು. ಕೋಣಗೂ ಕುದುರೆಗೂ ವೈರವು. ಮುಂಗಲಿಗೂ ಸರ್ಪಗೂ ವೈರವು. ಇಲಿಗೂ ಬೆಕ್ಕಿಗೂ ವೈರವು. ಆನಿಗೂ ಸಿಂಹಗೂ ವೈರವು. ಯರಳಿಗೂ ಶ್ವಾನಗೂ ವೈರವು. ಸೂಕರಗೂ ನಾಯಿಗೂ ವೈರವು.

# ದಿಕ್ಕುಗಳ ರಾಶಿ

ಮೂಡಲುದಿಕ್ಕಿನ ರಾಶಿ— ಧನು, ಮೇಷ, ಸಿಂಹ. ಟೆಂಕಲುದಿಕ್ಕಿನ ರಾಶಿ— ವೃಷಭ, ಕನ್ಯಾ, ಮಕರ. ಪಡವಲುದಿಕ್ಕಿನ ರಾಶಿ— ಮಿಥುನ, ಕುಂಭ, ತುಲಾ. ಬಡಗಲುದಿಕ್ಕಿನ ರಾಶಿ— ಕರ್ಕಾಟಕ, ವೃಶ್ಚಿಕ, ಮೀನ.

# ಲಗ್ನ ರಾಶಿಯ ಫಲ

ಕನ್ಯಾ, ತುಲಾ, ಮಿಥುನ ಈ ರಾಶಿಗಳು ಲಗ್ನಕ್ಕೆ ಉತ್ತಮವು. ಧನು ರಾಶಿಯ ಲಗ್ನ ಮಧ್ಯಮು. ಉಳಿದ ರಾಶಿಗಯ ಲಗ್ನಗಳು ಕನಿಷ್ಟ. ಕನಿಷ್ಟ ಲಗ್ನದೊಳಗೆ ಬುಧ, ಗುರು, ಶುಕ್ರ ಈ ಮೂರು ಗ್ರಹಗಳು ಉದಯವಾದರೆ ಒಳಿತು, ಇವು ಶುಭಗ್ರಹಂಗಳ ಲಗ್ನ ರಾಶಿಗಳು.

# ರಾಶಿಯ ಜನ್ಮವು

ಕರ್ಕಾಟಕ, ವೃಷಭ, ಮೀನ ಇವು ಮೂರು ಬ್ರಾಹ್ಮಣರಾಶಿ. ಸಿಂಹ, ತುಲಾ, ಧನು ಇವು ಮೂರು ಕ್ಷತ್ರಿಯರಾಶಿ. ಮೇಷ, ಮಿಥುನ, ಕುಂಭ ಇವು ಮೂರು ವೈಶ್ಯರಾಶಿ. ಮಕರ, ವೃಶ್ಚಿಕ, ಕನ್ಯಾ ಇವು ಮೂರು ಶೂದ್ರ ರಾಶಿ.

# ಮದುಮಕ್ಕಳಿಕೆ ಅರಿಷಣ ಹಚ್ಚುವದು ಒಲವುಳ್ಳ ಐದೆಯರ ಹೆಸರು

ಚೆನ್ನಕ್ಕ, ಕೆಂಚಕ್ಕ, ನಾಗಕ್ಕ, ದೇವಕ್ಕ, ಸಂಕಕ್ಕ, ರೇವಕ್ಕ, ಕಲ್ಲಕ್ಕ ಇಷ್ಟು ಮಂದಿ ದೇವಗಣದವರು. ಇಂತಿ ಇವರ ಕೈಯ್ಯಿಂದ ಅರಿಷಣ ಹಚ್ಚುವದು.

# ಕಠಾರಿ ಆಯುಧ ತೆಗೆದುಕೊಳ್ಳುವಾಗ್ಗೆ ನೋಡುವದು ಕತ್ತಿ ಕಠಾರಿ ಶಕುನ ಫಲ

ಅಲಗುಯಿದಷ್ಟನ್ನು ಮುಷ್ಟಿ ಪರಜು ಹೊರತಾಗಿ ಹೆಬ್ಬೆರಳಿಲಿಂದ ಎಣಿಸಿ ಅಳತಿಯುಮಾಡಿ ಆದಷ್ಟನ್ನು ೧೩ ಹೆಚ್ಚುಗುಣಿಸಿ ೮ ರಿಂದ ಭಾಗಿಸಿ ಉಳಿದ ಶೇಷವು ನೋಡುವದು. ೧ ಉಳಿದರೆ ಇಂದ್ರ, ಒಳ್ಳೇದು. ೨ ಉಳಿದರೆ ಅಗ್ನಿ, ಹೀನ. ೩ ಉಳಿದರೆ ಯಮ, ಸೋಕ್ಕು ಬಹಳ; ಅನ್ನ ಇಲ್ಲ. ೪ ಉಳಿದರೆ ನೈಋತ್ಯ, ಮಧ್ಯಸ್ತಿ. ೫ ಉಳಿದರೆ ವರುಣ, ಅನುಮಾನ. ೬ ಉಳಿದರೆ ವಾಯುವ್ಯ, ಗಾಳಿ ಒಳ್ಳೇದಲ್ಲ ೭ ಉಳಿದರೆ ಕುಬೇರ, ಉತ್ತಮ. ೮ ಉಳಿದರೆ ಈಶಾನ್ಯ, ಅಮಹ ಮಹಾ ಸಂತೋಷ.



# ಮನೆ ಕಟ್ಟುವ ಶಾಸ್ತ್ರ



## ವಾಸ್ತುಪುರುಷನ ಕಾರ್ಯಕ್ರಮಗಳು

ಮನೆ ಕಟ್ಟುವದಕ್ಕೆ, ಪಕ್ಕಲು ಇಡುವದಕ್ಕೆ, ಪಕ್ಕಲು ಹೋಗುವದಕ್ಕೆ, ಸರ್ವಕಾರ್ಯಕ್ಕೂ ಬರುವದು.

ಭಾದ್ರಪದ, ಆಶ್ವಿಜ, ಕಾರ್ತಿಕ ಈ ಮೂರು ತಿಂಗಳು ತೆಲಿ, ಪಡವಲು ಕಾಲು, ಬಡಗಲು ಬಲ, ತೆಂಕಲು ಎಡನಾಗಿಹನು. ಆತನ ತಲಿಯಕಡೆಗೆ ಕಟ್ಟಲಾಗದು. ಪಕ್ಕಲು ಹೋಗಲಾಗದು.

ಈ ಮೂರು ತಿಂಗಳಲ್ಲಿ ತಲಿಯಕಡೆಗೆ ಮನೆ ಕಟ್ಟಿದರೆ ಸಾಯುವರು. ಪಾದದಕಡೆಗೆ ಕಟ್ಟಿದರೆ ಮನೆಯಬಿಟ್ಟು ಹೋಗುವರು.

ಬಡಗಲು ಕಟ್ಟಿದರೆ ಬಡತನ ತಪ್ಪದು ಟೆಂಕಲು ಮನೆ ಕಟ್ಟಿದರೆ ಅರ್ಥಲಾಭ. ಸಂಪತ್ತು ಪಕ್ಕಲು ಹೋದರೆ ಸುಖದಲ್ಲಿ ಬಾಳ್ವರು ಸಂತೋಷದಿಂದ ಇದ್ದಾರು. ಈ ಮೂರು ತಿಂಗಳು ತೆಂಕಲು ಹೋಗಬೇಕು.

ಮಾರ್ಗಶಿರ, ಪುಷ್ಯ, ಮಾಘ ಈ ಮೂರು ತಿಂಗಳು ತೆಂಕಲು ತೆಲಿ, ಪಡವಲು ಎಡ, ಬಡಗಲು ಪಾದ, ಮೂಡಲು ಬಲನಾಗಿಹನು.

## ಮನೆಯಕಟ್ಟುವ ಲಕ್ಷಣ

ತಲಿಯಕಡಿಗೆ ಕಟ್ಟಿದರೆ ಸಾಯುವರು, ಟೆಂಕಲು ಕಟ್ಟಲಾಗದು.

ಬಡಗಲು ಪಾದದಕಡಿಗೆ ಕಟ್ಟಿದರೆ ಮನೆಯು ಬಿಟ್ಟು ಹೋಗುವರು.

ಮೂಡಲು ಬಲದಕಡಿಗೆ ಕಟ್ಟಲಾಗದು.

ಪಡವಲು ಎಡದಕಡಿಗೆ ಕಟ್ಟಿದರೆ ಸುಖದಲ್ಲಿ ಬಾಳುವರು.

ವಕ್ಕಲು ಎಡದಕಡಿಗೆ ಹೋದರೆ ಸುಖದಲ್ಲಿ ಬಾಳುವರು, ಸಂತೋಷದಲ್ಲಿ ಇರುವರು.

ತಲಿಯುಕಡಿಗೆ ಹೋಗಬಾರದು; ಹೋದರೆ ಮರಣ.

ಒಡಗಲು ಪಾದದಕಡಿಗೆ ಹೋಗಬಾರದು; ಹೋದರೆ ಎಲ್ಲರೂ ಸಾಯುವರು.

ಮೂಡಲು ಹೋದರೆ ಒಲು ನಷ್ಟ. ಬಡತನವು.

ಫಾಲ್ಗುಣ, ಚೈತ್ರ, ವೈಶಾಖ ಈ ಮೂರು ತಿಂಗಳು ಪಡವಲು ತಲಿ, ಮೂಡಲು ಪಾದ, ಟೆಂಕಲು ಬಲ, ಬಡಗಲು ಎಡನಾಗಿಹನು.

## ಮನೆಯುಕಟ್ಟುವ ಲಕ್ಷಣ

ಪಡವಲು ತಲಿಯುಕಡೆಗೆ ಕಟ್ಟಿದರೆ ಮರಣ ತೋರುವದು.

ಮೂಡಲು ಪಾದದಕಡೆಗೆ ಕಟ್ಟಿದರೆ ಎಲ್ಲರೂ ಸಾಯುವರು.

ಟೆಂಕಲು ಬಲ, ಮನೆ ಕಟ್ಟಿದರೆ ಬಡತನ ಬಿಡದು.

ಒಡಗಲು ಎಡದಕಡೆಗೆ ಕಟ್ಟಿದರೆ ಸುಖ–ಸಂತೋಷದಲ್ಲಿ ಬಾಳುವರು.

ವಕ್ಕಲು, ಪಡವಲು ತಲಿಕಡಿಗೆ ಹೋದರೆ ಮರಣ.

ಮೂಡಲು ಪಾದದಕಡಿಗೆ ವಕ್ಕಲು ಹೋದರೆ ಹೆಂಡತಿ ಸಾಯುವಳು, ಕೇಡು ತಪ್ಪದು. ಇವು ಮೂರು ತಿಂಗಳು ಟೆಂಕಲು ಬಲದಕಡಿಗೆ ವಕ್ಕಲು ಹೋದರೆ ನಷ್ಟ, ಬಡತನ, ಅರ್ಥನಾಶ, ಮಕ್ಕಳಿಗೆ ಕೇಡು.

ಬಡಗಲು ಎಡದಕಡಿಗೆ ಹೋದರೆ ಲೇಸುಂಟು, ಸುಖ–ಸಂತೋಷದಲ್ಲಿ ಬಾಳುವರು.

ಜ್ಯೇಷ್ಠ, ಆಷಾಢ, ಶ್ರಾವಣ ಈ ಮೂರು ತಿಂಗಳು ಬಡಗಲು ತಲಿ, ಟೆಂಕಲು ಪಾದ, ಪಡವಲು ಬಲ, ಮೂಡಲು ಎಡನಾಗಿಹನು.

## ಮನೆಕಟ್ಟುವ ಲಕ್ಷಣ

ಬಡಲಗಲು ತಲಿಯಕಡಿಗೆ ಕಟ್ಟಿದರೆ ಮರಣ, ಹಾನಿ.

ಟೆಂಕಲು ಪಾದದಕಡಿಗೆ ಕಟ್ಟಿದರೆ ಮನೆಯು ಬಿಟ್ಟು ಹೋಗುವರು.

ಪಡವಲು ಬಲದಕಡಿಗೆ ಕಟ್ಟಿದರೆ ಬಲು ನಷ್ಟ.

ಮೂಡಲು ಎಡದಕಡಿಗೆ ಕಟ್ಟಿದರೆ ಲೇಸು.

ವಕ್ಕಲು ಹೋಗುವದಕ್ಕೆ ತಲಿಯಕಡಿಯ ವಕ್ಕಲು ಹೋದರೆ ಮರಣ, ಒಳಿತಲ್ಲ.

ಟೆಂಕಲು ಪಾದದಕಡಿಗೆ ಹೋದರೆ ಅರ್ಥನಾಶ, ಮಕ್ಕಳು ಹೀನವು.

ಪಡವಲು ಬಲದಕಡಿಗೆ ವಕ್ಕಲು ಹೋದರೆ ಹೀನ, ಕೇಡು ತಪ್ಪದು.

ಮೂಡಲು ಎಡದಕಡಿಗೆ ಹೋದರೆ ಸುಖ ಸಂತೋಷದಲ್ಲಿ ಬಾಳುವರು.

## ವಾಸ್ತುಪುರುಷನು ಮಾಡುವ ಕಾರ್ಯ

ಭಾದ್ರಪದ ಶುದ್ಧ ಪಾಡ್ಯ ಮೊದಲುಗೊಂಡು ಅನಂತನಹುಣ್ಣಿವೆಯ ತನಕ ಕಸಾ ಹೊಡೆಯುತ್ತಾನೆ.

ಅಲ್ಲಿಂದ ಭಾದ್ರಪದ ಅಮಾಸಿತನಕ ಸಾರಿಸಿ ಅಡಿಗೆ ಮಾಡುತ್ತಾನೆ.

ಆಶ್ವೀನ ಶುದ್ಧ ಶೀಗೀಹುಣ್ಣಿವೆಯತನಕ ಉಣ್ಣುತ್ತಾನೆ.

ಅಲ್ಲಿಂದ ಅಮಾಸಿತನಕ ನಿದ್ರೆಮಾಡುತ್ತಾನೆ.

ಕಾರ್ತಿಕ ಶುದ್ಧ ಗೌರೀಹುಣ್ಣಿವೆಯತನಕ ರಾಜಯೋಗಮಾಡುವನು.

ಅಲ್ಲಿಂದ ಅಮಾಸಿತನಕ ಸರ್ವ ಜೀನಸು ಕಟ್ಟಿಗೊಂಡು ಗುಳೇವು ಹೋಗುವನು.

ಮಾರ್ಗಶಿರ ಶುದ್ಧ ಹೊಸ್ತಲಹುಣ್ಣಿವೆಯತನಕ ಕಸಾಹೊಡೆಯುತ್ತಾನೆ.

ಅಲ್ಲಿಂದ ಅಮಾವಾಸಿತನಕ ಸಾರಿಸಿ ಅಡಿಗೆ ಮಾಡುತ್ತಾನೆ.

ಪುಷ್ಯ ಶುದ್ಧ ಬನದಹುಣ್ಣಿವೆಯತನಕ ಊಟಮಾಡುತ್ತಾನೆ.
ಅಲ್ಲಿಂದ ಅಮಾವಾಸಿತನಕ ನಿದ್ರೆಮಾಡುವನು.

ಮಾಘ ಶುದ್ಧ ಭಾರತಹುಣ್ಣಿವೆಯತನಕ ರಾಜಯೋಗಮಾಡುವನು.
ಅಲ್ಲಿಂದ ಅಮಾವಾಸಿತನಕ ಗುಳೇವು ಹೋಗುವನು.

ಫಾಲ್ಗುಣ ಶುದ್ಧ ಹುಣ್ಣಿವೆಯತನಕ ಕಸಾ ಹೊಡೆಯುತ್ತಾನೆ.
ಅಲ್ಲಿಂದ ಅಮಾವಾಸಿತನಕ ಅಡಿಗೆ ಮಾಡುತ್ತಾನೆ.

ಚೈತ್ರ ಶುದ್ಧ ಹುಣ್ಣಿವೆಯತನಕ ಊಟ ಮಾಡುವನು.
ಅಲ್ಲಿಂದ ಅಮಾವಾಸಿತನಕ ನಿದ್ರೆಯಮಾಡುವನು.

ವೈಶಾಖ ಶುದ್ಧ ಹುಣ್ಣಿವೆಯತನಕ ರಾಜಯೋಗಮಾಡುವನು.
ಅಲ್ಲಿಂದ ಅಮಾವಾಸಿತನಕ ಗುಳೇವು ಹೋಗುವನು.

ಜ್ಯೇಷ್ಠ ಶುದ್ಧ ಹುಣ್ಣಿವೆಯತನಕ ಕಸಾ ಹೊಡೆಯುವನು.
ಅಲ್ಲಿಂದ ಅಮಾವಾಸಿತನಕ ಸಾರಿಸಿ ಅಡಿಗೆಮಾಡುವನು.

ಆಷಾಢ ಶುದ್ಧ ಹುಣ್ಣಿವೆಯತನಕ ಊಟಮಾಡುವನು.
ಅಲ್ಲಿಂದ ಅಮಾವಾಸಿಯತನಕ ನಿದ್ರೆಮಾಡುವನು.

ಶ್ರಾವಣ ಶುದ್ಧ ಹುಣ್ಣಿವೆಯತನಕ ರಾಜಯೋಗಮಾಡುವನು.
ಅಲ್ಲಿಂದ ಅಮಾವಾಸಿತನಕ ಗುಳೇವು ಹೋಗುವನು.

## ವಾಸ್ತುಪುರುಷನ ಫಲ

ಕಸಾ ಹೊಡೆಯುವದು ನಾಶ, ಅಡಿಗೆಮಾಡುವದು ಉತ್ತಮ, ಊಟ ಮಾಡುವದು ಮಧ್ಯಮ, ನಿದ್ರೆಮಾಡುವದು ಕನಿಷ್ಟ, ರಾಜಯೋಗಮಾಡುವದು ಉತ್ತಮ, ಗುಳೇವು ಕಟ್ಟಿ ಹೋಗುವದು ಬಲು ಕನಿಷ್ಟ.

# ಮನೆಯ ಕಟ್ಟುವ ರೀತಿಯು

ಮನೆಯು ಕಟ್ಟುವಲ್ಲಿ ಉದ್ದವನ್ನು ಅಗಲವನ್ನು ಮನೆಯು ಕಟ್ಟಿಸುವ ಯಜಮಾನನ ಕೈಯಿಂದ ಮಳ ಹಾಕಿ ಉದ್ದ ಅಗಲವನ್ನು ಕೂಡಿ ಹೆಚ್ಚು ಗುಣಿಸಿ ೮ ರಿಂದ ಭಾಗಿಸಿ ಉಳಿದ ಲಬ್ಧವನ್ನು ನೋಡುವದು.

೧–೭ ಈ ಸಂಖ್ಯೆ ಉಳಿದರೆ ಉತ್ತಮವು. ಗುಣಿಸಿ ಬಂದ ಲಬ್ಧವನ್ನು ಉಳಿದ ಲಬ್ಧವನ್ನು ಎರಡನ್ನು ಕೂಡಿಸಿ ೮ ರಿಂದ ಭಾಗಿಸಿ ನೋಡುವದು.

೧ ಉಳಿದರೆ ಕೃತಾರ್ಥರಾಗಿ, ಪುಣ್ಯವುಳ್ಳವರಾಗಿ ಬಾಳುವರು. ಅಧ್ವಜ, ಆನಿಯೆಂಬುವದು.

೨ ಉಳಿದರೆ ಧುಮ್ರಾಯು, ಆ ಮನಿಯ ಕಟ್ಟಿಸಿದಾತಗೆ ಮರಣ.

೩ ಉಳಿದರೆ ಸಿಂಹಾಯು, ಜಯವಂತರಾಗಿ ಬಾಳುವರು.

೪ ಉಳಿದರೆ ಶ್ವಾನಾಯು, ಅನಂತ ರೋಗ ಪೀಡಾಕಾರವ ಅನುಭೋಗಿಸುವನು.

೫ ಉಳಿದರೆ ವೃಷಭಾಯು, ರಾಜಪದವಿಯ ಮನೆಯಾಗುವದು.

೬ ಉಳಿದರೆ ಖರಾಯು, ದುಃಖಿಗಳಾಗಿ ಬದುಕುವರು.

೭ ಉಳಿದರೆ ಗಜಾಯು, ಸುಖಿಗಳಾಗಿ ಬಾಳುವರು.

೮ ಉಳಿದರೆ ಕಾಕಾಯು, ಆ ಮನಿ ಎಂದಿಗೂ ಆಗದು; ನಷ್ಟವಾಗಿ ಹೋಗುವದು.

# ೮ ಆಯುಗಳು

೧ ಧ್ವಜಾಯು, ೨ ಧೂಮ್ರಾಯು, ೩ ಸಿಂಹಾಯು, ೪ ಶ್ವಾನಾಯು, ೫ ವೃಷಭಾಯು, ೬ ಖರಾಯು, ೭ ಗಜಾಯು, ೮ ಕಾಕಾಯು; ಇವು ಎಂಟು ಆಯುಂಗಳು.

# ಗ್ರಾಮ ಸಾಲಾವಳಿ ನೋಡುವದು

ಕೇಳಬಂದ ಮನುಷ್ಯರಿಗೆ ಆ ಊರಿನ ನಕ್ಷತ್ರವನ್ನು ಮೊದಲುಮಾಡಿಕೊಂಡು ಕೇಳಿದವರ ನಕ್ಷತ್ರದಮೇರೆಗೆ ಎಣಿಸಿಕೊಂಡು ಶುಭಾ ಅಶುಭಾ ಹೇಳುವದು.

೧-೨-೩-೪-೫ ಅದರ ತಲಿಯಮೇಲೆ ಅರ್ಥಲಾಭ ಹೇಳುವದು. ಆ ಊರೊಳಗೆ ಇರಬಹುದು; ಚಲೋದು.

೬-೭-೮ ಅದರ ಮುಂದೆ ಲಯಮೇಲೆ ನಾಶ ಹೇಳುವದು.

೯-೧೦-೧೧-೧೨-೧೩ ಅದರ ಯದಿಮೇಲೆ; ಹೊನ್ನು, ದನ-ಕರು, ಮಕ್ಕಳು ಹೆಚ್ಚುವದು; ಇರಬಹುದು.

೧೪-೧೫-೧೬-೧೭-೧೮-೧೯ ಅದರ ಕಾಲಮೇಲೆ ಇರುವದು; ಅನುಮಾನ, ಹೀನ ಹೇಳುವದು.

೨೦ ಅದರ ಕುಂಡಿಯಮೇಲೆ ಇದ್ದರೆ ಪ್ರಾಣಕ್ಕೆ ಭಯ ಹೇಳುವದು, ಹೀನವು.

೨೧-೨೨-೨೩-೨೪ ಅದರ ಹೊಂಕಳಮೇಲೆ ಇರುವದು; ಸುಖ ಸಂಪತ್ತು ಹೇಳುವದು.

೨೫-೨೬ ಅದರ ಎಡಗೈಯ್ಯಮೇಲೆ ಇರುವದು; ಪೀಡಾಕಾರಕ ಹೇಳುವದು; ಹೀನವು.

೨೭ ಅದರ ಬಲಗೈಯ್ಯಮೇಲಿರಲು ಮಹಾ ಸಂತೋಷ ಹೇಳುವದು.

# ಸಂವತ್ಸರದ ಶುಭಾಶುಭ

ಪ್ರಭವನಾಮ ಸಂವತ್ಸರ ಮೊದಲಮಾಡಿಕೊಂಡು ನಡೆವ ಸಂವತ್ಸರದ ತನಕ ಎಣಿಸಿ ಎರಡರಿಂದ ಹೆಚ್ಚು ಗುಣಿಸಿ ಅದರೊಳು ಮೂರು ಕಳೆದು ೭ ರಿಂದ ಭಾಗಿಸಿದರೆ ಮಿಕ್ಕ ಶೇಷದ ಫಲವು— ೧-೪ ಉಳಿದರೆ ದುರ್ಭಿಕ್ಷ.

೨–೫ ಉಳಿದರೆ ಸುಖ, ಸುಭಿಕ್ಷ. ೩–೬ ಉಳಿದರೆ ರಾಜಯೋಗವು. ಭಾಗ ಹರಿದರೆ ರಾಜರಾಜರಿಗೆ ಜಗಳಯೆಂದು ತಿಳಿಯುವದು.

# ಉರ್ಧ್ವಮುಖ, ಅಧೋಮುಖ, ಸಮಮುಖ ನಕ್ಷತ್ರಂಗಳು

**ಊರ್ಧ್ವಮುಖ ನಕ್ಷತ್ರಗಳು—** ಪುಷ್ಯ, ಆರಿದ್ರಾ, ಶ್ರವಣ, ಉತ್ರ, ಉತ್ರಾಷಾಢ, ಉತ್ರಾಭಾದ್ರಪದ, ಶತತಾರಾ, ರೋಹಿಣಿ, ಧನಿಷ್ಠ ಇವು ೯ ರಲ್ಲಿ ಗುಡಿ, ತೋರಣ, ಚಾವಡಿ, ಪಟ್ಟಾಭಿಷೇಕಮಾಡುವದಕ್ಕೆ ಲೇಸು ಹೇಳುವದು.

**ಅಧೋಮುಖ ನಕ್ಷತ್ರಗಳು—** ಮೂಲಾ, ಕೃತ್ತಿಕಾ, ಮಘಾ, ವಿಶಾಖಾ, ಆಶ್ಲೇಷಾ, ಹುಬ್ಬಿ, ಪೂರ್ವಾಷಾಢ, ಪೂರ್ವಾಭಾದ್ರಪದ, ಭರಣಿ ಇವು ೯ ರಲ್ಲಿ ಕೆರೆ, ಭಾಂವಿ, ಹಗೇವು, ದ್ರವ್ಯ ಹುಗಿಯುವದು, ದ್ರವ್ಯ ತಗೆಯುವದು, ಜೂಜನಾಡುವದು, ಏನಾದರೂ ಸಾಧನಮಾಡುವದಕ್ಕೆ ಲೇಸು.

**ಸಮಮುಖ ನಕ್ಷತ್ರಗಳು—** ಜ್ಯೇಷ್ಠ, ಪುನರ್ವಸು, ಹಸ್ತ, ಅಶ್ವಿನಿ, ಮೃಗಶಿರ, ರೇವತಿ, ಅನುರಾಧಾ, ಸ್ವಾತಿ, ಚಿತ್ತಿ ಇವು ೯ ರಲ್ಲಿ ಗಮನಕ್ಕೆ, ಎತ್ತು, ಕುದುರೆ, ಒಂಟೆ, ಪಶು ಕೊಳ್ಳುವದಕ್ಕೆ ಲೇಸು.

# ಗ್ರಹಣ ಹಿಡಿಯುವ ನಕ್ಷತ್ರಗಳು

ಹುಣ್ಣಿವೆಯ ದಿನ ಕೃತ್ತಿಕಾನಕ್ಷತ್ರ ಬಂದರೆ ಗ್ರಹಣವು. ಪುನರ್ವಸು ನಕ್ಷತ್ರ ಬಂದರೆ ಗ್ರಹಣ. ಮಘಾನಕ್ಷತ್ರ ಬಂದರೆ ಗ್ರಹಣ. ಚಿತ್ತಿನಕ್ಷತ್ರ ಬಂದರೆ ಗ್ರಹಣ. ವಿಶಾಖಾನಕ್ಷತ್ರ ಬಂದರೆ ಗ್ರಹಣ. ಶ್ರವಣಾನಕ್ಷತ್ರ ಬಂದರೆ ಗ್ರಹಣ. ಈ ಆರು ನಕ್ಷತ್ರಗಳು ಹುಣ್ಣಿವೆಯ ದಿನ ಬಂದರೆ ಗ್ರಹಣ ವುಂಟು.

## ಪಾದಛಾಯ

ಪಾದಯುರಡಂಬಿಗಿದು ಹನ್ನೊಂದರೊಡಗೂಡಿ ೨೧೦ ಇಟ್ಟು ಭಾಗಿಸಿದರೆ ಬಂದದ್ದು ಘಳಿಗಿ, ಮಿಕ್ಕಿದ್ದು ಪಳ.

## ಗ್ರಹಣ ಹಿಡಿಯುವ ಹಂಚಿಕೆ

ಹಿಂದುಳಿದ ಮಾಸವನು ಕುಂದದಿಮ್ಮಡಿಮಾಡಿ ನಂದಿಹುಣ್ಣಿವಿಲಿಂದ ಹನ್ನೊಂದು ವಡಗೂಡಿ ಇನ್ನೂರಾಹತ್ತಿಟ್ಟು ಭಾಗಿಸಿದರೆ ಬಂದಮಾಸ ಗ್ರಹಣ ಹೇಳುವದು, ಕುಂದೆನು ಮಿಕ್ಕಿದ್ದು ತಾಸುಮಂಡಲ.

## ಹೆಣ್ಣು ಕೇಳುವ ಫಲ

ನಿಂತು ಕೇಳುವವನ ಬಾಯಲ್ಲಿ ಹೊರಡುವ ಅಕ್ಷರ ಊರು ಯಾವದು ಅಂದರೆ ಆ ಊರ ಅಕ್ಷರ ಇಮ್ಮಡಿಮಾಡಿ ತಿಥಿವಡಗೂಡಿ ನಾಲ್ಕರಿಂದ ಭಾಗಿಸಿ ಬಂದದ್ದು ನೋಡುವದು.

೧ ಉಳಿದರೆ ಪೂರ್ವದಬಾಗಿಲ ಎಂದು ಹೇಳುವದು. ಹೆಣ್ಣು ಗಂಟು ಬೀಳುವದು.

೨ ಉಳಿದರೆ ಪಶ್ಚಿಮಬಾಗಿಲ ಎಂದು ಹೇಳುವದು. ಹೆಣ್ಣು ಆಲಸ್ಯದಿಂದ ಗಂಟು ಬೀಳುವದು.

೩ ಉಳಿದರೆ ಉತ್ತರಬಾಗಿಲ ಎಂದು ಹೇಳುವದು. ಹೆಣ್ಣು ರೋಗದಿಂದ ಗಂಟು ಬೀಳುವದು.

ಭಾಗ ಹರಿದರೆ ದಕ್ಷಿಣಬಾಗಿಲ ಎಂದು ಹೇಳುವದು. ಆ ಹೆಣ್ಣು ತಕ್ಕೊಂಡರೆ ಹಾನಿ ಗಂಟು ಬೀಳುವದು.

### ೨ನೇಯ ರೀತಿ

ಅದೇ ಅಕ್ಷರ, ಅದೇ ತಿಥಿ ಕೂಡಿಸಿ ಎಂಟರಿಂದ ಭಾಗಿಸಿದರೆ—

೧ ಉಳಿದರೆ ಅಷ್ಟಭೋಗಿ, ರೂಪವಂತಿ, ಕ್ಷಮವುಳ್ಳಾಕಿ.

೨ ಉಳಿದರೆ ಕಪ್ಪುವರ್ಣ, ಉಗ್ರಮುಖ, ಕಷ್ಟದಿಂದ ದುಃಖವಂತಿ, ಮಕ್ಕಳು ಬಹಳ, ರೋಗಿ.

೩ ಉಳಿದರೆ ನೀಲಿವರ್ಣ, ಶಾಂತಗುಣ, ವಿಚಾರವಂತಿ, ಧನನಾಸ್ತಿ, ಮಕ್ಕಳು ಚೋಚ್ಚಲ ಮರಚಲ ಬಾಳುವವು.

೪ ಉಳಿದರೆ ಶಂಖವರ್ಣ, ರಾಕ್ಷಸಗಣ, ದುರ್ಗಟ್ಟು, ಸರ್ವಕಷ್ಟ ಹಾನಿ.

೫ ಉಳಿದರೆ ಶ್ವೇತವರ್ಣ, ಉರ್ಧ್ವಮುಖ, ಚೊಂಚಹೆಣ್ಣು, ಧನಾಢ್ಯಳು ವೃದ್ಧಾಪ್ಯವಾಗುತನಕ ಬಾಳುವಳು ಗಂಡುಮಕ್ಕಳ ಹಡಿವಳು, ಹೆಣ್ಣು ಇಲ್ಲವು.

೬ ಉಳಿದರೆ ಆ ಹೆಣ್ಣು ತಾಂಬ್ರವರ್ಣ, ರೋಮ ಕಪ್ಪು, ಗಂಡ ರೋಮ, ನಾಭಿಸುಳಿ ಡೊಂಕ, ಧನಸಂಪನ್ನಿ, ಪುತ್ರನಾಸ್ತಿ, ರೋಗಿ, ಮಂದಬುದ್ಧಿ.

೭ ಉಳಿದರೆ ಕೆಂಪುವರ್ಣ, ಧನಸಂಪನ್ನಿ, ಅನ್ನಪೂರ್ಣ, ಗಂಡನ ಆಜ್ಞೆಯಲ್ಲಿ ಇರುವಳು, ಮಕ್ಕಳು ಅಲ್ಪ.

ಭಾಗ ಹರಿದರೆ ಶಾಂತಿ ಗುಣ ಸಕಲವಾಗಿ ಮಕ್ಕಳು ಬಹಳ.

# ನವಗ್ರಹಗಳ ಫಲ

## ಸೂರ್ಯನ ಫಲ

ಸ್ಥಾನಭ್ರಷ್ಟ ಭಯಂ ಸಂಪೆ ಧ್ಯಾನಭಂಗ ಮಹಾದ್ಭಯಂ ।
ಕ್ಷತ್ರುಕ್ಷಯಾ ವ್ಯಥಾರೋಗಂ ದುಃಖಂ ಸಿದ್ಧಿರ್ಧನಾಧನಂ ।
ಕ್ರಮೇಣ ಜನ್ಮರಾಶ್ಯಾದಿ ಕುರುತೆ ಪದ್ಮಬಾಂಧವಃ ॥

## ಚಂದ್ರನ ಫಲ

ಅನ್ನಪುಷ್ಟಿರ್ಧನಕ್ಷೀಣಂ ದ್ರವ್ಯಲಾಭಂಚ ಬಂಧನಂ ।
ನೃಪಕ್ರೋಧಂ ಸುಖಂ ಲಾಭಂ ನಷ್ಟಂ ದುಃಖಂ ಬಂಧನಾಗಮಂ ।
ಅತಿಲಾಭಂ ಅತಿದುಃಖಂ ಕ್ರಮೇಣ ಕುರುತೆ ಶಶಿ ॥

## ಮಂಗಳನ ಫಲ

ಮರಣಂ ಭೇದ ಸೌಭಾಗ್ಯಂ ರಿಪುಪೀಡಾ ರಿಪುಕ್ಷಯಂ ।
ಅರ್ಥಸಿದ್ಧಿಮನರ್ಥಂಚ ಶಸ್ತ್ರಬಾಧಾ ಧನಕ್ಷಯಂ ।
ಪುನಃಶೋಕಂ ಧನಂ ಕ್ರೂರಂ ಕ್ರಮೇಣ ಕುರುತೆ ಕುಜಾ ॥

# ಬುಧನ ಫಲ

ಬುಧನಂ ಹೇಮುಲಾಭಂಚ ರಿಪುಪೀಡಾ ರಿಪುಕ್ಷಯಂ ।
ದಾರಿದ್ರ ಭೂಷಣಂ ಭೇದ ಮನಸಿದ್ಧಿರ್ಧನಕ್ಷಯಂ ।
ತೇಜೋಮನೋರಥಕ್ಲೇಶಂ ಬುಧಃ ಕುರ್ಯಾತ್ಕ್ರಮಾಗತಿಃ ॥

# ಗುರುವಿನ ಫಲ

ದೇಶತ್ಯಾಗಂ ವಿತ್ತಲಾಭಂ ಅನರ್ಥ ವಿತ್ತನಾಶನಂ ।
ಸಂಪತ್ಯಕ್ಲೇಶಮಾರೋಗ್ಯಂ ಧನಹಾನಿರ್ಧನಾಗಮಂ ।
ಪ್ರಾಣಹಾನಿಂಚ ಲಾಭೇಚ ಸ್ಥಾನಭ್ರಷ್ಟಂಚ ತೇ ಗುರುಃ ॥

# ಶುಕ್ರನ ಫಲ

ಆರೋಗ್ಯಂ ಭೋಗಸೌಭಾಗ್ಯಂ ಅತಿಸೌಖ್ಯಂ ಶುಭೋದಯಂ ।
ವಿತ್ತನಾಶಮನಸ್ತಾಪಂ ವಸ್ತ್ರಾಲಂಕಾರಭೂಷಣಂ ।
ಕ್ಷುದ್ಭಯಂ ಧನಧಾನ್ಯಂಚ ಕ್ರಮೇಣ ಕುರುತೇ ಭೃಗುಃ ॥

# ಶನಿಯ ಫಲ

ವಿಪತ್ತ ಹಾನಿಸಂಪತ್ತಿಃ ಕುಕ್ಷಿರೋಗಂ ಸುತಕ್ಷಯಂ ।
ಲಕ್ಷ್ಮೀಕರಂ ದೈನ್ಯಂ ಮರಣಂ ದೇಹಶೋಷಣಂ ।
ಪೀಡನಂ ಲಾಭನಷ್ಟಂಚ ಕ್ರಮೇಣ ಕುರುತೆ ಶನಿ ॥

# ರಾಹು ಕೇತುವಿನ ಫಲ

ರಾಹುರ್ಜನ್ಮಗತೋಭಯಂಚ ಕಲಹಾ ಸೌಭಾಗ್ಯಮಾನಕ್ಷಯಂ ।
ಯುಚ್ಛತಿ ಚಿತ್ತಭಂಗಮುಹತ್ಸುಖಂ ನೃಪಭಯಂ ಚಾರ್ಥಕ್ಷಯಂ ಯುಚ್ಛತಿ ।
ಸಂತಾಪಕಲಹಂಚ ವಿತ್ತಮಧಿಕಂ ವಶಘ್ರಿವಿನಾಶಂ ನೃಣಂ ॥
ಕೇತುಸ್ತತ್ಫಲಮೀವರಾಶಿಮುಖಿಲಂ ಸಂವಶಂತ್ತಿ ಶುಭಾಃ ॥
ಶೂದ್ರೋಮಂದಬಲಂ ನೃಪಸ್ಯಭುವಿಜಂ ವಿಪ್ರಸ್ಯದೈವೇಜ್ಯಕಂ ।
ನಾನಾಜಾತಿಶನಿರ್ಬುಧಸ್ಯವನಿಜಂ ಸೂರ್ಯಸ್ಯಗೋಪಾಲಕಂ ।
ಸ್ತ್ರೀಣಾಶುಕ್ರಬಲಂ ವದಂತಿ ಮುನಯೋ ಜಾರಸ್ಯಕೇತುರ್ಬಲಂ ।
ರಾಹುರ್ಬಲಂ ವದಂತಿ ಚವಿರೆ ಸಂಶಂತ್ತಿ ಗಾರ್ಗಾದಯಾಃ ।
ಆದಿಗತೌ ಫಲದೌ ರವಿಭೌಮೌ ಮಧ್ಯಗತಃ ಫಲದೌ ಗುರುಶುಕ್ರ ।
ಅಂತಗತಃ ಫಲದೌ ಶನಿರಾಹು ಸರ್ವಗತಃ ಫಲದೌ ಬುಧಚಂದ್ರೌ ॥

# ರಾಹು ಇದ್ದ ನಕ್ಷತ್ರ ಆದಿಯಾಗಿ ನೋಡಬೇಕು.

| | | | | | | | | | | | | |
|---|---|---|---|---|---|---|---|---|---|---|---|---|
| ಸೂರ್ಯ | ಸ್ಥಾನ ಭ್ರಷ್ಟ | ಭಯ | ಶಾಂತ | ಮಾನ ಭಂಗ | ಮಹ ದ್ಭಯ | ಶತ್ರು ಕ್ಷಯ | ವಧ | ರೋಗ | ದುಃಖ | ಶಿದ್ಧಿ | ಧನ | ಅಧನ |
| ಚಂದ್ರ | ಅನ್ನ ಪುಷ್ಟ | ಧನ ಕ್ಷೀಣ | ದ್ರವ್ಯ ಲಾಭ | ಬಂಧ ನ | ನೃಪ ಕ್ರೋಧ | ಸುಖ | ಲಾಭ | ನಷ್ಟ | ದುಃಖ | ಧನಾ ಗಮ | ಅತಿ ಲಾಭ | ಮಹ ದುಃಖ |
| ಮಂಗಳ | ಮರಣ | ಭೇದ | ಸೌ ಭಾಗ್ಯ | ರಿಪು ಪೀಡ | ರಿಪು ಕ್ಷಯ | ಅರ್ಥ ಸಿದ್ಧಿ | ಅನರ್ಥ | ಶಸ್ತ್ರ ಬಾಧೆ | ಧನ ಕ್ಷಯ | ಮನಃ ಶೋಕ | ಧನ | ಕ್ರೂರ |
| ಬುಧ | ಬಂಧ ನಂ | ಹೇಮ ಲಾಭ | ರಿಪು ಪೀಡ | ರಿಪು ಕ್ಷಯ | ದಾರಿ ದ್ರ | ಭೂ ಷಣ | ಭೇದ | ಮನ ಶಿದ್ಧಿ | ಧನ ಕ್ಷಯ | ತೇಜ | ಮನೋ ರಥ | ಕ್ಲೇಶ |
| ಗುರು | ದೇಶ ತ್ಯಾಗ | ವಿತ್ತ ಲಾಭ | ಅನರ್ಥ | ವಿತ್ತ ನಾಶ | ಸಂಪ ತ್ತು | ಕ್ಲೇಶ | ಸದಾ ರೋಗ | ಧನ ಹಾನಿ | ಧನಾ ಗಮ | ಪ್ರಾಣ ಹಾನಿ | ಲಾಭ | ಸ್ಥಾನ ಭ್ರಷ್ಟ |
| ಶುಕ್ರ | ಆರೋ ಗ್ಯ | ಭೋಗ | ಸೌ ಭಾಗ್ಯ | ಅತಿ ಸೌಖ್ಯ | ಸುಭೋ ದಯ | ವಿತ್ತ ನಾಶ | ಮನ ಸ್ತಾಪ | ವಸ್ತ್ರ ಭಂಣ | ಭೂಷ ಣ | ಕ್ಷುದ್ ಭಯ | ಧನ | ದಾನ |
| ಶನಿ | ವಿಪ ತ್ತು | ಹಾನಿ | ಸಂಪ ತ್ತು | ಕುಕ್ಷಿ ರೋಗ | ಸುತ ಕ್ಷಯ | ಲಕ್ಷ್ಮಿ ಕರ | ಮಹ ದೈನ್ಯಂ | ಮರಣ | ದೇಹ ಶೋಷ | ಪೀಡ | ಲಾಭ | ನಷ್ಟ |
| ರಾಹು | ಭಯ | ಕಲಹ | ಸೌ ಭಾಗ್ಯ | ಮಾನ ಕ್ಷಯ | ಚಿತ್ತ ಭಂಗ | ಮಹ ತ್ಸುಖ | ನೃಪ ಭಯ | ಅರ್ಥ ಕ್ಷಯ | ಸಂತಾ ಪ | ಕಲಹ | ವಿತ್ತ ಅಧಿಕ | ಶೀಘ್ರ ವಿನಾಶ |
| ಕೇತು | ರೋಗ | ವೈರ | ಸುಖ | ಭಯ | ಸೌಖ್ಯ | ಧನ ಲಾಭ | ಗಮನ | ಪೀಡಾ | ಪಾಪ | ಶೋಕ | ಕೀರ್ತಿ | ಶುಭ |

## ಬೀಜ ಹರಳುಮಾಡುವದಕ್ಕೆ

ಅಶ್ವಿನಿರೋಹಿಣಿಹಸ್ತಾ ಮೂಲಸ್ವಾತಿಅನುರಾಧಯೋ |
ತ್ರಿಪೂರ್ವಶ್ರವಣಾಪೌಷ್ಯ ಬೀಜವತ್ತಾಳನಂ ಶುಭೇ ||

## ವಾರ ಫಲ

ಆದಿಸೋಮ ಮಹಾಶಿದ್ಧಿ ಭೌಮೆ ಸೌಮ್ಯೇಚ ರಕ್ತಯೋಃ |
ಗುರೋಭೃಗುಃ ಸಂಪದಶ್ಚ ಶನಿಚ ಬೀಜಹೃದ್ಗತಃ ||

## ಬೀಜ ಬಿತ್ತುವದಕ್ಕೆ

ಮೇಷಲಗ್ನಪಶುಹಂತಿ ಕರ್ಕಾಟಕಜಲ್ಮದಾಹನಂ |
ಸಿಂಹಸರ್ವವಿನಾಶಯಾ ತುಲಾಯಾಂ ಪ್ರಾಣಸಂಶಯು ||
ಮಕರೆ ಸಸಿನಾಶಾಯಾ ಕುಂಭೇ ಚೋರಭಯಾ ತಥಾ |
ವೃಷಭಕನ್ಯೆಂತಮೀನಾ ಮಥುನೆಧನುವೃಶ್ಚಿಕಾ |
ಯೇತಾನಿ ಕೃಸ್ಯ ಲಗ್ನಾನಿ ಅನ್ನಲಗ್ನ ಪಂತೆಜಲೆ ||

---

# ೬೦ ವರ್ಷಗಳ ಭವಿಷ್ಯವು

## ಉತ್ತಮ ಬೀತಿಕೆಯ ಸಂವತ್ಸರಗಳು

## ೧ ಪ್ರಭವಸಂವತ್ಸರ ಫಲ

ಕಾರಮಳೆಯಾಗುವದು, ಸಕಲ ಧಾನ್ಯಂಗಳು ಸಮಧಾರಣೆಯಿಂದ ಮಾರುವದು, ಸಕಲ ಪ್ರಜೆಗಳು ಸುಖದಿಂದ ಬಾಳ್ವರು, ಸೂರ್ಯಗ್ರಹಣ ವಾಗುವದು. ಉದ್ದು, ಗೋದಿ, ಕಡ್ಲಿ, ಹತ್ತಿ, ಅರಳಿ, ಅಡಕಿ, ಮೆಣಸು ಇವೆಲ್ಲವೂ ನಾಲ್ಕುತಿಂಗಳಮೇಲೆ ಮಾರಾಟವಾಗುತ್ತವೆ.

# ೨ ವಿಭವಸಂವತ್ಸರ ಫಲ

ಆಷಾಢದಲ್ಲಿ ಮಳೆಯಿಲ್ಲವು. ಧಾನ್ಯ ಪ್ರಿಯವೆನಿಸುವದು. ಶ್ರಾವಣದಲ್ಲಿ ಮಹಾ ಮಳೆಯು. ಭೂಮಿಯು ದಣಿಸಿ ಕಂಪಿಸುವದು. ಭಾದ್ರಪದಮಾಸದಲ್ಲಿ ಮಳೆಯಾಗಿ ಸಕಲ ವಿದುಳ ಧಾನ್ಯಂಗಳು ಬಹಳ. ಜೋಳದ ಬೆಳೆಯು ಮಹಾ ಫಲವು ಆಶ್ವಿಜಮಾಸದಲ್ಲಿ ಸಮುವರ್ಣ ನಾಶನಂ. ಕಾರ್ತಿಕ, ಮಾರ್ಗಶಿರ, ಪುಷ್ಯದಲ್ಲಿ ದುರ್ಭಿಕ್ಷವು. ಸಂಕರಾತ್ರಿ ರಸಬಾಡು ಮಾರುವದು, ಮಧ್ಯ ಆಗ ಜಯವು. ಆಶ್ವಿಜದಲ್ಲಿ ಅರಸುಗಳಿಗೆ ದರಿದ್ರತ್ವವು, ಪಶುಗಳಿಗೆ ರೋಗವು. ಫಾಲ್ಗುಣದಲ್ಲಿ ಅರಸುಗಳಿಗೆ ಪ್ರೀಯವು. ಚೈತ್ರ, ವೈಶಾಖ, ಜ್ಯೇಷ್ಠದಲ್ಲಿ ಯಥಾಸ್ಥಿತಿ ಮಳೆಗಾಲವು ಮತ್ತು ಧಾನ್ಯಂಗಳು ಒಂದೇ ಪ್ರಕಾರ ಆದಾವು.

# ೩ ಶುಕ್ಲಸಂವತ್ಸರ ಫಲ

ಆಷಾಢದಲ್ಲಿ ಶುಭಿಕ್ಷವು, ಮಳೆ ಬಹಳ. ಶ್ರಾವಣದಲ್ಲಿ ವಾಯು ಪ್ರಬಲವು. ನೆಲ್ಲು ಸಣ್ಣ ಧಾನ್ಯಂಗಳು ಬೆಳೆಯುವವು. ಪಶುಗಳು ಒಂದೂ ಉಳಿಯವು. ಅಜಪ್ರಿಯಾ, ಸೀಚರಿಗೆ ಪ್ರಿಯಾ ಪ್ರಭುತನವು. ಸಕ್ಕರಿ, ಅಡಕಿ, ಸುಭಿಕ್ಷ. ಭಾದ್ರಪದಮಾಸದಲ್ಲಿ ಅರ್ಧಪಕ್ಷ ಸುಭಿಕ್ಷ, ಮಳೆ ಬಹಳವಾಗುವದು. ಕಾರ್ತಿಕಮಾಸದಲ್ಲಿ ಸುಭಿಕ್ಷವು. ಮಾರ್ಗಶಿರಮಾಸದಲ್ಲಿ ಜೋಳದ ಬೆಳೆಯು ಸ್ವಲ್ಪ ಬರುವದು. ಪುಷ್ಯಮಾಸದಲ್ಲಿ ಸುಭಿಕ್ಷವು ರಾಜ್ಯಕ್ಕೆ ಉಂಟು. ಮಾಘ, ಫಾಲ್ಗುಣ, ಚೈತ್ರ ಈ ಮೂರು ತಿಂಗಳು ಸರ್ವ ಜನಗಳಿಗೆ ಪೀಡಾ, ಧಾನ್ಯಪ್ರಿಯವು. ವೈಶಾಖ, ಜ್ಯೇಷ್ಠದಲ್ಲಿ ನಾಗರಸೀಮೆ, ತೆಲಗುಸೀಮೆ, ಮರಾಠದೇಶಕ್ಕೆ, ಸೇತು, ರಾಮೇಶ್ವರ, ಮಲಾಪಹಾರಿ ಇಂತಿಷ್ಟು ದೇಶದಲ್ಲಿ ಸುಭಿಕ್ಷವಾಗುವದು. ರಾಜಭಯವು ಬಹಳವಾಗುವದು. ಉಳಿದ ರಾಜ್ಯಕ್ಕೆ ಸುಭಿಕ್ಷವು.

# ೪ ಪ್ರಮೋದತೂಸಂವತ್ಸರ ಫಲ

ಆಷಾಢದಲ್ಲಿ ಮಹಾ ಮೇಘವು. ಜನಗಳಿಗೆ ಸುಖವು. ಲೀಲಾದಿಂದ ಭೂಮಿ ಬೆಳೆವ್ರದು. ಲೋಕ ಐಶ್ವರ್ಯವಾಹುದು. ಶ್ರಾವಣದಲ್ಲಿ ಮಳೆಯು ಮೂಡಲು, ಪಡವಲು ಘಾಳಿಯು, ಟೆಂಕಲದಿಕ್ಕಿನಲ್ಲಿ ಮಳೆಯು ಬಹಳ ವಾಗುತ್ತದೆ, ಬೆಳೆಯು ಸಾಮಾನ್ಯವು. ಭಾದ್ರಪದಮಾಸದಲ್ಲಿ ಸುಭಿಕ್ಷವು. ಒಂದನೇಭಾಗದಲ್ಲಿ ಮರಣ, ಅದರ ಮುಂದೆ ಮಳೆ. ಆಶ್ವಿಜಮಾಸದಲ್ಲಿ ಸುಭಿಕ್ಷವು. ಕುದರಿಗೆ ರೋಗ, ರಸವರ್ಗ ಪ್ರಿಯವು. ಕಾರ್ತಿಕಮಾಸ ದಲ್ಲಿ ಹತ್ತಿ ಹೊದಕಿಗಳು ಪ್ರೀಯವು, ಸಾಗರಪರಿಯಂತರದಲ್ಲೂ ಸೈತ್ಯಾಣ ಯೆಂಬೋ ವ್ಯಾಧಿಯಾದೀತು. ಪುಷ್ಯಮಾಸದಲ್ಲಿ ಮಹಾ ಮಳೆ. ಮಾಘ ಮಾಸದಲ್ಲಿ ಸಮ ಫಲವು. ಫಾಲ್ಗುಣಮಾಸದಲ್ಲಿ ಅರಸುಗಳಿಗೆ ಪೀಡೆಯು. ಅರಸುಗಳು ಮುಂತಾಗಿ ಧಾನ್ಯಕೊಂಡು ಇಡುವದು. ಪಿಂಗಳದೇಶಕ್ಕೆ ಬರ ಬೀಳುವದು. ಚೈತ್ರಮಾಸದಲ್ಲಿ ಧಾನ್ಯ ಮಧ್ಯಸ್ತವಾಗುವದು, ಹೇಮಂ ಪಾತಾಳ ಮುಂತಾದ ಹೊದಕಿಯು ಇವೆಲ್ಲಾ ಪ್ರಿಯವೆನಿಸುವದು, ಸಾಗರ ಪುರದ ಕಡೆಯಲ್ಲಿ ಲೋಕವು ಲೀಲೆಯಿಂದ ಇರುವದು. ವೈಶಾಖ, ಜ್ಯೇಷ್ಠ ಮಾಸದಲ್ಲಿ ಉತ್ತರ ಮುಖಕ್ಕೆ ಮಾರಾಟವಾಗುವದು. ಮಿಕ್ಕದೇಶದಲ್ಲಿ ಸುಖಿಯಾಗಿರುವರು. ಮಹೇಂದ್ರಸೀಮೆ, ಮಲಾಪಹಾರಿ ನಡುವೆ ಇವೆಲ್ಲ ಸುಖಿಯಾಗಿ ಇರುವದು.

# ೫ ಪ್ರಜೋತ್ಪತ್ತಿಸಂವತ್ಸರ ಫಲ

ಆಷಾಢದಲ್ಲಿ ಮಳೆ ಪ್ರಬಲ, ಸುಭಿಕ್ಷ ಶ್ರಾವಣದಲ್ಲಿ ಹೊಳಿ ಮೇರಿ ದಪ್ಪಿ ಬಂದಾವು, ಸ್ತ್ರೀ-ಪುರುಷರು ತಮ್ಮೊಳಗೆ ತಾವೇ ಸುಖದಲ್ಲಿ ಇದ್ದಾರು. ಧಾನ್ಯ ದವಸ ಚೆನ್ನಾಗಿ ಆದೀತು. ಭಾದ್ರಪದ ಆಶ್ವಿಜ ಈ ಎರಡು ತಿಂಗಳ ಫಲ ಮಂದವಾಗಿ ಧಾನ್ಯ ಮಂದವಾಗುವದು, ಜೋಳದ ಬೆಳೆಯಾದೀತು, ಮಹಸುಖವಾದೀತು, ಆನಂದವಾದೀತು. ಕಾರ್ತಿಕ. ಮಾರ್ಗಶಿರ, ಪುಷ್ಯ ಮಾಸದಲ್ಲಿ ಪರಚಕ್ರವರ್ತಿಯ ಭಯವು, ನರ್ಮದಾತಟಾಕದಲ್ಲಿ ಓಡಿದೇಶ,

ಮಘದದೇಶ, ವಿಲಾಯತಿ ಇಷ್ಟಕ್ಕೆ ಮಾಘಮಾಸದಲ್ಲಿ ಭಯವು, ಮಿಕ್ಕದೇಶಗಳೆಲ್ಲ ಮಳೆ-ಬೆಳೆ ಚೆನ್ನಾಗಿ ಆಗಿ ಸುಖದಲ್ಲಿ ಇರುವರು. ಫಾಲ್ಗುಣಮಾಸದಲ್ಲಿ ಕಾಶ್ಮೀರದೇಶದಲ್ಲಿ ಸುಖವುಂಟು. ಚೈತ್ರ, ವೈಶಾಖದಲ್ಲಿ ರಸವರ್ಗವು ಮಂದವಾಗುವದು. ಜ್ಯೇಷ್ಠಮಾಸಕ್ಕೆ ಕೊಡಿಯಾಲದೇಶಕ್ಕೆ ಧಾನ್ಯಪ್ರೀಯವಾಗುವದು.

## ೬ ಆಂಗಿರಸಸಂವತ್ಸರ ಫಲ

ಆಷಾಢದಲ್ಲಿ ಮಹಾ ಮಳೆ, ಈ ತಿಂಗಳು ಧಾನ್ಯ ಪ್ರೀಯವು ಶ್ರಾವಣದಲ್ಲಿ ಬೆಳಸು ಬಹಳ, ಎಳ್ಳು ಮುಂತಾದ ಸುಧಾನ್ಯ ಬೆಳಸು ಅಲ್ಪಂ. ಭಾದ್ರಪದಮಾಸದಲ್ಲಿ ಮನುಷ್ಯರಿಗೆ ಪೀಡೆಯು, ಸಮಸ್ತವು ಪ್ರೀಯವು. ಆಶ್ವಿಜಮಾಸದಲ್ಲಿ ಹತ್ತಿ, ಅಗಸಿ ಉತ್ಕೃಷ್ಟವಾದಾವು, ಜೋಳ ವಿದುಳ ಧಾನ್ಯಂಗಳು ಪ್ರೀಯವು; ಅರಸುಗಳು ಲಯಾ. ಕಾರ್ತಿಕ, ಮಾರ್ಗಶಿರ ಮಾಸದಲ್ಲಿ ಮಳೆಯು ಕಂಡಲಮಂಡಲಾ. ಪುಷ್ಯಮಾಸದಲ್ಲಿ ಮಹಾ ತಾಪವು, ಧಾನ್ಯ ಪ್ರೀಯವು, ಅರಷ್ಣುಗಳು ಮುಂತಾಗಿ ಧಾನ್ಯಂಗಳನ್ನು ಪಕ್ಕಲಮಕ್ಕಳ ಕೈಲೆ ಇಸಕೊಂಬುವರು. ಮಾಘಮಾಸದಲ್ಲಿ ಮಳೆಯು ಆದೀತು, ಲೋಕದೊಳಗೆ ಅಲ್ಲಿಗಲ್ಲಿಗೆ ಭಯವು ಏಳುವದು. ಫಾಲ್ಗುಣ ಮಾಸದಲ್ಲಿ ಮನುಷ್ಯರಿಗೆ ರೋಗವು. ಚೈತ್ರ, ವೈಶಾಖದಲ್ಲಿ ನಿರೋಧಕ್ಕೆ ಪ್ರಾರಂಭವಿತಿ ನಿಶ್ಚಯ. ಜ್ಯೇಷ್ಠಮಾಸದಲ್ಲಿ ಉತ್ತರಕ್ಕೆ ಶುಭವು.

## ೭ ಶ್ರೀಮುಖಸಂವತ್ಸರ ಫಲ

ಆಷಾಢದಲ್ಲಿ ಮಹಾ ಮಳೆ. ಶ್ರಾವಣದಲ್ಲಿ ಮಹಾ ಮಳೆ, ಮಹ-ರಾಷ್ಟ್ರದೇಶಕ್ಕೆ ಭಂಗವಾಹದು, ಸಾಳಿಯ ಬೆಳಸು ಪ್ರಬಲ ಭಾದ್ರಪದ ಮಾಸದಲ್ಲಿ ಮಳೆ ಬಹಳ; ಜೋಳದಬೆಳೆ, ವಿದುಳಧಾನ್ಯಬೆಳೆ. ಆಶ್ವೀಜ ಮಾಸದೊಳಗೆ ಮುತ್ತಿನ ಬೆಳಸು ಬಹಳ. ಕಾರ್ತಿಕಮಾಸದಲ್ಲಿ ಅನ್ನ ಸುಭಿಕ್ಷ, ಧಾನ್ಯ ಪ್ರೀಯವು. ಮಾರ್ಗಶಿರ, ಪುಷ್ಯಮಾಸದಲ್ಲಿ ಭಯವು,

ಗುರ್ಜ್ಜರದೇಶಕ್ಕೆ ಭಯವು. ಮಾಘ, ಫಾಲ್ಗುಣದಲ್ಲಿ ಭಂಗದೆಂದು ಹೇಳು ವದು. ಚೈತ್ರ, ವೈಶಾಖದಲ್ಲಿ ಸಮಸ್ತವು ಕೂತಾವು. ಜ್ಯೇಷ್ಠದಲ್ಲಿ ದುರ್ಬಲ ಪ್ರಜಗಳಿಗೆ ಶೋಕವು; ಸುವರ್ಣ, ರಸಂಗಳು ಸುಖವು.

## ೮ ಭಾವಸಂತ್ಸರದ ಫಲ

ಆಷಾಢದಲ್ಲಿ ಮಳೆಯಿಲ್ಲವು, ಧಾನ್ಯಪ್ರೀಯವು. ಶ್ರಾವಣದಲ್ಲಿ ಕಂಡಲಮಂಡಲ, ಮಳೆ ಫೌಳಿ ಅಲ್ಪಂ, ಸಾವಿ, ಎಳ್ಳು ಬೆಳಸು ಆದೀತು; ಜೋಳದ ಬೆಳೆ ಸ್ವಲ್ಪ. ಭಾದ್ರಪದಮಾಸದಲ್ಲಿ ಮಳೆ ಮಿಂಚೀತು. ಆಶ್ವಿಜ ಮಾಸಕ್ಕೆ ಸುಭಿಕ್ಷವು. ಕಾರ್ತಿಕ, ಮಾರ್ಗಶಿರಮಾಸದಲ್ಲಿ ಮೇವಾಡದೇಶಕ್ಕೆ ಸುಭಿಕ್ಷ ಪುಷ್ಯಮಾಸದಲ್ಲಿ ಬಹಳ ತುಟ್ಟಿ ಧಾರಣೆಯು. ಮಾಘಮಾಸ ದಲ್ಲಿ ಪ್ರಜಗಳಿಗೆ ಸುಖವಿಲ್ಲವು; ಸ್ಥಿರಯಿಲ್ಲವು. ಫಾಲ್ಗುಣಮಾಸದಲ್ಲಿ ಸಾಮಾನ್ಯವು. ಪಡವಲದೇಶಕ್ಕೆ ಸೈತ್ಯದ ಉಪದ್ರವು, ಸಾಗರ ಪರಿ ಯಂತರವು. ಚೈತ್ರಮಾಸದಲ್ಲಿ ಪರ್ವತದಕಡಿಗೆ ಜಯವಿಲ್ಲ. ವೈಶಾಖ ಮಾಸದಲ್ಲಿ ಪಂಚನಗರದೇಶ ವಿನಾಶವಾದೀತು. ಜ್ಯೇಷ್ಠಮಾಸದಲ್ಲಿ ದುರ್ಭಿಕ್ಷವು; ಅರಸುಗಳು ಮುಂತಾಗಿ ಹೊಟ್ಟೆಗಿಲ್ಲದೆ ದುಃಖಬಡುವರು. ಚಿನ್ನಕ್ಕೆ ಸರಿಯಾಗಿ ಧಾನ್ಯಮಾರುವದು; ಎಚ್ಚತ್ತಿಹದು.

## ೯ ಯುವಸಂವತ್ಸರ ಫಲ

ಶುಕ್ರಸ್ವಾಮಿ, ಆಷಾಢದಲ್ಲಿ ಮಹಾ ಮೇಘ. ಶ್ರಾವಣದಲ್ಲಿ ಮಳೆ ಬೆಳೆ ಕಂಡಲಮಂಡಲ. ಭಾದ್ರಪದಮಾಸದಲ್ಲಿ ನೆಲ್ಲಿಗೆ ರೋಗವು, ಮನು ಷ್ಯರಿಗೆ ದನಗಳಿಗೆ ರೋಗವು. ಆಶ್ವಿಜಮಾಸದಲ್ಲಿ ಮಹಾ ಸೈತ್ಯ, ಸೀತವು. ಕಾರ್ತಿಕಮಾಸದಲ್ಲಿ ಸುಭಿಕ್ಷ, ಮನುಷ್ಯರಿಗೆ ಸಂತೋಷವು. ಮಾರ್ಗಶಿರ ಮಾಸದಲ್ಲಿ ರಾಜಭಯವು. ಪುಷ್ಯಮಾಸದಲ್ಲಿ ಮಳೆಯಾದೀತು. ಮಾಘ ಮಾಸದಲ್ಲಿ ಮಹಾ ಮಳೆ. ಫಾಲ್ಗುಣದಲ್ಲಿ ಕುರುಕ್ಷೇತ್ರದಲ್ಲಿ ಬೊಟ್ಟದೇಶಕ್ಕೆ ಬರನು. ಚೈತ್ರಮಾಸದಲ್ಲಿ ಲಲಾಟದೇಶಕ್ಕೆ ಬರನು. ವೈಶಾಖಮಾಸದಲ್ಲಿ ಅರಸುಗಳ ಭಯವು; ಮುನಿಪಟ್ಟಣಕೆ ಅರೆದೇಶಕ್ಕೆ ಬರನು.

# ೧೦ ಧಾತುಸಂವತ್ಸರ ಫಲ

ಆಷಾಢದಲ್ಲಿ ಮಹಾ ಮೇಘ, ಮಳೆ ಕಂಡಲಮಂಡಲ. ಶ್ರಾವಣದಲ್ಲಿ ಮಳೆಯು ಆಗುವದು, ಅರಸುಗಳು ಧರ್ಮವುಳ್ಳವರು ಚಿತ್ತವುಳ್ಳವರಾದರು, ಸಮಸ್ತಧಾನ್ಯ ಬೆಳದಾವು. ಭಾದ್ರಪದದಲ್ಲಿ ಸಮಫಲವು. ಆಶ್ವಿಜ, ಕಾರ್ತಿಕದಲ್ಲಿ ಘಾಳಿ ಬೀಸೀತು. ಮಾರ್ಗಶಿರ, ಪುಷ್ಯದಲ್ಲಿ ಮನುಷ್ಯರಿಗೆ ರೋಗದ ಸೂಚನೆ; ಹಲ್ಲಸೂಲಿ, ತಲೆಬೇನೆ. ಎಳ್ಳು, ಮಂಜಿಷ್ಟ ಪ್ರೀಯವು; ಎಣ್ಣಿ ಪ್ರೀಯವು. ಮಾಘಮಾಸದಲ್ಲಿ ಒಂದಣ ಪ್ರಮಾಣವು. ಫಾಲ್ಗುಣಮಾಸದಲ್ಲಿ ನಿಲಂಚದೇಶ ಹಾಳಾದೀತು; ಅನುಮಿಕನಾಡಿಗೆ ಸುಭಿಕ್ಷ. ಚೈತ್ರ, ವೈಶಾಖದಲ್ಲಿ ರಾಜಕಾರ್ಯವಾದೀತು. ಜ್ಯೇಷ್ಠಮಾಸದಲ್ಲಿ ಧಾರಣೆಯು.

# ೧೧ ಈಶ್ವರಸಂವತ್ಸರ ಫಲ

ರಾಹು ಸ್ವಾಮಿ, ಆಷಾಢಮಾಸದಲ್ಲಿ ಮಹಾ ಮಳೆ, ಸಾಳಿ ಬೆಳಸು ಚಿನ್ನಾಗಿ ಬೆಳೆದಾವು. ಶ್ರಾವಣದಲ್ಲಿ ಕಂಡಲಮಂಡಲ ಬೆಳೆಯು, ಮಳೆಯು, ಭಾದ್ರಪದದಲ್ಲಿ ಮಹಾ ಮೇಘ. ಮಾರ್ಗಶಿರಮಾಸದಲ್ಲಿ ಮನುಷ್ಯರಿಗೆ ಜಯವು ಪುಷ್ಯಮಾಸದಲ್ಲಿ ಮಳೆ ಗರ್ಭವು; ಕೆರೆ, ಭಾವಿ, ನದಿ ನೀರಿನಿಂದ ತುಂಬುವವು. ಮಾಘ, ಫಾಲ್ಗುಣದಲ್ಲಿ ಚೋರಭಯವು ಚೈತ್ರದಲ್ಲಿ ಸುಭಿಕ್ಷ. ವೈಶಾಖದಲ್ಲಿ ಬಾಳಿದೇಶಕ್ಕೆ, ನರಬಂದದೇಶಕೆ ಭಂಗ. ಜ್ಯೇಷ್ಠ ಮಾಸದಲ್ಲಿ ಮಾಳವದೇಶಕ್ಕೆ ಭಂಗ; ಮುಂದೆ ಗೋವರ್ಧನಗಿರಿನಾಡು ಭಂಗವು; ವಿಜಾತಿಪುರಸೀಮೆ ಹಾಳಕ್ಕುಂ.

# ೧೨ ಬಹುಧಾನ್ಯಸಂವತ್ಸರ ಪಲ

ಕೇತು ಸ್ವಾಮಿ, ಆಷಾಢದಲ್ಲಿ ಮಹಾ ಮಳೆ, ಸಾಮಾನ್ಯ ಧಾರಣಿ ಆದೀತು, ಸುಭಿಕ್ಷ ಶ್ರಾವಣದಲ್ಲ ಮನುಷ್ಯರಿಗೆ ಪೀಡಾಕಾರವು; ಆನೆ, ಕುದುರೆಗೆ ವ್ಯಾಧಿಬರುವದು. ಭಾದ್ರಪದಮಾಸದಲ್ಲಿ ಮಳೆ ಸಾಮಾನ್ಯವಾಗು

ವದು; ಧಾರಣೆ ಸಾಮಾನ್ಯವಾದೀತು; ಮಳೆ ಬಹಳವಾಗುವದು; ಸಣ್ಣ ಧಾನ್ಯ ಬೆಳೆಸು ಸಾಮಾನ್ಯ; ಬಿದುಳಧಾನ್ಯ ಬೆಳೆಸಾಗುವದು. ಅಶ್ವಿಜ ಮಾಸದಲ್ಲಿ ಬರನಾಗಿ ಬೆಳೆಸು, ಅಲ್ಪವು ಕಂಡಲಮಂಡಲವು, ಧಾರಣೆ ಸುಭಿಕ್ಷವು; ಗೋದಿ ಬೆಳೆಸು ಚೆನ್ನಾಗಿ ಆದೀತು. ಕಾರ್ತಿಕಮಾಸದಲ್ಲಿ ಮನುಷ್ಯರಿಗೆ ವ್ಯಾಧಿ ತೊಡಕುವದು. ಮಾರ್ಗಶಿರದಲ್ಲಿ ಸುಭಿಕ್ಷ. ಮಾಘ ಮಾಸದಲ್ಲಿ ಮಹಾರಾಷ್ಟ್ರದೇಶದಲ್ಲಿ ನೃಪತಿಗಳಿಗೆ ಕೇಡು. ಫಾಲ್ಗುಣ, ಚೈತ್ರ, ವೈಶಾಖ ಈ ಮೂರು ಮಾಸಗಳಲ್ಲಿ ಉತ್ಸಹವಾಗುವದು; ಸೇತು ಬಂದ ಭೀಮರತಿಯಲ್ಲಿ ರಣಮಂಡಲವಾದೀತು; ಅರಸುಗಳಿಗೆ ಮರಣ. ಜ್ಯೇಷ್ಠಮಾಸದಲ್ಲಿ ಸಮಾಧಾನವಾದೀತು.

## ೧೩ ಪ್ರಮಾಥಿಸಂವತ್ಸರ ಫಲ

ರಾಹು ಸ್ವಾಮಿ, ಆಷಾಢಮಾಸದಲ್ಲಿ ಮಳೆಯಾದೀತು, ಸುಭಿಕ್ಷ ಉಂಟು. ಶ್ರಾವಣದಲ್ಲಿ ದಿನದಿನಕ್ಕೆ ವರ್ಷದತನಕಾ ಸುಭಿಕ್ಷವುಂಟು. ಜಂಬೂದ್ವೀಪಾಂತರದ ಘಟ್ಟಕ್ಕೆ ಮಳೆಯುಂಟು. ಭಾದ್ರಪದಮಾಸದಲ್ಲಿ ಜೋಳ ವಿದುಳಧಾನ್ಯಕ್ಕೆ ರೋಗವಾಗುವದು ಪಶ್ಚಿಮದೇಶಕ್ಕೆ ಘನು ವ್ಯಾಧಿ; ಗೋದಿ, ಕಡ್ಲಿ ಬೆಳೆಸು ಆದಾವು. ಆಶ್ವಿಜಮಾಸದಲ್ಲಿ ಮಳೆ-ಬೆಳೆ ಆದೀತು. ಕಾರ್ತಿಕದಲ್ಲ ಧಾನ್ಯ ಸಾಮಾನ್ಯ ಸುಭಿಕ್ಷ. ಮಾರ್ಗಶಿರ, ಪುಷ್ಯದಲ್ಲಿ ಮಳೆ-ಬೆಳೆ ಆದೀತು; ಬೆಳ್ಳಿ-ಭಂಗಾರ ಲೋಕಕ್ಕೆ ಶಾಂತಿ ಯಾದೀತು. ಮಾಘಮಾಸದಲ್ಲಿ ಮಳೆಗರ್ಭವು ಮಳೆ ಆದೀತು; ಕ್ಷತ್ರಿಯರಿಗೆ ಕುಡಕರಿಗೆ ಕೇಡು. ಚೈತ್ರದಲ್ಲಿಯೂ ರೋಗ ಪ್ರವರ್ತಿಸೀತು. ವೈಶಾಖ ದಲ್ಲಿ ಧಾನ್ಯಸಂಗ್ರಹ ಮಾಡುವದು; ಮೇದಿನಿಗೆ ಶನಿ ಭೇದ, ಉರಜಿಕಾ, ದೈವಕಾ ದುರ್ಭಿಕ್ಷ ವಿನಿತುಂಟು. ಜ್ಯೇಷ್ಠಮಾಸದಲ್ಲಿ ಸುಕಲಯ ಚಕ್ರವು.

## ೧೪ ವಿಕ್ರಮಸಂವತ್ಸರ ಫಲ

ಚಂದ್ರ ಸ್ವಾಮಿ, ಆಷಾಢಮಾಸದಲ್ಲಿ ಕೃಷ್ಣ ಸಪ್ತಮಿ ದಿನ ಮತ್ತು ಏಕಾದಶಿ ದಿನ ಮಳೆ ಬಹಳವಾದೀತು, ದಯ ಪ್ರಬಲವಾದೀತು, ಕಳವೆ

ತಿಲ, ವಶ ಬೆಳೆ ಆದೀತು. ಶ್ರಾವಣದಲ್ಲಿ ಮಳೆಯುಂಟು. ಭಾದ್ರಪದದಲ್ಲಿ ಅಲ್ಲಿಗಲ್ಲಿಗೆ ಬೆಳಸು ಮಂದ. ಆಶ್ವಿಜಮಾಸದಲ್ಲಿ ಮಹಾ ಘಾಳಿಯಾಗಿ ಮಳೆ ಆದೀತು, ರಾಜ್ಯದೊಳಗೆ ಬೇಡರ ಹಾವಳಿ, ಬೇಡರದೇಶವು ನಾಶವು, ಪರವರ ದೇಶ ವಿನಾಶವು. ಕಾರ್ತಿಕ, ಮಾರ್ಗಶಿರಮಾಸಲ್ಲಿ ಕಡ್ಲಿ, ಗೋದಿ ಪ್ರೀಯ ಮಾದೀತು. ಪುಷ್ಯಮಾಸದಲ್ಲಿ ಗವಳದೇಶಕ್ಕೆ ತುರುಕರಹಾವಳಿಯಾದೀತು. ಮಾಘ, ಫಾಲ್ಗುಣದಲ್ಲಿ ಮಳೆಗರ್ಭ ಉದಯವಾದಾವು, ಬೆಳೆ ಹುಳುಕು ಬಿದ್ದೀತು. ಚೈತ್ರದಲ್ಲಿ ಧಾನ್ಯಪ್ರೀಯವು. ವೈಶಾಖ, ಜ್ಯೇಷ್ಠದಲ್ಲಿ ಸುಭಿಕ್ಷ ಮುಕ್ಕುಂ ಮಹಾಫಲವು.

# ೧೫ ವಿಷುಸಂವತ್ಸರ ಫಲ

ಮಂಗಳ ಸ್ವಾಮಿ; ಆಷಾಢ, ಶ್ರಾವಣದಲ್ಲಿ ಮಳೆ ಸುಭಿಕ್ಷ ಭಾದ್ರಪದ ಮಾಸದಲ್ಲಿ ಸುಭಿಕ್ಷ, ಧನ-ಧಾನ್ಯಂಗಳಿಗೆ ರೋಗ. ಆಶ್ವಿಜಮಾಸದಲ್ಲಿ ಇರುಳು-ಹಗಲು ಬಿಡದೆ ಮಳೆ ಹತ್ತುವದು, ಸಿಡಲು ಮಿಂಚು ಬಹಳ. ಕಾರ್ತಿಕಮಾಸದಲ್ಲಿ ಧಾನ್ಯಪ್ರೀಯಾ; ತುಪ್ಪ, ಎಣ್ಣಿ, ಮಂಜಿಷ್ಟ ಪ್ರೀಯಾ; ಸಕ್ಕರಿ ಪ್ರೀಯಾ. ಮಾರ್ಗಶಿರದಲ್ಲಿ ಮಳೆ ನಾಸ್ತಿ, ಫಲ ಸಾಮಾನ್ಯ. ಮಾಘ, ಪುಷ್ಯ, ಫಾಲ್ಗುಣದಲ್ಲಿ ಲೋಕಕ್ಕೆಲ್ಲ ಪರವುಪಕಾರ, ಧರ್ಮಚಿಂತಿ ಹಿಡಿವರು, ಅದು ಪ್ರವರ್ತಿಸಿತು. ಚೈತ್ರ, ವೈಶಾಖದಲ್ಲಿ ಮುಂಡೋಧರದುರಗ ದಿಂದ ತುರಕರ ಪಟ್ಟಣಕ್ಕೆ ರಾಜಿಕ ಉಂಟು; ಕಾಳಿಂಗದೇಶ ಹಾಳಾದೀತು. ಜ್ಯೇಷ್ಠಮಾಸದಲ್ಲಿ ದುರ್ಭಿಕ್ಷ, ಮಳೆಯಿಲ್ಲವು.

# ೧೬ ಚಿತ್ರಭಾನುಸಂವತ್ಸರ ಫಲ

ಬುಧ ಸ್ವಾಮಿ; ಆಷಾಢದಲ್ಲಿ ಮಾತು ಯೋಗ್ಯಂ. ಗುಜ್ಜರದೇಶದಲ್ಲಿ ಚಿತ್ರಭಂಗ ಇಲ್ಲದೆ ಸಮಸ್ತ ಧಾನ್ಯ ಪ್ರೀಯಾ. ಶ್ರಾವಣದಲ್ಲಿ ಮಳೆಯು ಆದೀತು. ಭಾದ್ರಪದದಲ್ಲಿ ಯಥಾಯೋಗ್ಯವು: ಗೋದಿ, ಕಡ್ಲಿ ಬೆಳೆ ಆದೀತು. ಮಾಳವದೇಶಕ್ಕೆ ಚಿತ್ರಕೂಟಭಯ ಉಂಟು. ತುರಕರಿಗೆ,

ಅರಸರಿಗೆ, ಕುದುರೆಗೆ ರೋಗವುಂಟು. ಆಶ್ವಿಜ, ಕಾರ್ತಿಕ, ಮಾರ್ಗಶಿರ ಈ ಮೂರು ತಿಂಗಳ ಧಾನ್ಯ ಹೆಚ್ಚೀತು. ಪುಷ್ಯಮಾಸದಲ್ಲಿ ಸುಭಿಕ್ಷವು. ನೈಋತ್ಯ ಘಾಳಿ ಬೀಸೀತು. ಮಾಘಮಾಸದಲ್ಲಿ ಸುಕಾಲವು. ಫಾಲ್ಗುಣ ಮಾಸದಲ್ಲಿ ನರ್ಮದಾತೀರದಲ್ಲಿ ಸುಭಿಕ್ಷವುಂಟು. ಚೈತ್ರದಲ್ಲಿ ರಸವರ್ಗ ಪ್ರೀಯವು. ಮನುಷ್ಯರಿಗೆ ರೋಗವು. ವೈಶಾಖಮಾಸದಲ್ಲಿ ಉಪದ್ರವಾದೀತು. ಜ್ಯೇಷ್ಠಮಾಸಕ್ಕೆಲ್ಲ ಲೇಸುಂಟು.

## ೧೭ ಸುಭಾನುಸಂವತ್ಸರ ಫಲ

ಗುರು ಸ್ವಾಮಿ; ಕಾಲಪ್ರವರ್ತಿ ಮುನಂಗಳು ಪ್ರವರ್ತಿಸಿಹವು ರಾಜಕ ದೈವಕ ಬಹಳವಾದೀತು. ಪೂರ್ವ–ಪಶ್ಚಿಮದೇಶ ಹಾಳಾದೀತು. ಆಷಾಢ ಶುಕ್ಲಪಕ್ಷದಲ್ಲಿ ಮಳೆ ಆದೀತು, ನೆಲವೆಲ್ಲ ಉಕ್ಕಿ ಹರವದು. ಶ್ರಾವಣ ಮಾಸದಲ್ಲಿ ಮಳೆ ಅನೇಕ ಕಡೆಯಲ್ಲಿ ಒಳಿತಾಗಿ ಆದೀತು. ಭಾದ್ರಪದಮಾಸ ದಲ್ಲಿ ಮಳೆ ಮಧ್ಯಮವು, ಧಾನ್ಯಪ್ರೀಯವು, ಬೆಳೆಗೆ ವಿಘ್ನವು, ಮಧ್ಯ ದೇಶದಲ್ಲಿ ಬೆಳೆ ಸುಭಿಕ್ಷವು. ಆಶ್ವಿಜಮಾಸದಲ್ಲಿ ಮಹಾ ಮೇಘ, ಮೇರು ಮಂದಿರತನಕ ಸುಭಿಕ್ಷವು. ಕಾರ್ತಿಕದಲ್ಲಿ ಕಾಶ್ಮೀರದೇಶದಲ್ಲಿ ಬ್ಯಾಡರಿಂದ, ತುರಕರಿಂದ ತಮ್ಮೊಳು ತಾವೇ ಹೊಡೆದಾಡುವರು. ಮಾರ್ಗಶಿರ, ಪುಷ್ಯ ದಲ್ಲಿ ಮಳೆಯಾಗಿ ಎಲ್ಲಾ ಸುಭಿಕ್ಷವು. ಮಾಘ, ಫಾಲ್ಗುಣ, ಚೈತ್ರ, ವೈಶಾಖಮಾಸಗಳಲ್ಲಿ ಮಳೆ ಗರ್ಭವು ಕೆಟ್ಟೀತು. ಮುಂದಣ ವರುಷಕ್ಕೆ ಮಳೆ ಸಾಮಾನ್ಯವು, ಛಳಿ ಇಲ್ಲವು. ಜ್ಯೇಷ್ಠದಲ್ಲಿ ಸಾಮಾನ್ಯವು.

## ೧೮ ತಾರಣಸಂವತ್ಸರ ಫಲ

ಶುಕ್ರ ಸ್ವಾಮಿ; ಆಷಾಢದಲ್ಲಿ ಮಳೆ ಇಲ್ಲವು, ಪಶ್ಚಿಮದೇಶಕ್ಕೆ ದುರ್ಭಿಕ್ಷವು, ಧಾನ್ಯಪ್ರೀಯವು. ಶ್ರಾವಣ ಶುದ್ಧ ನವಮಿ, ಸಪ್ತಮಿಯಲ್ಲಿ ಮಹಾ ಮಳೆ. ಭಾದ್ರಪದಮಾಸದಲ್ಲಿ ಕೃಷ್ಣಪಕ್ಷದಲ್ಲಿ ಮೊದಲಿಲ್ಲವು. ಆಶ್ವಿಜಮಾದಲ್ಲಿ ಸಾಮಾನ್ಯ ಪಕ್ಷವು. ಕಾರ್ತಿಕ, ಮಾರ್ಗಶಿರಮಾಸದಲ್ಲಿ

ಜೋಳದ ಬೆಳೆ ಕೆಟ್ಟಾವು, ಪುಷ್ಯ, ಮಾಘ, ಫಾಲ್ಗುಣ, ಚೈತ್ರ ಈ ಮಾಸಗಳಲ್ಲಿ ಧಾನ್ಯಪ್ರೀಯವು. ವೈಶಾಖಮಾಸದಲ್ಲಿ ಬೊಂಬೆರಯೆಂಬ ನಾಡಿಗೆ ವಿಗ್ರಹವು. ಜ್ಯೇಷ್ಟದಲ್ಲಿ ಮಳೆ-ಬೆಳೆ ಇಲ್ಲವು, ದುರ್ಭಿಕ್ಷವು.

# ೧೯ ಪಾರ್ಥಿವಸಂವತ್ಸರ ಫಲ

ಶನಿ ಸ್ವಾಮಿ; ಆಷಾಢದಲ್ಲಿ ಮಳೆಯಿಲ್ಲವು, ಬೆಳಸು ಮಧ್ಯಮವು, ರೋಗದಿಂದ ಕೆಟ್ಟೀತು. ಶ್ರಾವಣಮಾಸದಲ್ಲಿ ಮಹಾ ವೃಷ್ಟಿ, ಮನುಷ್ಯರಿಗೆ ರೋಗವು, ಕ್ಷತ್ರಿಯರಿಗೆ ಮರಣವು. ಭಾದ್ರಪದಮಾಸದಲ್ಲಿ ಸುಭಿಕ್ಷವು. ಶುಕ್ಲಪಕ್ಷದಲ್ಲಿ ಮಳೆಯುಂಟು. ಸಾಮಾನ್ಯ ಬೆಳೆಯಿಲ್ಲವು. ಕಳವಿಯೆಳ್ಳಿನ ಬೆಳೆಯಾದೀತು. ಹತ್ತಿ, ಉಪ್ಪು ಪ್ರೀಯವು. ಆಶ್ವಿಜಮಾಸದಲ್ಲಿ ಮಳೆ ಅಲ್ಪ. ಕೊಂಕಣದೇಶದಲ್ಲಿ ದುರ್ಭಿಕ್ಷವು. ಮಾರ್ಗಶಿರ, ಪುಷ್ಯದಲ್ಲಿ ಸುಭಿಕ್ಷವು. ಜೋಳ, ವಿದುಳಧಾನ್ಯ ಬೆಳೆದಾವು ಮಾಘಮಾಸದಲ್ಲಿ ತುರಕರಗೆ ಜಯವಿಲ್ಲ. ಫಾಲ್ಗುಣ, ಚೈತ್ರದಲ್ಲಿ ಅಲ್ಲಿಗಲ್ಲಿಗೆ ರಾಜಿಕ ವೆಗ್ಗಳವಾದಾವು. ವೈಶಾಖ, ಜ್ಯೇಷ್ಟದಲ್ಲಿ ಗೌಳದೇಶಕ್ಕೆ ದುರ್ಭಿಕ್ಷವು. ಉಳಿದ ದೇಶಕ್ಕೆ ಸುಭಿಕ್ಷವು.

# ೨೦ ವ್ಯಯಸಂವತ್ಸರ ಫಲ

ರಾಹು ಸ್ವಾಮಿ; ಆಷಾಢದಲ್ಲಿ ಮಳೆಯುಂಟು. ಶ್ರಾವಣದಲ್ಲಿ ಮಳೆಯುಂಟು, ಅರ್ಧ ಮಳೆ. ಭಾದ್ರಪದದಲ್ಲಿ ವಡಿದೇಶ ಹಾಳಕ್ಕುಂ. ಆಶ್ವಿಜಮಾಸದಲ್ಲಿ ಮಳೆಯಿಲ್ಲವು, ಕೆರೆ-ಭಾಂವಿ ಬತ್ತಿಹೋದಾವು. ಕಾರ್ತಿಕದಲ್ಲಿ ಧಾನ್ಯಪ್ರೀಯವು ಮಾರ್ಗಶಿರ, ಪುಷ್ಯದಲ್ಲಿ ವಿದ್ಯಾ ಪ್ರಬಲವು. ಮಳೆ ಗರ್ಭವಾದೀತು, ವಿರಾಮದೇಶ ಹಾಳಕ್ಕುಂ. ಮಾಘ, ಫಾಲ್ಗುಣದಲ್ಲಿ ಈಶಾನ್ಯದಿಕ್ಕಿನಲ್ಲಿ ದುರ್ಭಿಕ್ಷವು. ಚೈತ್ರ, ವೈಶಾಖ, ಜ್ಯೇಷ್ಟಮಾಸದಲ್ಲಿ ಜೋಳಕ್ಕೆ ಜನ-ಕರವಿಗೆ, ಬ್ರಾಹ್ಮಣರಿಗೆ ಈ ಮೂರಕ್ಕೆ ರೋಗವು. ಪರ್ವತ ಸೀಮಿಗೆ ಮಹಾ ಸುಖವು.

# ಮಧ್ಯಮ ಬೀಸಿಕೆಯ ಫಲವು

## ೨೧ ಸರ್ವಜಿತುಸಂವತ್ಸರ ಪಲ

ಬ್ರಾಹ್ಮಣ ಸ್ವಾಮಿ; ಆಷಾಢದಲ್ಲಿ ಮಳೆ ಮೋಷ, ಮನುಷ್ಯರಿಗೆ ಜಾಣತನದ ವಿದ್ಯದಮೇಲೆ ಪ್ರೀಯವು, ಸಮಸ್ತ ಧಾನ್ಯವೆಲ್ಲ ಬಿತ್ತೀತು, ಎಳ್ಳು ಸಣ್ಣಧಾನ್ಯ ಬೆಳೆಯಿಲ್ಲವು. ಶ್ರಾವಣದಲ್ಲಿ ಸುಭಿಕ್ಷವು, ರೋಗ ಪೀಡೆಯು ಭಾದ್ರಪದ ಕೃಷ್ಣಪಕ್ಷದಲ್ಲಿ ಧಾನ್ಯ ಪ್ರೀಯವು. ಆಶ್ವಿಜದಲ್ಲಿ ಬಿಡದೆ ಏಳು ದಿನ ಮಳೆಯಾದೀತು. ಧಾನ್ಯ ರಸವರ್ಗ ಪ್ರೀಯವು. ಜೆಜ್ಜು, ಗೋದಿ, ಕಡ್ಲಿ ಬೆಳೆಗೆ ರೋಗವು. ತುರಕರಿಗೆ ರಾಜಪ್ರಬಲವು. ಮಿಕ್ಕ ರಾಜ್ಯಕ್ಕೆ ಸುಭಿಕ್ಷವು ಇಂತಿಷ್ಟು ಕಾರ್ತಿಕದವರೆಗೆ ಆಗುವದು. ಮಾರ್ಗಶಿರ, ಪುಷ್ಯದಲ್ಲಿ ಪ್ರಬಲ ವರ್ತಿಸೀತು. ಮಾಘಮಾಸದಲ್ಲಿ ರೋಗವು. ಫಾಲ್ಗುಣದಲ್ಲಿ ಧಾನ್ಯ ಪ್ರೀಯವು. ಚೈತ್ರದೊಳಗೆ ಮಹಾರಾಷ್ಟ್ರದೇಶದಲ್ಲಿ, ಗಂಗಾತೀರದಲ್ಲಿ, ಸಮುದ್ರಪರ್ಯಂತರದಲ್ಲಿ, ಮಾಳವದೇಶದಲ್ಲಿ ಇಂತಿಷ್ಟರಲ್ಲಿ ದುಃಭಿಕ್ಷವು. ವೈಶಾಖ, ಜ್ಯೇಷ್ಠದಲ್ಲಿ ಸುಭಿಕ್ಷವು.

## ೨೨ ಸರ್ವಧಾರಿಸಂವತ್ಸರ ಪಲ

ವಿಷ್ಣು ಸ್ವಾಮಿ; ಸಮಸ್ತದೇಶಕ್ಕೆಲ್ಲ ಮುಖರೋಗ, ಸುಕ್ಕಾಲ. ಆಷಾಢದಲ್ಲಿ ವಾಯು ವರ್ತಿಸಿತು, ಸುಭಿಕ್ಷ ಶ್ರಾವಣ, ಭಾದ್ರಪದದಲ್ಲಿ ಸಾಳಿ, ಸಾಂವಿ, ನವಣಿ ಬೆಳಸು; ಉಪ್ಪು, ಜೋಳ ಬೆಳೆದಾವು. ತುಪ್ಪ ಮೊದಲಾದ ರಸವರ್ಗ ಅಗ್ಗವಾದೀತು. ಆಶ್ವಿಜದಲ್ಲಿ ಸ್ವಾತಿನಕ್ಷತ್ರ ಮಳೆಯಾದೀತು. ಕಡ್ಲಿ ಬೆಳೆ ಮಂದ. ಕಾರ್ತಿಕ, ಮಾರ್ಗಶಿರದಲ್ಲಿ ದೇಶಭಂಗ ಮಳೆಗರ್ಭ ಆದೀತು. ಪುಷ್ಯಮಾಸದೊಳಗೆ ಈಶಾನ್ಯದಿಕ್ಕಿನಲ್ಲಿ ಅವಂತಿನಾಡಿನಲ್ಲಿ ಭಂಗವಾದೀತು, ಮಾಘಮಾಸದವರೆಗೆ. ಫಾಲ್ಗುಣ, ಚೈತ್ರದಲ್ಲಿ ಧಾನ್ಯ ಮಂದಿಯು. ವೈಶಾಖದಲ್ಲಿ ಧಾನ್ಯ ಪ್ರೀಯವು. ಜ್ಯೇಷ್ಠಮಾಸದಲ್ಲಿ ದುರ್ಭಿಕ್ಷ, ಕರ್ನಾಟಕದೇಶ ತುರಕರಿಂದ ಹಾಳಾದೀತು.

## ೨೩ ವಿರೋಧಿಸಂವತ್ಸರ ಫಲ

ರುದ್ರ ಸ್ವಾಮಿ; ಆಷಾಢ, ಶ್ರಾವಣದಲ್ಲಿ ಮಹಾ ಮೇಘ, ಧಾನ್ಯದ ಬೆಳಸು ಪ್ರಬಲ. ಸಾಳಿ, ಎಳ್ಳು ಬೆಳೆದೀತು. ಅರ್ಘಮರ್ಧಾ ವೃಷ್ಟಿಯು ಆದೀತು. ಭಾದ್ರಪದ, ಆಶ್ವಿಜದಲ್ಲಿ ಪೂರ್ವದೇಶಕ್ಕೆ ಸುಭಿಕ್ಷೆಯು. ಪಶ್ಚಿಮ ದೇಶಕ್ಕೆ ದುರ್ಭಿಕ್ಷೆಯು. ಕಾರ್ತಿಕಮಾಸದಲ್ಲಿ ಜೋಳದ ಬೆಳೆ ಘಾಳಿಯಿಂದ ಕೆಡುತ್ತವೆ. ಮಾರ್ಗಶಿರದಲ್ಲಿ ವಾಯು ಉತ್ಪತ್ತಿ ಆದಾವು. ಪುಷ್ಯದಲ್ಲಿ ಕೆಲವು ರಾಜ್ಯ ಹಾಳಾದೀತು. ಮಾಘ, ಫಾಲ್ಗುಣಕ್ಕೆ ವನಸ್ಪತಿಗಳೆಲ್ಲ ಕೆಡುವವು. ಚೈತ್ರ, ವೈಶಾಖದೊಳಗೆ ಪರ್ವತದೇಶ ಕೇಟ್ಟೀತು. ಜ್ಯೇಷ್ಠ ದಲ್ಲಿ ಸಮಸ್ತದೇಶದಲ್ಲಿ ವಿಂದ್ವಾಂಸರಾದಾರು.

## ೨೪ ವಿಕ್ರಮಸಂವತ್ಸರ ಫಲ

ರವಿ ಸ್ವಾಮಿ; ಆಷಾಢ, ಶ್ರಾವಣದಲ್ಲಿ ಮಹಾ ಮಳೆ, ಸಮಸ್ತಧಾನ್ಯ ಬೆಳೆದಾವು. ಧಾನ್ಯಪ್ರಿಯವಾದಾವು. ಭಾದ್ರಪದದಲ್ಲಿ ಮಳೆ ಪೂರ್ಣ ಆದೀತು. ಧಾನ್ಯಪ್ರಿಯ ಆದಾವು, ಧಾನ್ಯದ ಬೆಳಸು, ಮನುಷ್ಯರ ಜಲ್ಮ ಮಂದ. ಆಶ್ವಿಜದಲ್ಲಿ ವಾಯು ಪ್ರಚುರವು. ಕಾರ್ತಿಕದಲ್ಲಿ ಸರ್ವಧಾನ್ಯ ಪ್ರಬಲ. ಮೇಘಮಾರುತರಾಜ್ಯ ನಾಸ್ತಿ. ಮಾರ್ಗಶಿರ, ಪುಷ್ಯದಲ್ಲಿ ಸಮಸ್ತವೆಲ್ಲ ರಸವರ್ಗಂಗಳು, ಚಿನ್ನ, ಬೆಳ್ಳಿ ಪ್ರಿಯವು ವಾಯು ಹತ್ತದೆ ಕೆಟ್ಟಾವು. ಒಂದು ಉಳಿಯದೆ ರೋಗ ಹಾದಾವು, ಇದು ಮಾಘಮಾಸದ ವರೆಗೂ. ಫಾಲ್ಗುಣದಲ್ಲಿ ಅರಸುಗಳು ಕಾದಾಡಿ ಮಡಿವರು. ಚೈತ್ರ, ವೈಶಾಖದಲ್ಲಿ ರಾಜಕಾರ್ಯ ಬಿಡದು. ಜ್ಯೇಷ್ಠದಲ್ಲಿ ಅರಸುಗಳಿಗೆ ಮರಣ- ಸಮಸ್ತ ವನಸ್ಪತಿಗಳೆಲ್ಲ ಘಾಳಿಯಿಂದ ಮರ ಮುರಿದಂತೆ ಮುರದಾವು.

## ೨೫ ಖರಸಂವತ್ಸರ ಫಲ

ಚಂದ್ರ ಸ್ವಾಮಿ; ಆಷಾಢದಲ್ಲಿ ಧಾನ್ಯಪ್ರಿಯವು ಇಂಗು, ಜೀರಿಗೆ, ಶುಂಠಿ, ಮೆಣಸು ಇವುಗಳಿಗೆ ಧಾರಣೆಯು ನೈಋತ್ಯದಲ್ಲಿ ವಾಯು

ಬೀಸೀತು. ಶ್ರಾವಣದಲ್ಲಿ ಸುಭಿಕ್ಷೆಯು, ಮಹಾ ಮಳೆ ಆವರ್ತಿಸೀತು. ಭಾದ್ರಪದಮಾಸದಲ್ಲಿ ಮನುಷ್ಯರಿಗೆ ವ್ಯಾಧಿ, ಧಾನ್ಯ ಬೆಳೆಸು ಚೆನ್ನಾಗಿ ಆದೀತು. ಆಶ್ವಿಜಮಾಸದಲ್ಲಿ ಪಶುದರುಷನಕ್ಕೆ ಹಿತವಾದೀತು. ಧಾನ್ಯದ ಧಾರಣೆ ಮಂದಿ ಆದೀತು ಕಾರ್ತಿಕಮಾಸದಲ್ಲಿ ಗೋದಿ, ಕಡ್ಲಿ ವಿಶೇಷ. ಸಮಸ್ತ ದೇಶಕ್ಕೆಲ್ಲ ಕಂದ-ಮೂಲ ಪ್ರಿಯವು. ಮಾರ್ಗಶಿರಮಾಸದಲ್ಲಿ ಕಂದ-ಮೂಲ ಪ್ರಿಯವು. ಪುಷ್ಯಮಾಸದಲ್ಲಿ ಮಳೆಯೋಗ ಪಂಚ ಗರ್ಭವು ವಾಸ ಪತಿಗಳಿಗೆ ಹತಮಂ, ದನಗಳಿಗೆ ರೋಗಮಂ ವಿನಶ್ಯತಿ. ಮಾಘ, ಫಾಲ್ಗುಣದಲ್ಲಿ ಸಮವಾಯು ಪ್ರಬಲಮಂ. ಚೈತ್ರಮಾಸದಲ್ಲಿ ಅರಸುಗಳಿಗೆ ಮಾನಭಂಗ. ಆನೇಗುಂದಿದೇಶಕ್ಕೆ, ಕೊಂಕಣದೇಶಕ್ಕೆ ವಿನಶ್ಯತಿ. ವೈಶಾಖದಲ್ಲಿ ಧಾನ್ಯಪ್ರಿಯವು ಮಹಾಸಿಕರ ಬಂದದಾನಂ. ದೇವಸ್ಥಾನ ಉಳದಾವು ಜ್ಯೇಷ್ಠಮಾಸದಲ್ಲಿ ಧಾನ್ಯಪ್ರಿಯವು.

## ೨೬ ನಂದನಸಂವತ್ಸರ ಫಲ

ಮಂಗಳ ಸ್ವಾಮಿ; ಆಷಾಢದಲ್ಲಿ ಮಹಾ ಮಳೆ, ನದಿಗಳು ಮೇರೆದಪ್ಪಿ ಬಂದಾವು. ಶ್ರಾವಣದಲ್ಲಿ ವಾಯು ಬೀಸೀತು. ಅರಸುಗಳಿಗೆ ಸ್ತ್ರೀಯರಿಂದ ವಿಕಾರಪುಟ್ಟೀತು, ಪ್ರಾಣತ್ಯಾಗವಾದೀತು. ಭಾದ್ರಪದದಲ್ಲಿ ಸರ್ವಧಾನ್ಯ ಮಾರೀತು. ಆಶ್ವಿಜದಲ್ಲಿ ಮಳೆ-ಬೆಳೆ ಕಂಡಲಮಂಡಲವಾದೀತು. ಮಳೆ ಆದೀತು. ಕಾರ್ತಿಕ, ಮಾರ್ಗಶಿರ, ಪುಷ್ಯಗಳಲ್ಲು ಸುಭಿಕ್ಷೆಯು. ಅರಸುಗಳಿಗೆ ಪೀಡಾಕಾರವು. ಮಾಘದಲ್ಲಿ ರಾಜರಿಂದ ಪ್ರಜಗಳಿಗೆ ಪೀಡಾಕಾರವು. ಫಾಲ್ಗುಣದಲ್ಲಿ ಚಿನ್ನ, ಬೆಳ್ಳಿ, ಮುತ್ತು, ರತ್ನ ಇನಿತು ಸುಭಿಕ್ಷ. ಚೈತ್ರ, ವೈಶಾಖದಲ್ಲಿ ಸಮಸ್ತಕ್ಕೆ ಸುಭಿಕ್ಷ ಜ್ಯೇಷ್ಠದಲ್ಲಿ ಧಾನ್ಯಪ್ರಿಯವು ಮಹಾ ತಾಪ, ಆನೇಗುಂದಿ ಅರಸುಗಳಿಗೆ ಮಹಾ ರೋಗವು.

## ೨೭ ವಿಜಯಸಂವತ್ಸರ ಫಲ

ಬುಧ ಸ್ವಾಮಿ; ಆಷಾಢದಲ್ಲಿ ಸುಭಿಕ್ಷೆಯು. ಶ್ರಾವಣದಲ್ಲಿ ಮನುಷ್ಯರಿಗೆ ಪೀಡೆಯು, ಧಾನ್ಯಪ್ರಿಯವು. ರಾಜಕ ಉಂಟು. ಪೂರ್ವದೇಶಕ್ಕೆ ಭಯವು ಬರನಕ್ಕುಂ. ಭಾದ್ರಪದದಲ್ಲಿ ಮನುಷ್ಯರಿಗೆ ಪೀಡೆಯು, ಅನಂತ

ರೋಗಪೀಡೆಯು, ಮಳೆ ಬಹಳ. ಆಶ್ವಿಜದಲ್ಲಿ ಕೆಲವು ಕ್ಷೇತ್ರಗಳು ಹಾಳು ಆದಾವು. ಕಾರ್ತಿಕದಲ್ಲಿ ಸಾಳಿ, ಎಳ್ಳು, ನವಣೆ, ಸಣ್ಣಧಾನ್ಯಗಳು ಮಂದ. ಮಾರ್ಗಶಿರ, ಪುಷ್ಯದಲ್ಲಿ ಮಳೆ ಬಹಳ, ಧಾನ್ಯಪ್ರಿಯವು ಮಾಘ, ಫಾಲ್ಗುಣದಲ್ಲಿ ಯಮುನಾತೀರದಲ್ಲಿ ಬ್ಯಾಡರ ಹಾವಳಿಯು. ಚೈತ್ರ, ವೈಶಾಖ, ಜ್ಯೇಷ್ಠದಲ್ಲಿ ಸ ಭಿಕ್ಷೆಯು. ಬಾಲಸ್ಯ ಪದಸ್ಯಾ ರಚಿತಂ. ರಯಂತಾ ಗೋದಾವರಿ, ತಪಸ, ಪಿಹಿಟ್ಟಣೆ, ದಕ್ಷಿಣದೇಶ ಮಿಕ್ಕಾದ ದೇಶಗಳಲ್ಲಿ ಮಳೆ ಇಲ್ಲವು. ನೀರಿನಸಲುವಾಗಿ ಹೋದಾವು. ತೆಲಿಂಗದೇಶ ವಿನಾಶ.

# ೨೮ ಜಯಸಂವತ್ಸರ ಫಲ

ಗುರು ಸ್ವಾಮಿ; ಆಷಾಢದಲ್ಲಿ ಮಹಾ ಮೇಘ, ಜನಕ್ಕೆ ಸುಖ. ಶ್ರಾವಣದಲ್ಲಿ ಮಹಾ ಪೀಡೆಯು. ಜ್ವರ, ಮರಣ ಭಯವು. ಸಾಳಿ ಮುಂತಾದ ಧಾನ್ಯ, ಸಣ್ಣ ಜೀನಸುಗಳು ಬೆಳೆದಾವು. ಭಾದ್ರಪದದಲ್ಲಿ ಊಟಮಾಡತಕ್ಕಂಥಾ ಜೀನಸು ಪ್ರಿಯವು. ಕೃಷ್ಣಪಕ್ಷ ಪಂಚಮಿ ದಿವಸ ಆಶ್ವಿಜದಲ್ಲಿ ಮಹಾ ಮಳೆ, ಬಹಳ ಜೋಳದ ಬೆಳಸು, ಸಣ್ಣ ಧಾನ್ಯ ಬೆಳೆದಾವು. ಹಾಲು, ಮಸರು, ಜೀವದನಕ್ಕೆ ಸುಭಿಕ್ಷ ಕಾರ್ತಿಕದಲ್ಲಿ ರೋಗ ಪ್ರವರ್ತಿಸೀತು. ರಸವರ್ಗಂಗಳು ಪ್ರಿಯವಾದೀತು. ಸಕ್ಕರೆ ಜಗದಂತಾವು ಪ್ರಿಯವಾದೀತು. ಮಂಜಿಷ್ಟವಾದೀತು. ಧಾನ್ಯವಾದೀತು, ಸುಭಿಕ್ಷ. ಮಾರ್ಗಶಿರ, ಪುಷ್ಯ, ಮಾಘದಲ್ಲಿ ಮಹಾಮಹಂತ ಸ್ತ್ರೀಯರ ಗರ್ಭ ಉಳಿದಾವು. ಶುಕ್ಲಪಕ್ಷದಲ್ಲಿ ಸಪ್ತಮಿ ಅಥವಾ ಪೌರ್ಣಿಮೆ ಮಹಾರಾಷ್ಟ್ರರಿಗೆ ಹೆದಿನೈದು ದಿವಸದ ಪರ್ಯಂತರದಲ್ಲಿ ಪ್ರಿಯವು. ಫಾಲ್ಗುಣದಲ್ಲಿ ದಕ್ಷಿಣ ದೇಶದ ಅರಸುಗಳೆಲ್ಲ ಕೆಡುವರು. ಚಿನ್ನ ಬೆಳ್ಳಿ ಅಗ್ಗವು. ಚೈತ್ರ, ವೈಶಾಖದಲ್ಲಿ ಸರ್ವವು ಸುಭಿಕ್ಷ ಗೋದಿ, ಕಡ್ಲಿ, ಸುವರ್ಣ ಪ್ರಿಯವಾದೀತು. ಜ್ಯೇಷ್ಠದಲ್ಲಿ ದ್ವಾರಕಿ ಭೂಮಿ ವಿನಾಶವು.

# ೨೯ ಮನ್ಮಥಸಂವತ್ಸರ ಫಲ

ಶುಕ್ರ ಸ್ವಾಮಿ; ಆಷಾಢದಲ್ಲಿ ಕಂಡಲಮಂಡಲ. ಶ್ರಾವಣ ಕೃಷ್ಣಪಕ್ಷದಲ್ಲಿ ಮಧ್ಯದಲ್ಲಿ ಲೇಸು. ಭಾದ್ರಪದದಲ್ಲಿ ಗಂಗಾತೀರದಲ್ಲಿ ವಿನಾಶವು.

ಕಾರ್ತಿಕ, ಮಾರ್ಗಶಿರದಲ್ಲಿ ರಸವರ್ಗಂಗಳು ಬಹು ವಿಪುಲವು ಆದಾವು. ಹತ್ತಿ, ಉಪ್ಪು ಪ್ರಿಯ. ಪುಷ್ಯ, ಮಾಘದಲ್ಲಿ ದಕ್ಷವಿದಮಂ ಅಲ್ಲಿಗಲ್ಲಿಗೆ ತಮ್ಮೊಳು ತಾವು ರಾಜಕವಾದಾವು ಅರಸುಗಳಿಗೆ ಮರಣಂ. ಕಾಳಿಂಗದೇಶದಲ್ಲಿ ಭಯ. ಲಲಾಟದೇಶದಲ್ಲಿ ಮಹಾ ಜಗಳ ಹುಟ್ಟೀತು. ಕಾಲದೇಶದಲ್ಲಿ ಗ್ರಹಮಂ. ಚೈತ್ರದಲ್ಲಿ ಸರ್ವ ಭೂಮಿ ಸವಾಲಕ್ಷ ಪರ್ವತದಲ್ಲಿ ಧಾನ್ಯ ಪ್ರಿಯವು. ವೈಶಾಖದಲ್ಲಿ ಮಹಾ ಅಲಗುವದು. ಜ್ಯೇಷ್ಠಮಾಸದಲ್ಲಿ ಕೆಲವು ದೇಶವು ವಿನಾಶವು.

## ೩೦ ದುರ್ಮುಖಿಸಂವತ್ಸರ ಫಲ

ಶನಿ ಸ್ವಾಮಿ; ಆಷಾಢದಲ್ಲಿ ಮಹಾ ಮಳೆ. ಶ್ರಾವಣದಲ್ಲಿ ಸಣ್ಣ ಧಾನ್ಯದ ಬೆಳಸು, ಮುಂದೆ ಮನುಷ್ಯರಿಗೆ ಮರಣ ಭಾದ್ರಪದದಲ್ಲಿ ರುಜುಮಂ. ಸರ್ವಧಾನ್ಯ ಸಮೃದ್ಧಿ. ಶ್ವೇತ ಸರ್ವತ್ರ ವಿರೋಧಕಂ. ಆಶ್ವಿಜದಲ್ಲಿ ಅರಸುಗಳಿಗೆ ಮರಣ. ಮಿಲಂಚ ರಾಜ್ಯದಪೂರ್ತಿ ಧಾನ್ಯ ಮಧ್ಯಮ ವಿಷಯವಾದಾವು, ಮಹಾ ಪ್ರಿಯ. ಮಾರ್ಗಶಿರದಲ್ಲಿ ವಿರೋಧಕಂ. ನೃಪತಿಗೆ, ಉತ್ತರದೇಶಕ್ಕೆ ಛತ್ರಭಂಗಮಂ. ವನಸ್ಪತಿಗೆ, ರಸಂ ಪಾಶಂ ವಿನಾಶತಿ ಪುಷ್ಯದಲ್ಲಿ ದ್ರವ್ಯಂ ಹಂತಿ. ಮಾಘದಲ್ಲಿ ಮದ್ಯಸ್ತ. ಫಾಲ್ಗುಣ, ಚೈತ್ರದಲ್ಲಿ ಧಾನ್ಯಪ್ರಿಯ. ವೈಶಾಖದಲ್ಲಿ ಪಂಜಗಳ್ಳರ ಉಪಟಳವು. ಜ್ಯೇಷ್ಠದಲ್ಲಿ ಸಮಫಲವು.

## ೩೧ ಹೇವಿಳಂಬಿಸಂವತ್ಸರ ಫಲ

ರಾಹು ಸ್ವಾಮಿ; ಆಷಾಢದಲ್ಲಿ ಮಹಾ ಮೇಘ, ಸುಭಿಕ್ಷ, ಪ್ರಜಗಳಿಗೆ ಉತ್ತಮ. ಶ್ರಾವಣದಲ್ಲಿ ವೃಷ್ಟಿಯು, ಶುಭಾಶೋಭಿತಂ. ಭಾದ್ರಪದದಲ್ಲಿ ವಸ್ತು ಪ್ರಿಯ, ಸುಭಿಕ್ಷೆಯು. ಆಶ್ವಿಜದಲ್ಲಿ ಎಳ್ಳು, ಸಣ್ಣಧಾನ್ಯ ಕಷ್ಟವು. ಕಾರ್ತಿಕ, ಮಾರ್ಗಶಿರ, ಪುಷ್ಯದಲ್ಲಿ ಕಾಳಿಂಗದೇಶ, ಗೌಳದೇಶಕ್ಕೆ ಸುಭಿಕ್ಷವು. "ಮಾಘೇಂತ ಹರತೇ ಪೃಥ್ವಿ ಫಾಲ್ಗುಣ ಹರತೆ ಸ್ತ್ರಿಯಂ" ರಸಬಂಡವಲಾ,

ಬಣ್ಣವಸ್ತ್ರವುಂ, ಕುದುರೆ ಪ್ರಿಯವಾದಾವು. ಚೈತ್ರ, ವೈಶಾಖದಲ್ಲಿ ಅರಸು ಗಳು ಪರರಾಜ್ಯಕ್ಕೆ ಮಾನಮಾಡುವರು, ದೇಶಾಂತರವುಂ ಪೀಡಾ ಪ್ರಜ್ವಲವುಂ, ನಗರು ಕನ್ನವುಂ. ಜ್ಯೇಷ್ಠದಲ್ಲಿ ಹರಿವಾಸಕ್ಕೆ ಕ್ಷೇತ್ರದಲ್ಲಿ ದುರ್ಭಿಕ್ಷೆಯು, ಮಿಕ್ಕ ನಾಡಿಗೆ ಸುಭಿಕ್ಷೆಯು.

## ೩೨ ವಿಳಂಬಿಸಂವತ್ಸರ ಪಲ

ಕೇತು ಸ್ವಾಮಿ; ಆಷಾಢದಲ್ಲಿ ಮಹಾಮಳೆಯಾಗಿ ಮಹಾನದಿಗಳು ಪ್ರವೇಶವಾದಾವು. ಶ್ರಾವಣದಲ್ಲಿ ಮಹಾಘಾಳಿ. ಭಾದ್ರಪದದಲ್ಲಿ ಮಹಾ ಸುಭಿಕ್ಷ. ಹಾಲು, ಮೊಸರು ಸುಭಿಕ್ಷ. ತುಪ್ಪ ಅಗ್ಗವಾಗುವದು. ಹತ್ತಿ, ಉಪ್ಪು ಪ್ರೀಯವು ದ್ರಾಕ್ಷೆ ಮುಂತಾದ ವಸ್ತುಗಳು ನಾಶವು. ಆಶ್ವಿಜ ಮಾಸದಲ್ಲಿ ಸರ್ವ ಬಾಧೆ. ಮಳೆಯು, ಧಾನ್ಯ ಧ್ವಂಸ. ರಸವರ್ಗಂಗಳೆಲ್ಲ ಬೆಳೆ ಸ್ವಲ್ಪ ಕಾರ್ತಿಕದಲ್ಲಿ ಕೃಷಿಕರ್ಮ ಸ್ವಲ್ಪ. ಮಳೆ ಬಹಳ. ಮಾರ್ಗಶಿರ, ಪುಷ್ಯ, ಮಾಘದಲ್ಲಿ ತಮ್ಮೊಳು ತಾವು ಕಾಳಗದಿಂದ ಮಡಿವರು. ರಾಜಕ ದಿಂದ ಕೆಟ್ಟ ಕೆಲಸವಾದೀತು. ಫಾಲ್ಗುಣದಲ್ಲಿ ರಣಗಂಭದೇಶ ವಿನಾಶನಂ. ಚೈತ್ರ, ವೈಶಾಖದಲ್ಲಿ ಸಮಸ್ತ ಧಾನ್ಯ ಪ್ರೀಯವು. ಜ್ಯೇಷ್ಠದಲ್ಲಿ ರೋಹಿಣಿ ಮಳೆ ಬಂದೀತು, ಮಳೆ–ಬೆಳೆ ಸುಭಿಕ್ಷವು.

## ೩೩ ವಿಕಾರಿಸಂವತ್ಸರ ಫಲ

ರವಿ ಸ್ವಾಮಿ; ಆಷಾಢದಲ್ಲಿ, ಶ್ರಾವಣದಲ್ಲಿ ಮಹಾ ಮಳೆಯು. ಸಣ್ಣ ಧಾನ್ಯ ಬೆಳೆಯುವವು ಭಾದ್ರಪದದಲ್ಲಿ ಮಹಾ ಘಾಳಿಯು. ಸಾಳಿ ಬೆಳೆ ಆದೀತು, ಜೋಳದ ಬೆಳೆ ಮಂದ, ಮನುಷ್ಯರಿಗೆ ಮರಣ ಆಶ್ವಿಜದಲ್ಲಿ ಮನುಷ್ಯರಿಗೆ ಪೀಡೆಯು, ಕಾರ್ತಿಕದತನಕ ಬಿಡದು. ಧಾನ್ಯ ಸುಭಿಕ್ಷವು. ಆನಿ, ಕುದುರೆಗೆ ರೋಗ. ಮಾರ್ಗಶಿರ, ಪುಷ್ಯದಲ್ಲಿ ಮನುಷ್ಯರಿಗೆ ಹೀನವು. ಹಿಂಸಾ ಬಹಳ. ಮಾಘದಲ್ಲಿ ಪಂಚವರ್ಣ, ಸುಂದರವರ್ತಿ; ಫಾಲ್ಗುಣದಲ್ಲಿ ರಸವರ್ಗ ಪ್ರೀಯವು ಚೈತ್ರದಲ್ಲಿ ಧಾನ್ಯ ಪ್ರೀಯವು. ವೈಶಾಖದಲ್ಲಿ

ಮಹಾರಾಷ್ಟ್ರದಲ್ಲಿ ಮೂರು ಪಕ್ಷದತನಕ ಹೇಮ ಧಾತು ಪ್ರಿಯವು. ಜ್ಯೇಷ್ಠದಲ್ಲಿ ಪಶುಜಾತಿಗೆ ಮರಣ. ಗುಜ್ಜರದೇಶ ಮೊದಲಾಗಿ ಕುರಸಾನಿ ದೇಶದಲ್ಲಿ ವಿನಾಶವಾಗಿ ಹೋದಾವು.

## ೩೪ ಶಾರ್ವರಿಸಂವತ್ಸರ ಫಲ

ಚಂದ್ರ ಸ್ವಾಮಿ; ಆಷಾಢದಲ್ಲಿ ಧಾನ್ಯ ಪ್ರಿಯವು. ಶ್ರಾವಣದಲ್ಲಿ ವರುಣದೇಶಕ್ಕೆ ಭಯ. ಭಾದ್ರಪದದಲ್ಲಿ ಧಾನ್ಯವು ಬೆಳೆ ಆದೀತು. ಸಾಳಿ, ಜೋಳದ ಬೆಳೆ ಅಲ್ಪ. ಕಾರ್ತಿಕ, ಆಶ್ವಿಜದಲ್ಲಿ ಗುಜ್ಜರದೇಶಕ್ಕೆ ಸುಖ. ಮಾರ್ಗಶಿರ, ಪುಷ್ಯದಲ್ಲಿ ಸುಭಿಕ್ಷವು. ಫಾಲ್ಗುಣ, ಚೈತ್ರ, ವೈಶಾಖದಲ್ಲಿ ಧಾನ್ಯಪ್ರಿಯವು. ನೃಪರಿಂದ ವಿಗ್ರಹವು. ಪೂರ್ವ, ದಕ್ಷಿಣದೇಶಕ್ಕೆ, ಚೊಂಚಂದೇಶ, ಶ್ವೇತ ಬಂಧುದೇಶ, ನೈಋತ್ಯದೇಶಮಾತ್ರ ವಿಗ್ರಹವು. ಜ್ಯೇಷ್ಠದಲ್ಲಿ ಕೆಲವು ದೇಶ ವಿನಾಶವು.

## ೩೫ ಪ್ಲವಸಂವತ್ಸರ ಫಲ

ಮಂಗಳ ಸ್ವಾಮಿ; ಆಷಾಢದಲ್ಲಿ, ಶ್ರಾವಣದಲ್ಲಿ ಭಾದ್ರಪದದಲ್ಲಿ ಸಮಸ್ತಧಾನ್ಯ ಬೆಳೆಯುವವು. ಆಶ್ವಿಜ, ಕಾರ್ತಿಕದಲ್ಲಿ ದನಗಳಿಗೆ ರೋಗವುಂ ರಾಜಕವು ಮಾರ್ಗಶಿರ, ಪುಷ್ಯ, ಮಾಘದಲ್ಲಿ ಭಯವು. ಉಪ್ಪು, ಹತ್ತಿ, ವಸ್ತ್ರ ಪ್ರಿಯವು. ಚೈತ್ರ, ವೈಶಾಖದಲ್ಲಿ ದಾರಸಿಂಗದೇಶ ವಿನಾಶವು. ಜ್ಯೇಷ್ಠದಲ್ಲಿ ಕೆಲವು ದೇಶ ಹಾಳು.

## ೩೬ ಶುಭಕೃತುಸಂವತ್ಸರ ಫಲ

ಬುಧ ಸ್ವಾಮಿ; ಆಷಾಢ, ಶ್ರಾವಣ, ಭಾದ್ರಪದ, ಆಶ್ವಿಜ ಈ ನಾಲ್ಕು ತಿಂಗಳೊಳಗೆ ಬೆಳೆಯಿಲ್ಲವು. ರಸವರ್ಗ ಪ್ರಿಯ. ಕಾರ್ತಿಕದಲ್ಲಿ ಅರಸುಗಳಿಗೆ ವ್ಯಾಧಿ ಮಾರ್ಗಶಿರದಲ್ಲಿ ಸುಭಿಕ್ಷ. ಪುಷ್ಯದಲ್ಲಿ ತೊಳಿಹುಳಾ ಆದಾವು. ದಕ್ಷಿಣದಿಕ್ಕಿನಲ್ಲಿ ಧಾನ್ಯಪ್ರಿಯವು. ಮಾಘದಲ್ಲಿ ಮನುಷ್ಯರಿಗೆ

ಜ್ವರಭಯ. ಚೈತ್ರದಲ್ಲಿ ಛತ್ರಭಂಗವಾದೀತು. ವೈಶಾಖದಲ್ಲಿ ರಸವರ್ಗ ಪ್ರೀಯ, ಧಾನ್ಯ ಸುಭಿಕ್ಷ, ದನ-ಕರುವಿಗೆ ಜಯವಿಲ್ಲ. ಜ್ಯೇಷ್ಠದಲ್ಲಿ ಕೆಲವು ದೇಶ ವಿನಾಶವು

## ೩೭ ಶೋಭನಕೃತುಸಂವತ್ಸರ ಫಲ

ಗುರು ಸ್ವಾಮಿ; ಆಷಾಢದಲ್ಲಿ, ಶ್ರಾವಣದಲ್ಲಿ ಮಹಾ ಸುಭಿಕ್ಷವು. ಭಾದ್ರಪದದಲ್ಲಿ ಸಮಸ್ತವೂ ಮಧ್ಯಮ. ಆಶ್ವಿಜದಲ್ಲಿ ಜೋಳದ ಬೆಳೆಗೆ ರೋಗ, ಕರ್ಲಭೂಮಿ ಹಾಳು, ಅದರಿಂದ ಕೆಟ್ಟಾವು ಸಣ್ಣ ಭೂಮಿ ಬೆಳಸು. ಸಾಳಿ, ಎಳ್ಳು ಬೆಳೆ ಮಂದ ಕಾರ್ತಿಕ, ಮಾರ್ಗಶಿರ, ಪುಷ್ಯದಲ್ಲಿ ಮಳೆ ಅಲ್ಪ, ಮಹಾ ಮೇಘವಾಗಿ ಹೋದೀತು. ಗೋದಿ, ಕಡ್ಲಿ, ಅಗಸಿ ಬೆಳೆ ಮಂದ. ಸಮಸ್ತ ಧಾನ್ಯ ಪ್ರೀಯವು. ಚಪಕಪುರವೆಂಬ ದೇಶದಲ್ಲಿ ದುರ್ಭಿಕ್ಷವು. ಮಾಘಮಾಸದಲ್ಲಿ ಮಳಿ ಗರ್ಭೋತ್ಸವಂ, ನೃಪತಿಗೆ ಕೇಡು. ಫಾಲ್ಗುಣ, ಚೈತ್ರದಲ್ಲಿ ವಾಗ್ಸರದೇಶದಲ್ಲಿ ಷಡುದರುಶನಕ್ಕೆ ವಾದಾವು. ವೈಶಾಖಮಾಸದಲ್ಲಿ ಕಾಶ್ಮೀರದೇಶದಲ್ಲಿ, ತೆಲಗಾಣ್ಯವಿದ್ದ ನಗರದಿಂದ ಸಮುದ್ರಪರ್ಯಂತರ ರಾಜಕಾರ್ಯಗಳು. ಜ್ಯೇಷ್ಠದಲ್ಲಿ ಹತ್ತಿ ಮಂಜಿಷ್ಟವು, ರಾಜಲವಣ, ಮಂಗಜರಂತಿ ವಸ್ತ್ರಗಳು ಮಹಾ ಪ್ರೀಯವು.

## ೩೮ ಕ್ರೋಧಿಸಂವತ್ಸರ ಫಲ

ಶುಕ್ರ ಸ್ವಾಮಿ; ಆಷಾಢದಲ್ಲಿ ಸುಭಿಕ್ಷ. ಸೊಪ್ಪಿಗೆ. ಜೋಳಕ್ಕೆ ಧಾರಣಿ. ಜಡಿಮಳಿ ರಾಜ್ಯಕ್ಕೆ, ಹಾಂಗೆ ಒಂದು ಪರಿಯಂತರದಲ್ಲಿ ಆದೀತು. ಶ್ರಾವಣದಲ್ಲಿ ಮಹಾತುಂಗ, ಕಂಡಲಮಂಡಲ ಮಳೆ, ಮಧ್ಯದೇಶದಲ್ಲಿ ಸುಭಿಕ್ಷ. ಭಾದ್ರಪದಮಾಸದಲ್ಲಿ ಸ್ವಲ್ಪ ಮಳೆಯಾದೀತು. ಹುಲಿ, ಕರಡಿ, ತೋಳ, ನರಿ ಮುಂತಾದ ಮೃಗಜಾತಿಗೆ ರೋಗವು ಪಿಡಿಭಯವೆಗ್ಗಳಾ. ಸುಭಿಕ್ಷವು. ಪೂರ್ವದೇಶ ನಾಶನ. ಆಶ್ವಿಜಮಾಸದಲ್ಲಿ ಫಲಕ್ಕೆ ರೋಗವು. ಜೋಳಕ್ಕೆ ಧಾರಣಿ. ಕಾರ್ತಿಕ, ಮಾರ್ಗಶಿರಮಾಸದಲ್ಲಿ ಸಮಸ್ತ ಧಾನ್ಯ

ಮಂದವು, ವಿನಾಶನ. ಪುಷ್ಯಮಾಸದಲ್ಲಿ ಮೂಷಕ ಭಯವು. ಜೋಳಕ್ಕೆ ಸರ್ವಧಾನ್ಯಕ್ಕೆ ಧಾರಣೆ. ಅರಸುಗಳು ರೋಗದಿಂದ ಸತ್ತಾರು. ಮಾಘ ಮಾಸದಲ್ಲಿ ಮನುಷ್ಯರಿಗೆ ಸಾವು ಉಂಟು. ಪೂರ್ವದೇಶದಲ್ಲಿ ರಾಜಕ ಉಂಟು. ದಕ್ಷಿಣದಿಕ್ಕಿನಲ್ಲಿ ಕೆಲವು ದೇಶ ಹಾಳಕ್ಕುಂ. ಫಾಲ್ಗುಣಮಾಸ ದಲ್ಲಿ ಬಸರು ಹೆಂಗಸರು ಬಹಳ, ಅವರಿಗೆ ಮರಣ. ಚೈತ್ರಮಾಸದಲ್ಲಿ ಆನೇಗುಂದಿ, ವಿಜಾಪುರ ಸಮುದ್ರಪರ್ಯಂತರ ಅರಸುಗಳಿಂದ ಲೋಕಕ್ಕೆ ಪೀಡಾ ವೈಶಾಖದಲ್ಲಿ ಸುಭಿಕ್ಷ. ಜ್ಯೇಷ್ಠಮಾಸದಲ್ಲಿ ಮಹಾ ಪಟ್ಟಣ ಹಾಳಕ್ಕುಂ.

# ೩೯ ವಿಶ್ವಾವಸುಸಂವತ್ಸರ ಫಲ

ಶನಿ ಸ್ವಾಮಿ; ಆಷಾಢದಲ್ಲಿ ಸ್ವಲ್ಪ ಮಳೆ, ಮಗಧಾನ್ಯ ಪ್ರಿಯಾ. ಶ್ರಾವಣದಲ್ಲಿ ಮಹಾಪ್ರಿಯಾ. ಭಾದ್ರಪದದಲ್ಲಿ ಮಳೆಯಾದೀತು. ಸಣ್ಣ ಧಾನ್ಯ ನಾಶವು. ಸಾಳಿ ಬೆಳೆ ಮಂದ. ಆಶ್ವಿಜದಲ್ಲಿ ವಾಯು ಪ್ರಬಲಂ. ಕಾರ್ತಿಕಮಾಸದಲ್ಲಿ ಬಿಳಿಯಹೊದಿಕೆ ಸಕ್ಕರಿ ಪ್ರಿಯಾ ಮಾರ್ಗಶಿರದಲ್ಲಿ ಬಿಳಿಯ ಹೊದಿಕೆ ಪ್ರಿಯಾ, ಮಹಾ ಘಾಳಿ. ಪುಷ್ಯ, ಮಾಘ, ಫಾಲ್ಗುಣ ದಲ್ಲಿ ಬಂದವಾ ನಡುಸೀಮೆಗೆ ತುರಕರಿಂದ ಕೆಟ್ಟಾವು ಚೈತ್ರ, ವೈಶಾಖ, ಜ್ಯೇಷ್ಠಮಾಸದಲ್ಲಿ ಮಧ್ಯಮ.

# ೪೦ ಪರಾಭವಸಂವತ್ಸರ ಫಲ

ರಾಹು ಸ್ವಾಮಿ; ಆಷಾಢದಲ್ಲಿ ಮಳೆ ಘಾಳಿ. ಶ್ರಾವಣದಲ್ಲಿ ಮಳೆ ಇಲ್ಲವು. ಭಾದ್ರಪದದಲ್ಲಿ ಮಳೆಭಾರ. ಸಾಳಿ ಬೆಳಸು ಕೆಟ್ಟೀತು. ಸಣ್ಣ ಧಾನ್ಯ ಬೆಳೆಯಿಲ್ಲ. ಜೋಳದ ಬೆಳೆ ಎಲ್ಲವು ಆದೀತು, ಯುದುಳವಾದಾವು. ಆಶ್ವಿಜದಲ್ಲಿ ಗೋದಿ, ಕಡ್ಲಿ ಬೆಳೆದಾವು, ತುಪ್ಪ, ಸಕ್ಕರಿ ಅಗ್ಗ. ಕಾರ್ತಿಕ, ಮಾರ್ಗಶಿರದಲ್ಲಿ ಸುಭಿಕ್ಷ. ಜೋಳಕ್ಕೆ ಕೆಲವು ರೋಗ. ಮಾರ್ಗಶಿರ, ಪುಷ್ಯ ಮಾಸದಲ್ಲಿ ಭಯ. ಮಾಘ, ಫಾಲ್ಗುಣದಲ್ಲಿ ಸಮಸ್ತ ಧಾನ್ಯವೆಲ್ಲ ಬೆಂಕಿ

ಯಿಂದ ಸುಟ್ಟೀತು. ವೈಶಾಖಮಾಸದಲ್ಲಿ ನಗರಿಯೆಂಬ ದುರ್ಗಾ ಸಂಹಾರ ವಾದೀತು. ಜ್ಯೇಷ್ಠಮಾಸದಲ್ಲಿ ಅಗ್ನಿಭಯ, ಮಹಿಮೆ ವಿನಾಮುವಕ್ಕುಂ.

# ಕನಿಷ್ಟ ಬೀಸಿಕೆಯ ಸಂವತ್ಸರಗಳು

## ೪೧ ಪ್ಲವಂಗಸಂವತ್ಸರ ಫಲ

ಬ್ರಹ್ಮ ಸ್ವಾಮಿ; ಆಷಾಢದಲ್ಲಿ ಮಹಾ ಮಳೆ ಶ್ರಾವಣದಲ್ಲಿ ನಾಸ್ತಿ, ಬೆಳೆಸಿಗೆ ನೀರಿಲ್ಲ, ರಾಜರು ವೃಷ್ಟಿಯೆಂಬುವರು, ಮಹಾ ದುಃಖ, ಮಹಾ ಘಾಳಿಯಿಂದ ಮರ ಮುರಿದು ಬಿದ್ದಾವು, ಶಿಖರಗಳು ಮುರಿದಾವು. ಕೃಷ್ಣ ಪಕ್ಷದಲ್ಲಿ ಮಹಾ ಮಳೆಯು. ಪೂರ್ವ ದಕ್ಷಿಣದೇಶದಲ್ಲಿ ಭಾದ್ರಪದಮಾಸದಲ್ಲಿ ಗುಜ್ಜರದೇಶಕ್ಕೆ ದುರ್ಭಿಕ್ಷ. ಆಶ್ವಿಜಮಾಸದಲ್ಲಿ ಮಾಳವದೇಶಕ್ಕೆ ದುರ್ಭಿಕ್ಷ. ಕಾರ್ತಿಕಮಾಸದಲ್ಲಿ ಮದರಿದೇಶಕ್ಕೆ ದುರ್ಭಿಕ್ಷ. ಮಾರ್ಗಶಿರ, ಪುಷ್ಯ ಮಾಘಮಾಸದಲ್ಲಿ ಮಳೆಗರ್ಭ ನಿಜಗರ್ಭ. ಹೇಮಪಂಚಾಂಗ ಮಹಾನಗರ ಸಂಗಳೆಲ್ಲ ದುರ್ಭಿಕ್ಷ. ಮಾಘದಲ್ಲಿ ಮಂಜಿಷ್ಟ, ಹೇಮತಿತೆ ಸರ್ವ ತೃಣ ಸುಭಿಕ್ಷ. ವೈಶಾಖ, ಜ್ಯೇಷ್ಠದಲ್ಲಿ ಧಾನ್ಯ ಪ್ರಿಯವು. ಸೂರ್ಯ, ಚಂದ್ರ ಗ್ರಹಣಮಕ್ಕುಂ.

## ೪೨ ಕೀಲಕಸಂವತ್ಸರ ಫಲ

ವಿಷ್ಣು ಸ್ವಾಮಿ; ಆಷಾಢದಲ್ಲಿ ಮಹಾ ಮಳೆಯು ಶ್ರಾವಣದಲ್ಲಿ ಮಹಾ ಸುಭಿಕ್ಷ ಭಾದ್ರಪದದಲ್ಲಿ ಸಾಳಿ ಬೆಳೆಸು. ವಿದುಳಧಾನ್ಯ ಸಮೃದ್ಧಿ. ಜೋಳದ ಬೆಳೆಸು, ಸುಭಿಕ್ಷೆಯು. ಕಾರ್ತಿಕ, ಮಾರ್ಗಶಿರದಲ್ಲಿ ಪ್ರಜಗಳಿಗೆ ನಾಶ, ರಾಜರಿಗೆ ವಿನೋದ ಮುತ್ತು, ಹವಳ, ವಾಜಿಗೆ ಸುಭಿಕ್ಷ. ಆಸಿ ಪ್ರೀಯವು. ಪುಷ್ಯದಲ್ಲಿ ಕೆಂಪು ಪ್ರೀಯವು. ರಸಭಂಡವಲ ವಿನಾಶನ. "ಕೇತಾರ ಏತಾರ ದೂಗಸ್ಯ ಪಂಚವರ್ಣಾ ನಿನವತ್ರೀಚಮೇವಚ । ಅವಿತಾರ ಸಂಭಾಗ್ಯನ ಪಂಚಂಗ ಪಾತ್ರಕೆ ಕ್ರಮಾ ॥" ಫಾಲ್ಗುಣಮಾಸದಲ್ಲಿ

ಮಹಾರಾಷ್ಟ್ರದೇಶ ಸಾಮಾನ್ಯ. ಚೈತ್ರ, ವೈಶಾಖದಲ್ಲಿ ಮಹಾ ಪ್ರಿಯಾ. ಜ್ಯೇಷ್ಠಮಾಸದಲ್ಲಿ ಸುಭಿಕ್ಷೆಯು.

## ೪೩ ಸೌಮ್ಯಸಂವತ್ಸರ ಫಲ

ರುದ್ರ ಸ್ವಾಮಿ; "ಅನ್ಯಡಂಚ ಮಹಾಮೇಘಂ ತೋಯಪುನರ್ವ-ಸುಂಧರ।" ಮಹಾರಾಷ್ಟ್ರದೇಶದ ಅರಸುಗಳು ವನಪ್ರವೇಶವಾದಾರು. ಶ್ರಾವಣದಲ್ಲಿ ಮಳೆಯಾದೀತು, ಸುಭಿಕ್ಷೆಯು. ಅಕ್ಕಿ, ಉಪ್ಪು, ವಿದುಳ ಧಾನ್ಯ ಪ್ರೀಯವಾದಾವು. ಭಾದ್ರಪದ, ಆಶ್ವಿಜ, ಕಾರ್ತಿಕದಲ್ಲಿ ಸುಭಿಕ್ಷವು. ಮಾರ್ಗಶಿರ, ಪುಷ್ಯ, ಮಾಘಮಾಸದಲ್ಲಿ ಸುಭಿಕ್ಷೆಯು. ಮಾಘದಲ್ಲಿ ಎಲ್ಲವೂ ಲಾಭ. ಫಾಲ್ಗುಣ, ಚೈತ್ರ, ವೈಶಾಖದಲ್ಲಿ "ಮಣ್ಣಂಗಿರಿನಂದ ಭಾರಕ್ಕ ಕರುಕ್ಷತ್ರ ವಿನಾಶನಂ।" ಜ್ಯೇಷ್ಠಮಾಸದಲ್ಲಿ ಸಮಾಧಾನವು.

## ೪೪ ಸಾಧಾರಣಸಂವತ್ಸರ ಫಲ

ರವಿ ಸ್ವಾಮಿ; ಆಷಾಢದಲ್ಲಿ ಮಹಾ ಭಯ, ಮೂಡಣದೇಶಕ್ಕೆ ಭಂಗ. ಭಾದ್ರಪದಮಾಸದಲ್ಲಿ ಸಮಸ್ತ ಧಾನ್ಯ ಸಮೃದ್ಧಿಯು. ಸಾಳಿ, ಎಳ್ಳು, ನವಣಿ ಪ್ರಚುರ. ಆಶ್ವಿಜಮಾಸವಲ್ಲಿ ಜೋಳದ ಬೆಳಸಿಗೆ ಸಿಂಗರೋಗವು; ವಿದುಳಧಾನ್ಯವಾಗುವವು; ಉದ್ದು, ಹೆಸರು ಪ್ರಚುರ. ಕಾರ್ತಿಕಮಾಸದಲ್ಲಿ ಸಮೃದ್ಧಿ. ಪ್ರಜಾಯತೆ ಅರ್ಧಮನಿರಾಜೆ ಹೋಗಾಡಿಸಿಕೊಂಡಾರು. ಮಾರ್ಗಶಿರ, ಪುಷ್ಯಮಾಸದಲ್ಲಿ ರಾಜಗಳಿಗೆ, ಕೇಡು. ಮಾಘ, ಫಾಲ್ಗುಣ ದಲ್ಲಿ ಈಶಾನ್ಯದೇಶ, ಪೂರ್ವದೇಶ ಮಧ್ಯಮ. ಗುಜ್ಜರದೇಶ, ವಿಷ್ಣು ಅವುಗಳಿಗಿಷ್ಟು ನಾಶ. ದೇಶದೇಶಗಳಲ್ಲಿ ಸಣಿ ಕೆಡುವದು. ರಾಜಕವಾದಾವು. ಪ್ರಜಗಳಿಗೆ ಸುಖವಿಲ್ಲ. ಮಳೆ–ಬೆಳೆ ಇಲ್ಲದೆ ಗೌಳದೇಶಕ್ಕೆ ದುರ್ಭಿಕ್ಷೆಯು. ಜ್ಯೇಷ್ಠಮಾಸದಲ್ಲಿ ಸುಭಿಕ್ಷೆಯು. ಸಣ್ಣಧಾನ್ಯ ಮೊದಲಾಗಿ ಎಲ್ಲ ಬಿತ್ಯಾವು. ಲೋಕದಲ್ಲಿ ನೋಡಲಿಕ್ಕೆ ಅನಂತವಾಗಿ ಕಾಣಬಹುದು.

# ೪೫ ವಿರೋಧಿಕೃತಸಂವತ್ಸರ ಫಲ

ಚಂದ್ರ ಸ್ವಾಮಿ; ಆಷಾಢದಲ್ಲಿ ಮಳೆಯು, ಸುಭಿಕ್ಷೆಯು. ಶ್ರಾವಣ, ಭಾದ್ರಪದದಲ್ಲಿ ಕರಿಪು ಬೆಳೆದಾವು. ವಿದುಳಧಾನ್ಯ ಬೆಳೆದಾವು. ಸಾಳಿ ಮಂದ. ಆಶ್ವಿಜಮಾಸದಲ್ಲಿ ಮಳೆ ಆಗುವದು. ನವಣೆ, ಹತ್ತಿ, ಮಂಜಿಷ್ಟ ಪ್ರಿಯ. ಸಕ್ಕರೆ, ದ್ರಾಕ್ಷೆ ಪ್ರಿಯ. ಕಾರ್ತಿಕದಲ್ಲಿ ಸಮುದ್ರಪರ್ಯಂತರ ಗಜಗ ಪ್ರಸಿದ್ಧದು. ಗುರ್ಜರಕ್ಕೆ ವಿನಾಶ. ಮಾರ್ಗಶಿರಮಾಸದಲ್ಲಿ ಸಮಾಧಾನ. ಪುಷ್ಯಮಾಸದಲ್ಲಿ ಮಹಾ ಮೇಘ. ಮಾಘಮಾಸದಲ್ಲಿ ಅರಸುಗಳಿಗೆ ಮರಣ. ಈ ಮರ್ಯಾದಿಯಲ್ಲಿ ದೇಶಂಗಳು ಹಾಳಕ್ಕುಂ. ಜ್ವಲಮಲಯ್ಯಾ, ಖಾತದೇಶ, ಶ್ರೀಖಂಡ, ಹಸ್ತಿನಾಪುರ ಫಾಲ್ಗುಣ, ಚೈತ್ರ ದಲ್ಲಿ ಸುಭಿಕ್ಷ. ವೈಶಾಖ, ಜ್ಯೇಷ್ಟದಲ್ಲಿ ಕಷ್ಟ ಪ್ರಚಾರ ಮಾರುವದು.

# ೪೬ ಪರಿಧಾವಿಸಂವತ್ಸರ ಫಲ

ಮಂಗಳ ಸ್ವಾಮಿ; ಆಷಾಢಲ್ಲಿ ಮಳೆಯು ಆಗುವದು. ಶ್ರಾವಣದಲ್ಲಿ ಸುಭಿಕ್ಷೆಯು. ಭಾದ್ರಪದಮಾಸದಲ್ಲಿ ಕುದುರೆಗೆ, ಮಹಿಷಿಗೆ ಸಾವು. ಕರಿಪು, ಸಾಳಿ ಇವಕ್ಕೆ ಸಾಮಾನ್ಯ; ಬಯಲ ಗರ್ಜನೆ ವೃಷ್ಟಿ, ಸುಭಿಕ್ಷೆಯು. ಆಶ್ವಿಜಮಾಸದಲ್ಲಿ ರಸವರ್ಗಂಗಳು ಬಹು ಮಾನ್ಯವು. ಪ್ರಜಗಳಿಗೆ ಪೀಡೆ. ಮಂಜಿಷ್ಟ ಪ್ರಿಯಾ. ಕಾರ್ತಿಕಮಾಸದಲ್ಲಿ ಬಹು ವೃಷ್ಟಿಯು. ಮಾರ್ಗಶಿರ, ಪುಷ್ಯದಲ್ಲಿ ಧಾನ್ಯಪ್ರಿಯಾ. ವಾಯುಗರ್ಭ ಸಾಮಾನ್ಯವು ಫಾಲ್ಗುಣ ಮಾಸದಲ್ಲಿ ಮಹಾ ಭಯ. ಚೈತ್ರಮಾಸದಲ್ಲಿ ಸುಭಿಕ್ಷೆಯು. ವೈಶಾಖ ಮಾಸದಲ್ಲಿ ಗುಜ್ಜರದೇಶಕ್ಕೆ ಸುಭಿಕ್ಷೆಯು. ಜ್ಯೇಷ್ಠಮಾಸದಲ್ಲಿ ವಿಜಯನಗರ, ವಿಜಯಪುರ, ತೆಲುಗಣ್ಯ, ಕಾಶ್ಮೀರದೇಶಗಳಿಂದ, ಇಂದರಸಿತ್ಯಾ ಕಾಶಿ ಇಂತಿವಕ್ಕೆ ಒಂದು ವರುಷದತನಕ ದುರ್ಭಿಕ್ಷೆಯು, ಜಯವು. ಪ್ರಜಗಳಿಗೆ ಪೀಡೆಯು, ರಾಜ್ಯಕ್ಕೆ ಭಯವಿಲ್ಲ

# ೪೭ ಪ್ರಮಾದಿಸಂವತ್ಸರ ಪಲ

ಬುಧ ಸ್ವಾಮಿ; ಆಷಾಢದಲ್ಲಿ ಮಳೆಯು, ಸುಭಿಕ್ಷೆಯು. ಶ್ರಾವಣದಲ್ಲಿ ಕಾಶಿಯತನಕ ಮಳೆಯು ಆಗುವದು. ಜ್ವರಭಯ; ಕರಿಪು, ವಿದುಳಧಾನ್ಯ

ಪ್ರಚುರ. ನದಿ ಪ್ರಹರವಾಗುವವು. ಸಾಳಿ, ತಿಲ ಸಾಮಾನ್ಯ. ಭಾದ್ರಪದ ಮಾಸದಲ್ಲಿ ಮಹಾ ಬೆಟ್ಟ ವಿನಾಶವು, ಜರಿದು ಬಿದ್ದಾವು. ಹಸ್ತಿನಾಪುರ ದೇಶವು ವಿನಾಶ. ಗಂಗಾಸಾಗರ ಪ್ರತಿದೇಶ ಮಳೆಯಾಗುವದು. ಆಶ್ವಿಜ, ಕಾರ್ತಿಕ, ಮಾರ್ಗಶಿರ, ಪುಷ್ಯದಲ್ಲಿ ಸಮಸ್ತ ಕ್ಷತ್ರಿಯರಿಗೆ, ದಕ್ಷಿಣದೇಶ, ಮಧ್ಯದೇಶ ವಿನಾಶ. ಮಾಘ, ಫಾಲ್ಗುಣದಲ್ಲಿ ಕ್ಷತ್ರಿಯರಿಗೆ ಹೀನ. ಚೈತ್ರ, ವೈಶಾಖ, ಜ್ಯೇಷ್ಠದಲ್ಲಿ ಸಮಸ್ತ ಧಾನ್ಯ ಪ್ರೀಯವು. ರಾಜ್ಯದೊಳಗೆ ಮಹಾ ಯುದ್ಧವು

# ೪೮ ಆನಂದಸಂವತ್ಸರ ಫಲ

ಗುರು ಸ್ವಾಮಿ ; ಆಷಾಢಮಾಸದಲ್ಲಿ ಮಳೆ–ಬೆಳೆಯು ಸುಭಿಕ್ಷವು. ಶ್ರಾವಣಮಾಸದಲ್ಲಿ ಮಹಾ ಮಳೆಯು. ಭಾದ್ರಪದಮಾಸದಲ್ಲಿ ಸಮಸ್ತ ಧಾನ್ಯ ಸುಭಿಕ್ಷ. ಆಶ್ವಿಜಮಾಸದಲ್ಲಿ ಮಳೆ–ಬೆಳೆ ಸುಭಿಕ್ಷ ಕಾಲದೊಳಿತು. ರಸವರ್ಗಂಗಳು ಪ್ರೀಯವು ಕಾರ್ತಿಕ, ಮಾರ್ಗಶೀದಲ್ಲಿ ಸುಭಿಕ್ಷೆಯು, ಭಯವು. ಪುಷ್ಯದಲ್ಲಿ ಸುಭಿಕ್ಷ. ದಕ್ಷಿಣ ಶುದ್ಧದಿಕ್ಕಿನಲ್ಲಿ ಹೀನವು. ಮಾಘ ಮಾಸದಲ್ಲಿ ಸಾಮಾನ್ಯ, ಸಮಸ್ತಕ್ಕೆ ಸುಭಿಕ್ಷೆಯು. ಫಾಲ್ಗುಣ, ಚೈತ್ರದಲ್ಲಿ ಜೋಳ, ಗೋದಿ, ಕಡ್ಲಿ ಸುಭಿಕ್ಷ ಬೆಳೆಯು. ವೈಶಾಖ, ಜ್ಯೇಷ್ಠದಲ್ಲಿ ಭೂಮಿ ಕಂಪಿಸುವದು, ಕಂಪನ ಬಲು ಕುಪತನವು.

# ೪೯ ರಾಕ್ಷಸಸಂವತ್ಸರ ಫಲ

ಶುಕ್ರ ಸ್ವಾಮಿ; ಆಷಾಢದಲ್ಲಿ ಮಳೆಯಾಗುವದು. ಶ್ರಾವಣದಲ್ಲಿ ಸುಭಿಕ್ಷೆಯು. ಭಾದ್ರಪದದಲ್ಲ ಸುಭಿಕ್ಷೆಯು. ಆಶ್ವಿಜದಲ್ಲಿ ಧಾನ್ಯಪ್ರೀಯ. ಕಾರ್ತಿಕದಲ್ಲಿ ಮಹಾ ಮಳೆಯು. ಮಾರ್ಗಶಿರಮಾಸದಲ್ಲಿ ಸಮಸ್ತ ಧಾನ್ಯಕ್ಕೆ ಸುಭಿಕ್ಷೆಯು. ಪುಷ್ಯದಲ್ಲ ಕಾಶ್ಮೀರದೇಶ ವಿನಾಶವು. ಮಾಘಮಾಸದಲ್ಲಿ ಭಯ. ಫಾಲ್ಗುಣಮಾಸದಲ್ಲಿ ನಗರಿಗೆ ಪೀಡೆಯು. ಚೈತ್ರಮಾಸದಲ್ಲಿ ಗುಜ್ಜರದೇಶಕ್ಕೆ ಮಹಾ ಸುಭಿಕ್ಷವು. ವೈಶಾಖದಲ್ಲಿ ವಾಣಿಜ್ಯರಿಗೆ ವ್ಯಾಪಾರ ವಾಗುವದು. ಜ್ಯೇಷ್ಠಮಾಸದಲ್ಲಿ ಮಹಾ ಸುಭಿಕ್ಷೆಯು.

# ೫೦ ನಳಸಂವತ್ಸರ ಫಲ

ಶನಿ ಸ್ವಾಮಿ; ಆಷಾಢ, ಶ್ರಾವಣದಲ್ಲಿ ಸುಭಿಕ್ಷೆಯು, ಮಳೆ-ಬೆಳೆ ಸುಖ. ಭಾದ್ರಪದಮಾಸದಲ್ಲಿ ಬೊಂಬೆರದೇಶಕ್ಕೆ ಛತ್ರಭಂಗವಾಗುವದು. ಕರಿಪು ಬೆಳೆ ಮಂದ; ಶುಭ ಲಾಭ. ಆಶ್ವಿಜಮಾಸದಲ್ಲಿ ಅನಾವೃಷ್ಟಿ. ತುಪ್ಪ, ಹಾಲು ಪ್ರಿಯಾ. ಪುಷ್ಯಮಾಸದಲ್ಲಿ ಎಲ್ಲಾ ವಸ್ತು ಸುಭಿಕ್ಷ ಗಜದಂತೆ ಬಿಳಿಯ ಹೊದಿಕೆಯು, ಸುಭಿಕ್ಷ. ಮಾಘಮಾಸದಲ್ಲಿ ಪಂಚವರ್ಣಾ, ತತೆ ಕಾಶಿ ಸುಭಿಕ್ಷ. ಸುಭಂಗ ಪಂಚಪತ್ನಿ ತನ್ನ ಮರಣ ಸಮಯೋಗ್ಯ. ಫಾಲ್ಗುಣದಲ್ಲಿ ಮಹಯತಪರಂ. ಚೈತ್ರ, ವೈಶಾಖ, ಜ್ಯೇಷ್ಠದಲ್ಲಿ ಧಾನ್ಯ ಪ್ರೀಯವು.

# ೫೧ ಪಿಂಗಳಸಂವತ್ಸರ ಫಲ

ರಾಹು ಸ್ವಾಮಿ; ಆಷಾಢದಲ್ಲಿ ರಾಜರು ವೃಷ್ಟಿಯೆಂಬೋ ಮಹಾ ದುಸ್ಕಾರವು, ವರುಷ ಒಂದು ಪುಣ್ಯದಿಂದ ಬೆಳೆದೀತು ಶ್ರಾವಣದಲ್ಲಿ ನದಿ ಪ್ರಹರವಾದಾವು. ಭಾದ್ರಪದಮಾಸದಲ್ಲಿ ಧಾನ್ಯ ಬಹಳ ಧಾರಣೆಯಿಂದ ಪ್ರವರ್ತಿಸುವದು. ಸಾಳಿ, ವಿದುಳಧಾನ್ಯ ಮಧ್ಯಮು. ಆಶ್ವಿಜ, ಕಾರ್ತಿಕ, ಮಾರ್ಗಶಿರಮಾಸದಲ್ಲಿ ಧಾನ್ಯಪ್ರೀಯ. ಪುಷ್ಯಮಾಸದಲ್ಲಿ ಗಂಗೆ ತೀರದಿಂದ ಉತ್ತರ ಸುಭಿಕ್ಷ ಮಾಘಮಾಸದಲ್ಲಿ ಸುಭಿಕ್ಷ ಫಾಲ್ಗುಣದಲ್ಲಿ ರಾಜರಿಗೆ ಉಪದ್ರ. ಚೈತ್ರ, ವೈಶಾಖದಲ್ಲಿ ಎಲ್ಲರಿಗೆ ಆಗುವದು, ಭಯುವಿಲ್ಲವು. ದೇಶ ಸುಭಿಕ್ಷ ಜ್ಯೇಷ್ಠಮಾಸದಲ್ಲಿ ಎಲ್ಲ ಅರಸರು, ಸಮಸ್ತರಿಗೆ ಸುಭಿಕ್ಷವು.

# ೫೨ ಕಾಳಯುಕ್ತಿಸಂವತ್ಸರ ಫಲ

ಕೇತು ಸ್ವಾಮಿ; ಆಷಾಢದಲ್ಲಿ ಮಳೆ-ಬೆಳೆ ಸುಭಿಕ್ಷ ಶ್ರಾವಣದಲ್ಲಿ ಕಂಡಲಮಂಡಲ. ಭಾದ್ರಪದಮಾಸದಲ್ಲಿ ಸಾಳಿ ಬೆಳಸು ಮಧ್ಯಮು. ಆಶ್ವಿಜ ಮಾಸದಲ್ಲಿ ಎಳ್ಳು ಉಂಟು, ಮಳೆಯಾಗುವದು. ಕಾರ್ತಿಕ, ಮಾರ್ಗಶಿರದಲ್ಲಿ

ಮಳೆ ಮಂದವು. ರಸವರ್ಗಂಗಳು ಸುಭಿಕ್ಷ. ಗುಜ್ಜರದೇಶಕ್ಕೆ ವಾತರೋಗ, ಕೆಟ್ಟಮಂದಿಯ ಕಾಲವಾಗುವದು. ಪುಷ್ಯದಲ್ಲಿ ಪಂಚಂಗ ಪತನಂ. ಪಟಕ, ಅರಗು, ಕಾರೀಕ, ಎಲಿ, ಮಂಜಿಷ್ಟ, ಲವಣ, ಕರ್ಪುರ ವರಷಪರ್ಯಂತರ ಸುಭಿಕ್ಷ. ಫಾಲ್ಗುಣದಲ್ಲಿ ಘಾಳಿಯಿಂದ, ಮರದಘಾಳಿಯಿಂದ ರಾಜ ವೃಷ್ಟಿಯು. ಚೈತ್ರಮಾಸದಲ್ಲಿ ಮನುಷ್ಯರಿಗೆ ರೋಗ ಉಂಟು. ಶ್ವೇತವಸ್ತ್ರ ಪ್ರೀಯಾ. ಶತಬಂದದೇಶ ವಿನಾಶನ. ವೈಶಾಖ, ಜ್ಯೇಷ್ಠಮಾಸದಲ್ಲಿ ದನ-ಕರುವಿಗೆ ಹೀನ.

## ೫೩ ಸಿದ್ಧಾರ್ಥಿಸಂವತ್ಸರ ಫಲ

ರವಿ ಸ್ವಾಮಿ; ಆಷಾಢದಲ್ಲಿ ಮಳೆಯು. ಶ್ರಾವಣದಲ್ಲಿ ಮನುಷ್ಯರಿಗೆ ವ್ಯಾಧಿ, ಮರಣ. ಧಾನ್ಯ ಪ್ರೀಯಾ. ಭಾದ್ರಪದಮಾಸದಲ್ಲಿ ವಿಜಯಪುರದ ಪಟ್ಟದಕಡಿಗೆ ಮಳೆಯಿಲ್ಲ. ಆಶ್ವಿಜಮಾಸದಲ್ಲಿ ಲವಣ ಪ್ರೀಯಾ. ಉತ್ತರ ದೇಶದಲ್ಲಿ ನೃಪತಿಕುಲ ಮರ್ದನಂ. ಪುಷ್ಯಮಾಸ ಸಮ. ಜ್ಯೇಷ್ಠ, ಮಾಘ ಮಾಸದಲ್ಲಿ ಪ್ರಭುವಡದೇಶದಲ್ಲಿ ಸುಭಿಕ್ಷೆಯು. ಫಾಲ್ಗುಣದಲ್ಲಿ ಸುಭಿಕ್ಷ, ಮನುಷ್ಯರಿಗೆ ವ್ಯಾಧಿ ಚೈತ್ರಮಾಸದಲ್ಲಿ ಬ್ಯಾಡರ ಹಾವಳಿ ಆದೀತು. ಕಾಳಿಂಗದೇಶದಲ್ಲಿ ಜಮಳಪುರ ಅಂತರ್ವೇದ ಶನಿ ಇದ್ದಾನು. ವೈಶಾಖ, ಜ್ಯೇಷ್ಠದಲ್ಲಿ ಸುಭಿಕ್ಷೆಯು.

## ೫೪ ರೌದ್ರಿಸಂವತ್ಸರ ಫಲ

ಚಂದ್ರ ಸ್ವಾಮಿ; ಆಷಾಢದಲ್ಲಿ ಮಳೆ ಬೆಳೆಸು ಫಲವಾದಾವು. ಶ್ರಾವಣದಲ್ಲಿ ಸುಭಿಕ್ಷವು. ರಸಭಂಡವಲ ಪ್ರಿಯಾ. ಧಾನ್ಯ, ಸಾಳಿ ಬೆಳೆಸು ಮಂದವು, ಎಳ್ಳು ಸಮೃದ್ಧಿ. ಆಶ್ವಿಜಮಾಸದಲ್ಲಿ ಮಳೆ ಮಹಾ ಸಂತೋಷ. ಕಾರ್ತಿಕದಲ್ಲಿ ಸುಭಿಕ್ಷವು, ವನವಿಗ್ರಹಮಂ. ಮಾರ್ಗಶಿರಮಾಸದಲ್ಲಿ ರಾಜೇಕರಾಜ್ಯ ಹಾಳಕ್ಕಂ. ಮಾಘಮಾಸದಲ್ಲಿ ಪಂಚಂಗ ಪತನವು. ಫಾಲ್ಗುಣ, ಚೈತ್ರ, ವೈಶಾಖದಲ್ಲಿ ಸುಭಿಕ್ಷೆಯು. ಜ್ಯೇಷ್ಠದಲ್ಲಿ ಸಾಮಾನ್ಯವು. ಮಧ್ಯದೇಶ, ದ್ವಾಪರ ದುರ್ಭಿಕ್ಷ ಎತ್ತಿಗೆ ರೋಗವು. ಚಂಪುರದೇಶ ಪರ್ಯಂತರದೇಶ ದ್ರುಷ್ಟಮಂ.

# ೫೫ ದುರ್ಮತಿಸಂವತ್ಸರ ಪಲ

ಮಂಗಳ ಸ್ವಾಮಿ; ಆಷಾಢಮಾಸದ ಕೃಷ್ಣಪಕ್ಷದಲ್ಲಿ ಮಹಾ ಮೇಘ, ಧಾನ್ಯಪ್ರಿಯಾ. ಶ್ರಾವಣದಲ್ಲಿ ಮಹಾವೃಷ್ಟಿ, ಸದಾ ಸುಖಿ. ಭಾದ್ರಪದ ಮಾಸದಲ್ಲಿ ಲಿಟದೇಶ ಕಂಡಲಮಂಡಲ. ಗುಜ್ಜರದೇಶದಲ್ಲಿ ಕೆಲವು ದೇಶ ಹಾಳಕ್ಕುಂ. ಸಾಳಿ, ಎಳ್ಳು ಬೆಳೆದಾವು. ಕರಿಪು ಮಂದ. ಆಶ್ವಿಜಮಾಸದಲ್ಲಿ ಹೇಮ, ರತ್ನ, ಹವಳ ಪ್ರಿಯಾ. ಕಾರ್ತಿಕ, ಮಾರ್ಗಶಿರ, ಪುಷ್ಯದಲ್ಲಿ ಸಣ್ಣ ಧಾನ್ಯ ಸಾಮಾನ್ಯವು. ವಿದುಳ ಧಾನ್ಯ ಬೆಳೆಯು ಗೋದಿ, ಕಡ್ಲಿ, ಕೆಂಪುಧಾನ್ಯ ಬೆಳೆಯು ಆದಾವು. ಮಾಘಮಾಸದಲ್ಲಿ ದಕ್ಷಿಣದೇಶ ವಿನಾಶವು. "ಸೌರಾಷ್ಟ್ರದೇಶ ಹೇಮಪಂಚಾಂಗವರ್ಣ ಫಾಲ್ಗುಣ ಚೈತ್ರ ವೃಷತೇಚ ಯತಕ್ರಮಂ" ಚೈತ್ರಮಾಸದಲ್ಲಿ ಸಮಸ್ತ ಸುಭಿಕ್ಷವು. ಸರ್ವದೇಶಕ್ಕೆ ಸುಭಿಕ್ಷ. ವೈಶಾಖ, ಜ್ಯೇಷ್ಠಮಾಸದಲ್ಲಿ ಪೂರ್ವಸರಾಪರ್ಯಂತರ ದುರ್ಭಿಕ್ಷ.

# ೫೬ ದುಂದುಭಿಸಂವತ್ಸರ ಪಲ

ಬುಧ ಸ್ವಾಮಿ; ಆಷಾಢದಲ್ಲಿ ಮಹಾ ಮಳೆ, ಮಹಾ ಸುಭಿಕ್ಷ. ಶ್ರಾವಣ ಭಾದ್ರಪದದಲ್ಲಿ ಮಳೆ ಕಂಡಲಮಂಡಲ. ಆಶ್ವಿಜಮಾಸದಲ್ಲಿ ಅಂಧಕಾರವು. ಕಾರ್ತಿಕ, ಮಾರ್ಗಶಿರದಲ್ಲಿ "ಸಜಲಮರುತಾಪುರಂ ನಾದುಲಾಯತಂಡೆ ಅಸಸಲಾಯುಕೊಟ್ಟಮೇವಚಃ || ಅರ್ಭದಕೋಶವ ಯುಶವಂತ ಪೂಮಾ-ಸಿರಂತೆ, ಯತಸರಮತೆ ಮಂದ ಮೇಘನಂ ಸೋಯದೆ ವಾಪಿ ||" ಪುಷ್ಯ, ಮಾಘದಲ್ಲಿ ನಾನಿವತ್ಸ್ಯಶ್ಯಾ ಸುಭಿಕ್ಷಂ "ಫಾಲ್ಗುಣೇ ಸಾಯುತವಾಪಿ ಸರಿಕೆರ ವಿನಾಶನಂ | ವಿವಾದೋ ಲಯತೆ ಸಂಹವಿಗ್ರಹೆ ಸತತಾಟ್ | ಚೈತ್ರಮಾಸೆ ಯುತವಾಪಿ ಸರ್ವೋದ್ರೋತಂ ಕ್ರಮಾಶ್ರಿತಂ ||" ಈ ಸಂದೇಹ ವಸ್ತ್ರನಂ. ವೈಶಾಖದಲ್ಲಿ ಧಾನ್ಯನಾಶನಂ, ಮನುಷ್ಯರಿಗೆ ಭಯವು. ಜ್ಯೇಷ್ಠಮಾಸದಲ್ಲಿ ಬೆಂಕಿಯ ಭಯ, ಕಷ್ಟ ಮೇಘನಂ. ಮಂದವೆಲ್ಲ ಸುಭಿಕ್ಷವು.

# ೫೭ ರುಧಿರೋದ್ಗಾರಿಸಂವತ್ಸರ ಫಲ

ಗುರು ಸ್ವಾಮಿ; ಆಷಾಢದಲ್ಲಿ ಬಹು ಮೇಘ, ಸುಭಿಕ್ಷ ಶ್ರಾವಣದಲ್ಲಿ ಸುಭಿಕ್ಷವು. ಭಾದ್ರಪದದಲ್ಲಿ ಈಶಾನ್ಯ ವಾಯು ಬೀಸೀತು. ಕರಿಪು ಸಾಮಾನ್ಯ ಬೆಳೆಯು. ತಿಲಮಂ ಆದೀತು ಅರಸುಗಳಿಗೆ ಭಯವು. ದುರ್ಗಂಗಳಿಗೆ ಮುತ್ತಿಗಿ ಆದಾವು. ಕುರುಕ್ಷೇತ್ರದ ರಸಜಾತ ವಿವದಿಕ್ಕಂ. ಆಶ್ವಿಜಮಾಸದಲ್ಲಿ ವಿಸಾದೇತ ಸರ್ವದೇಶ ವಿನಾಶನಂ. ಉಳಿದ ದೇಶ ಸುಭಿಕ್ಷವು. ಕಾರ್ತಿಕ, ಮಾರ್ಗಶಿರ, ಪುಷ್ಯಮಾಸದಲ್ಲಿ ಧಾನ್ಯಪ್ರೀಯವು. ಪುಷ್ಯದಲ್ಲಿ ದನಕ್ಕೆ ಸುಭಿಕ್ಷವು, ವಾಯು ಪ್ರಚುರ, ಹುನ್ಯತಲವಣಂ. ಧಾನ್ಯ, ಹೇಮ, ಕರ್ಪುರ ಸಮ. ಗಜದಂತಾಮುಯು ಕೆಂಪಿನ ವಸ್ತ್ರ ಪ್ರೀಯು. ಮಾಘ, ಫಾಲ್ಗುಣದಲ್ಲಿ ಮೇಲಂಚಮಾರ್ಗದಿಂದ ಸಯಾ ವಚಃ. ಚೈತ್ರ ಮಾಸದಲ್ಲಿ ರೋಗ ಪ್ರವರ್ತಿಸುವದು. ಮನುಷ್ಯರಿಗೆ ಪೀಡೆ ಬಹಳ. ಜ್ಯೇಷ್ಠ ಮಾಸದಲ್ಲಿ ಯುತದೇಶ ವಿನಶ್ಯತಿ. ಯಮುನಾತಟಾಕ ಅಂತರ್ವೇದಯಾತ ವಪಿ ರಮತಿ ರವಿಪುತ್ರಕಂ

# ೫೮ ರಕ್ತಾಕ್ಷಿಸಂವತ್ಸರ ಫಲ

ಶುಕ್ರ ಸ್ವಾಮಿ; ಆಷಾಢದಲ್ಲಿ ಮಳೆಯು. ಶ್ರಾವಣ. ಭಾದ್ರಪದದಲ್ಲಿ ಧಾನ್ಯಪ್ರೀಯು. ಕೃಷ್ಣಪಕ್ಷದಲ್ಲಿ ಮಹಾ ಮಳೆ. ಸಾಳಿ, ಸವಣೆ ಮಂದ. ಆಶ್ವಿಜಮಾಸದಲ್ಲಿ ವಾಪವಿನಾಶನಂ, ವಿಷ್ಟಿ ಬಹಳ. ಕಾರ್ತಿಕ, ಮಾರ್ಗಶಿರ, ಪುಷ್ಯಮಾಸದಲ್ಲಿ ಕೆಂಪುಬದುಕು ಸಹ ವಿನಾಶನವಾದಾವು. ಮಾಘ, ಫಾಲ್ಗುಣದಲ್ಲಿ ದೇಶಭಂಗ, ಜಯು. ಚೈತ್ರದಲ್ಲಿ ಸರ್ವ ಸಂಹಾರವು. ವಿಚಾರ ಗ್ರಹಮೇವಚಃ, ಮನುಷ್ಯರಿಗೆ ಮರಣ. ವೈಶಾಖದಲ್ಲಿ ಕೆಲವು ದೇಶಗಳು ಹಾಳಕ್ಕುಂ ಮೊಗಲರಾಜ್ಯ ಪ್ರಬಲವಾದೀತು, ಭಂಗವಾಗುವದು. ಮಂಜಿಷ್ಟಪುರಾಂತರಕ್ಕೆ. ಜ್ಯೇಷ್ಟಮಾಸದಲ್ಲಿ ಧಾನ್ಯ ಪ್ರಿಯುವು.

# ೫೯ ಕ್ರೋಧಸಂವತ್ಸರ ಫಲ

ಶನಿ ಸ್ವಾಮಿ; ಆಷಾಢದಲ್ಲಿ ಮಳೆ, ದಕ್ಷಿಣದೇಶಕ್ಕೆ ದುರ್ಭಿಕ್ಷ, ಉತ್ತರಪ್ರಾಂತವು ಸುಭಿಕ್ಷ ಶ್ರಾವಣದಲ್ಲಿ ಮಳೆ ಕಂಡಲಮುಂಡಲ, ವಾಯು

ಪ್ರಬಲಂ, ಮರಗಳು ಮುರಿದು ದುರ್ಭಿಕ್ಷ. ಮಾರ್ಗವಿಯೋಗದಿಂದ ಚರ ಜಾತಿ ವಿನಾಶನಂ ಭಾದ್ರಪದಮಾಸದಲ್ಲಿ ರಸವರ್ಗ ಪ್ರಿಯವು, ಮಳೆ ಪ್ರಚುರವು. ಸಾಳಿ ಬೆಳಸು, ಅಗ್ಗವು. ಹೇಮರೂಪ ಬಹು ಮಾನ್ಯತೆ. ಹತ್ತಿ, ಲವಣ, ತಿಲ, ನವಣೆ ಆಗದು; ಜೋಳದ ಬೆಳೆಯು ಆದಾವು. ಲೋಕದೊಳು ದ್ರವ್ಯವಿಪತ್ತಿಗಳಾದಾರು. ಕಾರ್ತಿಕ, ಮಾರ್ಗಶಿರದಲ್ಲಿ ಕೊಂಕಣದೇಶರಾಜ್ಯ ವಿದಂದ ವಿನಾಶನಂ, ಮಧ್ಯದೇಶ ವಿಕಾರ. ಪುಷ್ಯ ಮಾಸದಲ್ಲಿ ಅರಸುಗಳಿಗೆ ಮರಣವು. ಚೈತ್ರಮಾಸ ಭಯ, ಕ್ಷತ್ರಿರಾಜರಿಗೆ ಲೇಸು. ವೈಶಾಖ, ಜ್ಯೇಷ್ಠದಲ್ಲಿ ಜೋಳಕ್ಕೆ ಧಾರಣೆ ಚಿತ್ರ ವಿಚಿತ್ರದ ಸುದ್ದಿಗಳಾದಾವು. ಪ್ರಜಗಳಿಗೆ ವಿನಾಶನವು.

## ೬೦ ಕ್ಷಯಸಂವತ್ಸರ ಫಲ

ರಾಹು ಸ್ವಾಮಿ; ಆಷಾಢದಲ್ಲಿ ಮಳೆ-ಬೆಳೆಗಳಕ್ಕುಂ ಪಶುಗಳಿಗೆ ಕರಮುಂ, ಮನುಷ್ಯರಿಗೆ ಲಯವಕ್ಕುಂ, ನಾನಾ ಜಾತಿ ವಿರೋಧಕ ಪುಟ್ಟು ವದು, ಧಾನ್ಯ ಮಾರಾಟವಾಗುವದು, ದೇಶಕ್ಕೆ ರಾಜಬಾಧೆ ಪಿರಿದಕ್ಕುಂ. ಕುರುಕ್ಷೇತ್ರದೇಶಕ್ಕೆ ಬಾಧನಕ್ಕುಂ. ವಾಯು ಬೀಸೀತು. ಎಲ್ಲ ಲೋಕಕ್ಕೆ ಅಲ್ಪ ಸುಭಿಕ್ಷ ಆದೀತು. ಮಾರ್ಗಶಿರದಲ್ಲಿ ಭತ್ತದ ಧಾರಣೆ ಆದೀತು ಪುಷ್ಯಮಾಸದಲ್ಲಿ ಮಳೆಯು ಆದೀತು. ಫಾಲ್ಗುಣದಲ್ಲಿ ಉತ್ತರದೇಶಕ್ಕೆ ರಾಯರು ನಡದಾರು. ಚೈತ್ರದಲ್ಲಿ ಉತ್ತುಮವಾದೀತು. ವೈಶಾಖದಲ್ಲಿ ವಿಘ್ನವಾದೀತು. ಭೂಮಿಗೆ ಹೊಸ ರಾಯನು ಆದಾನು. ಜ್ಯೇಷ್ಠದಲ್ಲಿ ರಾಜ್ಯದೊಳಗೆ ಮಹಾ ಮರ್ಕಟವಾದೀತು.



# ನಕ್ಷತ್ರ ಫಲಗನ್ನಡಿ



| | | | | | |
|---|---|---|---|---|---|
| ೧ | ಚು ಚೆ ಚೊ ಲಾ | ಅಶ್ವಿನಿ | ೧೫ | ರು ರೆ ರೊ ತಾ | ಸ್ವಾತಿ |
| ೨ | ಲಿ ಲು ಲೆ ಲೊ | ಭರಣಿ | ೧೬ | ತಿ ತು ತೆ ತೊ | ವಿಶಾಖಾ |
| ೩ | ಅ ಯಿ ಯು ಯೊ | ಕೃತ್ತಿಕಾ | ೧೭ | ನಾ ನಿ ನು ನೆ | ಅನುರಾಧಾ |
| ೪ | ವಾ ವ ವಿ ವೊ | ರೋಹಿಣಿ | ೧೮ | ನೊ ಯಾ ಯಿ ಯು | ಜ್ಯೇಷ್ಠ |
| ೫ | ವೆ ವೊ ಕಾ ಕಿ | ಮೃಗಶಿರ | ೧೯ | ಯೆ ಯೊ ಬಾ ಬಿ | ಮೂಲಾ |
| ೬ | ಕು ಘ ಜ ಛ | ಆರಿದ್ರಾ | ೨೦ | ಭು ಧಾ ಭಾ ಡ | ಪೂರ್ವಾಷಾಢ |
| ೭ | ಕೆ ಕೊ ಹಾ ಹಿ | ಪುನರ್ವಸು | ೨೧ | ಬೆ ಬೊ ಜಾ ಜಿ | ಉತ್ರಾಷಾಢ |
| ೮ | ಹೂ ಹೆ ಹೊ ಡಾ | ಪುಷ್ಯ | ೨೨ | ಜ ಜೆ ಜೊ ಕಾ | ಅಭಿಜಿತು |
| ೯ | ಡಿ ಡು ಡೆ ಡೊ | ಆಶ್ಲೇಷ | ೨೩ | ಖಿ ಖು ಖೆ ಖೊ | ಶ್ರವಣ |
| ೧೦ | ಮಾ ಮಿ ಮು ಮೆ | ಮಘಾ | ೨೪ | ಗಾ ಗಿ ಗು ಗೆ | ಧನಿಷ್ಠಾ |
| ೧೧ | ಮೊ ಟ ಟಿ ಟು | ಹುಬ್ಬ | ೨೫ | ಗೊ ಸಾ ಸಿ ಸು | ಶತತಾರಾ |
| ೧೨ | ಟೆ ಟೊ ಪಾ ಪಿ | ಉತ್ರ | ೨೬ | ಸೆ ಸೊ ದಾ ದಿ | ಪೂರ್ವಾಭಾದ್ರಪದ |
| ೧೩ | ಪು ಷ ಣ ಠ | ಹಸ್ತಾ | ೨೭ | ದು ಸ ಜಾ ತ | ಉತ್ರಭಾದ್ರಪದ |
| ೧೪ | ಪೆ ಪೊ ರಾ ರಿ | ಚಿತ್ತಾ | ೨೮ | ದೆ ದೊ ಚಾ ಚಿ | ರೇವತಿ |

ಇವು ಇಪ್ಪತ್ತೆಂಟು ನಕ್ಷತ್ರಗಳು ಜನ್ಮನಾಮದ ೧೦೮ ಅಕ್ಷರಗಳು.

## ೧ ಅಶ್ವಿನಿ ನಕ್ಷತ್ರದ ಫಲ

ಚು ಚೆ ಚೊ ಲಾ ಅಶ್ವಿನಿ; ಮೂರು ತಾರೆ, ಕುದುರೆಮುರಿ ಆಕಾರ. ಕರೇವರ್ಣ, ದೇವಗಣ, ಕುಲದಲ್ಲಿ ವೈಶ್ಯ, ೪ ಪಾದದಲ್ಲಿ ಹೆಣ್ಣು, ಬಡದೃಷ್ಟಿ ಸಮತಾರೆ, ಪಕ್ಷಿ ಭೇರುಂಡ, ಅಶ್ವಿನಿನಕ್ಷತ್ರ ಗಮುತಾರೆ, ವ್ಯಾಧಿ ಬಂದರೆ ಶಾಂತಿಯಿಂದ ಲೇಸು, ೮ ದಿವಸಕ್ಕೆ ಪರಿಹಾರ, ರವಿವಾರ ಶುಭಯೋಗ,

ಸೋಮವಾರ ಶಿದ್ಧಿಯೋಗ, ಮಂಗಳವಾರ ಅಮೃತಯೋಗ, ಬುಧವಾರ ಮರಣಯೋಗ, ಬೃಹಸ್ಪತಿವಾರ ಶಿದ್ಧಿಯೋಗ, ಶುಕ್ರವಾರ ಕಂಟಕಯೋಗ, ಶನಿವಾರ ವರ್ಜಯೋಗ. ಹುಬ್ಬಿಯಲ್ಲಿ ಕೆಟ್ಟಗ್ರಹವಿರಲು ಅಶ್ವಿನಿಕೂಡಿದರೆ ಮಹಾ ಶುಭಯೋಗ. ಸಂಕ್ರಾಂತಿ ಆದರೆ ಧಾನ್ಯ ಅಗ್ಗ. ವೈನೆರದರೆ ಭೋಗಿಯಾಹಳು, ಪುತ್ರವಂತಿಹಳು, ಸಂತೋಷವು ಅಶ್ವಿನಿ ನಕ್ಷತ್ರದಲ್ಲಿ ಅನ್ನವನಿಡಲಿಕ್ಕೆ, ಕಿವಿಯುಸೂರಿಸಲಿಕ್ಕೆ, ಹೆಸರು ಇಡಲಿಕ್ಕೆ, ಅನ್ನ-ವಸ್ತ್ರ ಹಾಕಲಿಕ್ಕೆ, ಚಾಮರಹಿಡಿಸಿಕೊಳ್ಳಲಿಕ್ಕೆ, ಕುದುರಿ ಏರಿದಾವ ಶೃಂಗಾರ ಮಾಡಲಿಕ್ಕೆ, ೀಚತುರಂಗ ಮಾರ್ಭಲ ಕೂಡಿಸಲಿಕ್ಕೆ, ನೇಗಿಲಹೊಡಯಲಿಕ್ಕೆ, ಬಿತ್ತಲಿಕ್ಕೆ, ಮನೆಯ ಕಟ್ಟಲಿಕ್ಕೆ, ಶುಭಕಾರ್ಯಮಾಡಲಿಕ್ಕೆ ಲೇಸು. ಶಿಶುವು ಹುಟ್ಟಿದರೆ ದೊಡ್ಡ ದೇಹವುಳ್ಳವನಾಗುವನು, ಕೆಂಚನಾಹನು, ಸೂಕ್ಷ್ಮ ಗುರುವಿನದೇಹ ವಿಶಾಲ ರಾಜೇಜ್ಯನಾಹನು, ಪ್ರಿಯವುಳ್ಳವನಾಹನು, ದುರ್ಜನರಿಗೆ ಗೆಳೆಯನಾಹನು, ಸಂಚಲನಾಹನು, ಟೊಂಕದಲ್ಲಿ ಮಚ್ಚೆ ಉಂಟು. ೪ ವರುಷಕ್ಕೆ ಮೃತ್ಯುಭಯ, ೨೬ ವರುಷಕ್ಕೆ ಮಹಾ ಭಯ. ಇವು ಪರಿಹಾರವಾದರೆ ೮೬ ವರುಷ ಜೀವಿಸುವನು. ಕೇತುಮಹರ್ದಶಾ.

## ೨ ಭರಣಿ ನಕ್ಷತ್ರ ಫಲ

ಲಿ ಲು ಲೆ ಲೊ ಭರಣಿ; ಬಿಳೇವರ್ಣ, ಮೂರು ತಾರೆ, ಆನಿದಿಂಡು ಮನುಷ್ಯಗಣ, ಇಂದ್ರನು ಅಧಿದೇವತಿ, ಚಾಂಡಾಲಜಾತಿ, ಸಿಟ್ಟು ತಾರೆ, ಪಾದ ಊರ್ಧ್ವ ಮುಖ, ಬಡದೃಷ್ಟಿ, ಅರ್ಧತಾರೆ, ಸ್ತ್ರಾನ ಪಟ್ಟಣ, ಅಗ್ನಿಯ ಮಂಡಲ, ನೆಲ್ಲಿಯ ಮರ, ಕಾಗಿ. ಭರಣಿ ನಕ್ಷತ್ರದಲ್ಲಿ ಹುಟ್ಟಿದ ಶಿಶುವು ಕೌರವರಾಯ. ಅಕ್ಷರ ಉಕಾರ. ೨೪ ವಿಷಘಳಿಗಿ. ವಿಷ ಪ್ರಥಮ ಏಳು ಘಳಿಗಿಯ ಕಳೆದು ಅಕ್ಕಿಯ ಹಿಟ್ಟು ಮುದ್ದು ಮಾಡಲ, ಬಡಗಲ ಪೈಣಾ. ವ್ಯಾಧಿಬಂದರೆ ಮರಣ, ಶಾಂತಿಯಿಂದ ಲೇಸು, ೧೧ ದಿವಸಕ್ಕೆ ಪರಿಹಾರ, ಇಲ್ಲವೆ ಮರಣ. ನಕ್ಷತ್ರಯೋಗ– ರವಿವಾರ ಹೀನಯೋಗ, ಸೋಮವಾರ ಗಂಡಯೋಗ, ಮಂಗಳವಾರ ಶುಭಯೋಗ, ಬುಧವಾರ ಕಂಟಕಯೋಗ, ಗುರುವಾರ ಭೃತ್ಯಯೋಗ, ಶುಕ್ರವಾರ ಕಲಹಯೋಗ, ಶನಿವಾರ ಮರಣ ಯೋಗ. ಫಾಲ್ಗುಣಮಾಸದಲ್ಲಿ ಏನಾದರೂ ಉತ್ಪತ್ಯ ಕಂಡರೆ ದುರ್ಭಿಕ್ಷ.

**ಕಾರ್ಯಗಳು—** ಈ ನಕ್ಷತ್ರಲ್ಲಿ ಸಂಕ್ರಾಂತಿಯಾದರೆ ಕೇಡು. ಕಳವು ಮಾಡಲಿಕ್ಕೆ, ಮುಳ್ಳ ಮರ ನೀಡಲಿಕ್ಕೆ, ಒಬ್ಬರ ವಸ್ತು ತೆಗೆದುಕೊಳ್ಳಲಿಕ್ಕೆ, ತೊತ್ತು ಮಾರುವದಕ್ಕೆ, ಹೀನಕಾರ್ಯಕ್ಕೆ ಮಹಾ ಲೇಸು.

ಶಿಶುವು ಹುಟ್ಟಿದರೆ ಚಪಲನಾಹನು, ನಿಪುಣವಾಹನು, ಆಯುಷ್ಯ-ವಂತನಾಹನು, ಓದಿಸುವನು, ಭೋಗಿಯಾಹನು, ಸುಖಭೋಜನ ನಾಹನು, ಸ್ತ್ರೀ ಸಂಭೋಗಿಯಾಹನು, ಕೆಂಪುಕಣ್ಣು, ಶೃಂಗಾರಕ್ಕೆ ಪ್ರಿಯ ವುಳ್ಳವನಾಹನು, ಬಹು ಕಪಟಿ, ನಾಭಿಯಲ್ಲಿ ಸಣ್ಣ ಮಚ್ಛವುಂಟು. ಸೂರ್ಯ ವಂಶ. ೧ ಚರಣಕ್ಕೆ ಹುಟ್ಟಿದವ ಸರ್ವಗುಣ ಸಂಪನ್ನ. ೨ ಚರಣಕ್ಕೆ ಧನವಂತನಾಹನು. ೩ ಚರಣಕ್ಕೆ ಪಟ್ಟದರಿದ್ರ ಕಳ್ಳನಾಹನು. ೪ ಚರಣಕ್ಕೆ ಪುತ್ರವಂತನಾಹನು. ಮಾಡುವ ಕೆಲಸ ಕೆಡಿಸುವನು. ಪ್ರವೀಣನು. ಈ ನಕ್ಷತ್ರದಲ್ಲಿ ಹುಟ್ಟಿದವನು ಶುಕ್ರಮಹರ್ದಶಿ. ಗಂಡಾಂತರವು– ಆರು ತಿಂಗಳಿಗೆ ಶಸ್ತ್ರಭಯ, ೩ ವರುಷಕ್ಕೆ ಭಯ, ೫ ವರುಷಕ್ಕೆ ಜಲಭಯ, ಶೃಂಗಿಭಯ, ೨೩ ವರುಷಕ್ಕೆ ಮೃತ್ಯುಭಯ. ಇವು ಪರಿಹಾರವಾದರೆ ಗೋ ಭಯ. ೮೬ ವರುಷ ಪರಮಾಯುಷ್ಯವಂತನಾಹನು.

## ೩ ಕೃತ್ತಿಕಾ ನಕ್ಷತ್ರದ ಫಲ

ಅ ಯಿ ಯು ಯೆ ಕೃತ್ತಿಕಾ; ತಾರೆ ೬, ಚೇಳಿನ ಆಕಾರ, ಕೆಂಪು ವರ್ಣ, ಹೆಣ್ಣು, ರಾಕ್ಷಸಗಣ, ಈಶಾನ್ಯಾದಿ ದೇವತಿ, ವಿಪ್ರಜಾತಿ, ನಾಲ್ಕು ದೊಡ್ಡ ಕಂಗಳು, ತಾವಿನಲ್ಲಿ ಶೂನ್ಯ, ಅಗ್ನಿಮಂಡಲ, ಅತ್ತಿಯಮರ, ಸಮತಾರೆ, ಪಕ್ಷಿ ನವಿಲು; ವಾಕಾರಾ, ಉಕಾರಾ, ಆಕಾರಾ. ಕೃತ್ತಿಕಾ ನಕ್ಷತ್ರದಲ್ಲಿ ಬಲಭದ್ರದೇವರು ಹುಟ್ಟಿದರು. ೩ ವಿಷಘಳಿಗಿ ಹೀನಕಾರ್ಯಕ್ಕೆ ಲೇಸು. ಕೃತ್ತಿಕದಲ್ಲಿ ಸಜ್ಜಿಯ ಸಲ್ಲಿಸಿ ಪೂರ್ವಕ್ಕೆ, ಉತ್ತರಕ್ಕೆ ಹೋದರೆ ಶುಭ. ವ್ಯಾಧಿ ಬಂದರೆ ಮರಣ, ಅದಕ್ಕೆ ಶಾಂತಿಯಿಂದ ಲೇಸು. ೯ ದಿನಕ್ಕೆ ಪರಿಹಾರ. ಇಲ್ಲದಿದ್ದರೆ ಮರಣ ತಪ್ಪದು. ರವಿವಾರ ದ್ರುಮಯೋಗ, ಸೋಮವಾರ ವಿಷಯೋಗ, ಮಂಗಳವಾರ ಕಲಹಯೋಗ, ಬುಧವಾರ ಯಮಕಂಟಕಯೋಗ, ಗುರುವಾರ ಸಿದ್ಧಿಯೋಗ, ಶುಕ್ರವಾರ ಶೂಲ

ಯೋಗ, ಶನಿವಾರ ಉತ್ತಮಯೋಗ, ಪಂಚಮಿ ಬಂದರೆ ಮರಣ, ಪಾಡ್ಯ ಬರಲು ವರ್ಜಯೋಗ, ಕ್ರೂರಗ್ರಹವಿರಲು ಶೂಲಯೋಗ. ಕಾರ್ತಿಕ ಮಾಸದೊಳು ಏನಾವರೂ ಉತ್ಪತ್ಯಕಂಡರೆ ದುರ್ಭಿಕ್ಷ

**ಕಾರ್ಯಗಳು—** ಕೃತ್ತಿಕಾ ನಕ್ಷತ್ರದಲ್ಲಿ ಚಾಡಾ ಹೇಳಲಿಕ್ಕೆ, ಓಡಿ ಹೋಗಲಿಕ್ಕೆ, ಕಳವುಮಾಡಲಿಕ್ಕೆ, ಜಗಳಮಾಡಲಿಕ್ಕೆ, ಆಯುಧಕೊಳ್ಳಲಿಕ್ಕೆ, ಹೀನ ಬಯಸುವದಕ್ಕೆ, ಊರು, ಕೇರಿ, ಬಣವಿ, ಬಾನ ಸುಡುವದಕ್ಕೆ, ಚಿತ್ರವು ಬರಿಯಲಿಕ್ಕೆ, ಹೀನ ಕಾರ್ಯಗಳಿಗೆ ಫಲವು ಯಗ್ಗಳ ಇಲ್ಲ. ಶಾಂತಿಯಿಂದ ಲೇಸು.

ಶಿಶುವು ಹುಟ್ಟಿದರೆ ತೇಜವುಳ್ಳವನಾಹನು, ಮತಿವಂತನಾಹನು, ಧನಿಕ ಎನಿಸುವನು. ಮೈನೆರದರೆ ತಲೆ ಬಿಳಿದು. ಬ್ರಹ್ಮಸ್ಥಾನದಲ್ಲಿ ಮಚ್ಚೆ ಉಂಟು, ಗಂಭೀರವುಳ್ಳವನಾಹನು, ನೀಳನಾಹನು, ಶಕ್ತಿಯುಳ್ಳವನಾಹನು. ೧ ಚರಣಕ್ಕೆ ದುರ್ಜನನು. ೨ ಚರಣಕ್ಕೆ ಜಗಳಗಂಟನಾಹನು. ೩ ಚರಣಕ್ಕೆ ಮಿತ್ರವ ಬಯಸುವನು. ೪ ಚರಣಕ್ಕೆ ಜಯವಂತನಾಹನು. ವಿದ್ಯವಂತನಾಹನು. ಈ ನಕ್ಷತ್ರದಲ್ಲಿ ಹುಟ್ಟಿದ ಶಿಶುವಿಗೆ ೧ ವರುಷಕ್ಕೆ ಸರ್ಪಿನಭಯ, ಕಣ್ಣಬೇನೆ. ೨೬ ವರುಷಕ್ಕೆ ಮಹಾಭಯ ಇವು ಕಳಿದರೆ ೮೦ ವರುಷ ಬಾಳುವನು. ಸೂರ್ಯನ ಮಹದರ್ಶಾ.

# ೪ ರೋಹಿಣಿ ನಕ್ಷತ್ರದ ಫಲ

ವೂ ವಾ ವಿ ವೊ ರೋಹಿಣಿ; ಕೃಷ್ಣವರ್ಣ, ೫ ತಾರೆ, ಹೆಣ್ಣು ಹಾವು, ಮನಷ್ಯಗಣ, ಬ್ರಹ್ಮನಾದಿದೇವತೆ, ಶೂದ್ರಜಾತಿ, ಊರ್ಧ್ವಮುಖ, ಕಣ್ಣು ಕುರುಡ, ಅರ್ಧಾಕಾರದಲ್ಲಿ ಶ್ವಾನ, ಇಂದ್ರಮಂಡಲ, ಜಂಬುನೀರಲಮರ, ಪಕ್ಷಿ ಗರುಡ. ರೋಹಿಣಿಯಲ್ಲಿ ಹುಟ್ಟಿದವ ವಿಭೀಷಣ ಹುಟ್ಟಿದನು. ಭೀಮ ಹುಟ್ಟಿದನು. ೨೪ ವಿಷಘಳಿಗಿ. ಆದ ಅನ್ನವನುಂಡು ಮಾಡಲು ಹೋಗುವದು. ವ್ಯಾಧಿಬಂದರೆ ಬೊಂಬೆಯಮಾಡಿ ತೋಳು ಮನುಷ್ಯರಹಾಂಗೆ ಮಾಡುವದು. ಕೈಯಲ್ಲಿ ಕಮಂಡಲ ಹಿಡಿಸಬೇಕು.

ಹಂಸವಾಹನ, ಕರಿಯ ವರ್ಣ, ಕರಿಯ ವಸ್ತ್ರ ಹೊದಿಸುವದು, ಹಣೆಯಲ್ಲಿ ಕಸ್ತೂರಿ ತಿಲಕ, ಹಾಲು-ತುಪ್ಪದ ನೈವೇದ್ಯ, ಗಾಯತ್ರಿ ಮಂತ್ರದಿಂದ ಪೂಜೆಯಮಾಡಿ ಜೋಳ, ಕಡ್ಲಿ, ಎಳ್ಳು, ಹೆಸರು, ಉದ್ದು ಇಷ್ಟು ಹಿಟ್ಟು ಕೂಡಿಸಿ ಬೆಸ್ತ್ರಕ ಜಪಾಮಾಡಿ ಅರಿಷ್ಟವಸ್ತ್ರ ಹೊದಿಸಿದರೆ ೭ ದಿನಕ್ಕೆ ಪರಿಹಾರ. ನಕ್ಷತ್ರಯೋಗ- ರವಿವಾರ ಶುಭಯೋಗ, ಸೋಮವಾರ ಶುಭಯೋಗ, ಮಂಗಳವಾರ ನಾಶಯೋಗ, ಬುಧವಾರ ಭಯಯೋಗ, ಗುರುವಾರ ಷಷ್ಠಿ ಬಂದರೆ ಉತ್ಪತ್ಯಯೋಗ ಮತ್ತು ಭಯಯೋಗ, ಶುಕ್ರವಾರ ಯಮಕಂಟಕ ಯೋಗ, ಶನಿವಾರ ಶಿದ್ಧಿಯೋಗ. ಚೈತ್ರಮಾಸದಲ್ಲಿ ಉತ್ಪತ್ಯಕಂಡರೆ ಧಾನ್ಯ ಅಗ್ಗ. ವೈನೆರದರೆ ಗಂಡ ಪ್ರೀತಿಯುಳ್ಳವನು ಆಗುವಳು, ಮಕ್ಕಳ ಹಡಿವಳು. ದೇಹದಲ್ಲಿ ಸುಖಿಯಾಹಳು.

**ಕಾರ್ಯಗಳು—** ರೋಹಿಣಿಯಲ್ಲಿ ಹೆಸರು ಇಡಲಿಕ್ಕೆ, ವಾಹನವ ಏರಲಿಕ್ಕೆ, ವಸ್ತ್ರವ ಹೊದಿಯಲಿಕ್ಕೆ, ಮದುವೆಯ ಮಾಡಲಿಕ್ಕೆ, ವಿದ್ಯಾಭ್ಯಾಸ ಮಾಡಲಿಕ್ಕೆ, ಶಸ್ತ್ರವಿದ್ಯ ಕಲಿಯಲಿಕ್ಕೆ, ಮನೆ ಕಟ್ಟಲಿಕ್ಕೆ, ಎಮ್ಮಿ ಎತ್ತುಗಳ ಕೊಳ್ಳಲಿಕ್ಕೆ, ಛತ್ರ ಹಿಡಿಸಿಕೊಳ್ಳಲಿಕ್ಕೆ, ಅಂದಣವನೇರಲಿಕ್ಕೆ, ತಪಸ್ಸು ಮಾಡಲಿಕ್ಕೆ, ಅನ್ನಛತ್ರ ಇಡುವದಕ್ಕೆ, ಕಿವಿಯನುರಿಸಲಿಕ್ಕೆ, ತೋಟ್ಟಲ ಕಟ್ಟಲಿಕ್ಕೆ, ದೇವರ ಕೊಳ್ಳಲಿಕ್ಕೆ, ಊರಕಟ್ಟಿಸಲಿಕ್ಕೆ, ಮೇಯಲಿಕ್ಕೆ, ದೇವತಾ ರ್ಚನೆ ಮಾಡಲಿಕ್ಕೆ, ಅನ್ನಶಾಂತಿ, ಮುಂಜಿಯ ಮಾಡಲಿಕ್ಕೆ, ಸ್ತ್ರೀಯರ ಸಂಭೋಗಕ್ಕೆ, ನೇಗಲಹೊಡಿಯಲಿಕ್ಕೆ, ಭೂಮಿಯ ಸಾಗಸಲಿಕ್ಕೆ ಬಿತ್ತಲಿಕ್ಕೆ ಈ ಮೊದಲಾದ ಶುಭಕಾರ್ಯಕ್ಕೆ ಒಳ್ಳೇದು.

ಈ ನಕ್ಷತ್ರದಲ್ಲಿ ಸಂಕ್ರಾಂತಿ ಬಂದರೆ ಧಾನ್ಯ ಅಗ್ಗ. ಶಿಶುವು ಹುಟ್ಟಿದರೆ ತಂದಿ ಸಾವನು, ಹೆಣ್ಣಿಗೆ ಪ್ರೀತಿಯುಳ್ಳವನಾಹನು, ಲಕ್ಷಣವುಳ್ಳವನಾಹನು, ಕಣ್ಣುಬೇನೆ. ಹಸ್ತಾ, ಪಾದಾ, ಕಣ್ಣು, ಹಣೆ ಇಷ್ಟರೊಳಗೆ ಒಂದಕ್ಕೆ ಭಿನ್ನ ನಾಗುವನು. ತಮ್ಮವರೊಳಗೆ ಜಗಳಗಂಟನಾಗುವನು. ೧ ಚರಣಕ್ಕೆ ಪುಟ್ಟಿದವನು ಕೆಂಪು ಕೂದಲು, ಶೂರತ್ವನಾಹನು. ೨ ಚರಣಕ್ಕೆ ನೀಳ ನಾಹನು. ೩ ಚರಣಕ್ಕೆ ಅಧಿಕ ವಿಶ್ವಾಸಿಯಾಹನು. ೪ ಚರಣಕ್ಕೆ ಪರೋಪ ಕಾರಿ ಆಗುವನು. ಚೆಲುವನು. ರೋಹಿಣಿಯಲ್ಲಿ ಹುಟ್ಟಿದ ಶಿಶುವಿಗೆ

ಚಂದ್ರನ ಮಹರ್ದಶೆ ೧ ವರುಷಕ್ಕೆ ಜ್ವರಭಯ. ೬ ವರುಷಕ್ಕೆ ಕಣ್ಣು ಬೇನೆ. ೭ ವರುಷಕ್ಕೆ ಮೃತ್ಯುಭಯ. ಇವು ಪರಿಹಾರವಾದರೆ ೮೬ ವರುಷ ಪರಮಾಯುಷ್ಯವಂತನಾಗುವನು.

## ೫ ಮೃಗಶಿರ ನಕ್ಷತ್ರದ ಫಲ

ವೆ ವೊ ಕಾ ಕಿ ಮೃಗಶಿರ; ಬಿಳೇವರ್ಣ, ತಾರೆ೩, ಸರ್ಪ್ಪ ಒಡದೃಷ್ಟಿ, ವಾಯುಮಂಡಲ, ಬನ್ನಿಯ ಮರ, ಪಕ್ಷಿ ಕೋಳಿ, ೧೪ ವಿಷಘಳಿಗಿ, ಪೈಣಕ್ಕೆ ಶುಭ, ಪೂರ್ವಕ್ಕೆ ವರ್ಜ. ಜ್ವರಬಂದರೆ ಕರಿಯ ಗೊಂಬೆಯ ಭುಜ ಕೈಯಲ್ಲಿ ಕಮಂಡಲು, ಕುದುರೆ ವಾಹನ, ಬಿಳೆ ವಸ್ತ್ರ ಹೊದಿಸಿ ಗಂಧನೈದೆಲೆಯ ಪುಷ್ಪ, ದಶಂಗಧೂಪ, ಪಂಚಾಮೃತದ ನೈವೇದ್ಯ, ಅಷ್ಟ ವಿಧಾರ್ಚನೆ ಷೋಡಶೋಪಚಾರದಿಂದ ಪೂಜೆಮಾಡಿ ಗಾಯತ್ರಿಜಪ ಮಾಡಿದರೆ ,ಗೋದಿಪಾಯಸವಮಾಡಿ ಹೋಮಂಗಳ ಮಂಗಳಮಾಡಿಸಿ ಕ್ಷವಬಲಿಯ ಕೊಡಲು ಪರಿಹಾರವಾಗುವದು. ನಕ್ಷತ್ರಯೋಗ- ರವಿವಾರ ಶುಭಯೋಗ, ಸೋಮವಾರ ಶಿದ್ಧಿಯೋಗ, ಮಂಗಳವಾರ ಚೋರಯೋಗ, ಬುಧವಾರ ಶಿದ್ಧಿಯೋಗ, ಗುರುವಾರ ಹೀನಯೋಗ, ಶುಕ್ರವಾರ ಶೂಲ ಯೋಗ, ಶನಿವಾರ ಯಮಕಂಟಕಯೋಗ. ಉತ್ರಾಷಾಢದಲ್ಲಿ ಕ್ರೂರಗ್ರಹ ವಿರಲು ಮಹಾ ಶೂಲಯೋಗ, ಅಷ್ಟಮಿ ಬಂದರೆ ನಾಶಯೋಗ. ಕಾರ್ತಿಕ ಮಾಸದಲ್ಲಿ ಉತ್ಪತ್ಯ ಕಂಡರೆ ಲೋಕಕ್ಕೆ ಪೈತ್ಯ ಜ್ವರ. ಕಾಮನಬಿಲ್ಲು ಮೂಡಿದರೆ, ಮಳೆಯಾದರೆ ಧಾನ್ಯ ಅಗ್ಗ. ಮೈನೆರದರೆ ಮಕ್ಕಳಫಲ. ಶನಿವಾರ ಮಂಗಳವಾರ ನೆರದರೆ ಗಂಡ-ಹೆಂಡರೊಳಗೆ ಮಿತ್ರರಾಹರು.

**ಕಾರ್ಯಗಳು—** ಮೃಗಶಿರ ನಕ್ಷತ್ರದಲ್ಲಿ ಮೇಯಲಿಕ್ಕೆ, ಹೆಸರು ಇಡುವದಕ್ಕೆ, ಕಿವಿಯನುರಿಸಲಿಕ್ಕೆ, ವಸ್ತ್ರಕೊಳ್ಳಲಿಕ್ಕೆ, ಮುಂಜೆ-ಮದುವೆ ಮಾಡಲಿಕ್ಕೆ, ವೇದ-ಶಾಸ್ತ್ರಭ್ಯಾಸಮಾಡಲಿಕ್ಕೆ, ವಸ್ತ್ರಭೂಷಣ ಧರಿಸಿಕೊಳ್ಳ ಲಿಕ್ಕೆ, ಪಟ್ಟಾಭಿಷೇಕಮಾಡಲಿಕ್ಕೆ, ಹೋಮ ಜಪಮಂತ್ರಗಳ ಕಲಿಯಲಿಕ್ಕೆ, ಆನೆ, ಕುದುರೆ, ಎತ್ತು, ಎಮ್ಮೆ ಕೊಳ್ಳಲಿಕ್ಕೆ; ಭಂಗಾರದ ವಸ್ತು ಮಾಡಿಸ ಲಿಕ್ಕೆ; ಅಂದಣ, ಛತ್ರ-ಚಾಮರ ಹಿಡಿಸಿಕೊಳ್ಳಲಿಕ್ಕೆ, ಕೆರೆ-ಭಾಂವಿ

ಕಟ್ಟಿಸಲಿಕ್ಕೆ, ಬೀಜಬಿತ್ತಲಿಕ್ಕೆ, ತೊಟ್ಟಿಲಕಟ್ಟಲಿಕ್ಕೆ, ನೇಗಲಹೊಡಿಯಲಿಕ್ಕೆ, ಮನೆಯು ಕಟ್ಟುವದಕ್ಕೆ, ಕೋಟೆ ಕಟ್ಟಿಸಲಿಕ್ಕೆ ಇಂಥ ಶುಭಕಾರ್ಯಕ್ಕೆಲ್ಲ ಲೇಸು.

ಈ ನಕ್ಷತ್ರದಲ್ಲಿ ಹುಟ್ಟಿದ ಶಿಶುವು ಭೀತಿವಂತನು, ಗುಣವಂತನು, ಆಯುಷ್ಯವಂತನು, ಬಹು ನಿಷ್ಠ, ಬಿರಸುನುಡಿಯಿಲ್ಲದವನು. ಮಂಗಳ ಮಹರ್ದಶಾ. ೧ ಚರಣಕ್ಕೆ ದೊಡ್ಡ ದೇಹವುಳ್ಳವನಾಗುವನು, ದಾವದ ರಲ್ಲಿಯು ಬಲ್ಲಿದನು. ೨ ಚರಣಕ್ಕೆ ಭೋಗಿಯಾಹನು. ೩ ಚರಣಕ್ಕೆ ಉದಾರವುಳ್ಳವನು. ೪ ಚರಣಕ್ಕೆ ಪರದೇಶಿಯಾಗುವನು, ಶಕ್ತಿಯುಳ್ಳವನು. ೧ ತಿಂಗಳಿಗೆ ಗಂಡಾಂತರವು. ೧ ವರುಷಕ್ಕೆ ವ್ಯಾಧಿ ೪ ವರುಷಕ್ಕೆ ಗಂಡಾಂ ತರವು. ೧೬ ವರುಷಕ್ಕೆ ಅಪಮೃತ್ಯುಭಯ. ಇವು ಪರಿಹಾರವಾದರೆ ೮೪ ವರುಷ ಪರಮಾಯುಷ್ಯವು.

## ೬ ಆರಿದ್ರಾ ನಕ್ಷತ್ರದ ಫಲ

ಕು ಘ ಙ ಛ ಆರಿದ್ರಾ; ರಕ್ತವರ್ಣ, ೧೫-೧ ತಾರೆ, ಹೆಣ್ಣು ನಾಯಿ, ಮನುಷ್ಯಗಣ, ರುದ್ರನಾಧಿದೇವತಿ, ಉಗ್ರತಾರೆ ೫-೪, ಊರ್ಧ್ವ ಮುಖ, ಅರ್ಧತಾರೆ, ಬಡದೃಷ್ಟಿ, ವರುಣಮಂಡಲ, ಕಾರಿಯಮರ, ಪಕ್ಷಿ ಕೋಚೆ, ೨೦-೨೧ ವಿಷಘಳಿಗಿ, ಪ್ರೈಣಕ್ಕೆ ವರ್ಜ ಕಿಂಚಿತ, ೯ ವಿಷಘಳಿಗಿ ಕಳಿದು ಉತ್ತರಕ್ಕೆ ಪೂರ್ವಕ್ಕೆ ಪ್ರೈಣ. ಆರಿದ್ರಾದಲ್ಲಿ ಜ್ವರಬಂದರೆ ೧ ತಿಂಗಳು ಕಷ್ಟ, ವ್ಯಾಧಿಬಂದರೆ ಶಾಂತಿಯಿಂದ ಲೇಸು. ಬಿಳಿಬೊಂಬೆಯು ಎರಡು ಭುಜ, ೩ ಕಣ್ಣು, ಕೈಯಲ್ಲಿ ತ್ರಿಶೂಲಾ, ಎತ್ತಿನವಾಹನ, ಈಶ್ವರನಮಂತ್ರ, ಬಿಳಿಯಗಂಧ, ಭಂಗಾರದ ಉಡಗೆ, ಬಣ್ಣದ ತೊಡಗೆ, ಹೂವಿನಿಂದ ಪೂಜೆಯಮಾಡಿ, ಲೋಭಾನದ ಧೂಪ, ಅಕ್ಕಿಯ ಬಾನದ ನೈವೇದ್ಯ, ಈಶ್ವರನಮಂತ್ರ, ಗಾಯತ್ರಿಮಂತ್ರ ಜಪವಮಾಡಿ ವ್ಯಾಧಿಬಂದವರಿಗೆ ಹಾಲು ತುಪ್ಪ ಕೊಟ್ಟರೆ ತಿಂಗಳಿಗೆ ಪರಿಹಾರ. ನಕ್ಷತ್ರಯೋಗ- ರವಿವಾರ ಮರಣ ಯೋಗ, ಸೋಮವಾರ ಮರಣಯೋಗ, ಮಂಗಳವಾರ ಮೃತ್ಯುಯೋಗ, ಬುಧವಾರ ಸಿದ್ಧಿಯೋಗ, ಗುರುವಾರ ಸಿದ್ಧಿಯೋಗ, ಶುಕ್ರವಾರ ಶುಭ

ಯೋಗ, ಶನಿವಾರ ಕಂಟಕಯೋಗ. ಆರಿದ್ರಾ ೩ ನೇ ಚರಣಕ್ಕೆ ಮೃತ್ಯು ಯೋಗ, ಪೂರ್ವಾಷಾಢದಲ್ಲಿ ಕ್ರೂರಗ್ರಹವಿರಲು ಮಹಾ ಶೂಲಯೋಗ, ಪುಷ್ಯಮಾಸದೊಳು ವರ್ಜ್ಯ. ಆರಿದ್ರಾ ಬಂದದಿನ ಉತ್ಪತ್ಯ ಕಂಡರೆ, ಸಂಕ್ರಾಂತಿಯಾದರೆ, ಮೈನೆರದರೆ ದರಿದ್ರಳಾಗುವಳು, ದುಃಖಿಯಾಗುವಳು.

**ಕಾರ್ಯಗಳು—** ವೈರಿಗಳ ಕೊಲ್ಲುವದಕ್ಕೆ, ಮಾಡುವ ಕೆಲಸ ಕೆಡಿಸ ಲಿಕ್ಕೆ, ಬೆಂಕಿಹಚ್ಚಲಿಕ್ಕೆ, ಕಳವುಮಾಡಲಿಕ್ಕೆ, ಹೀನಕವಿತ್ವ, ಹೀನ ಕಾರ್ಯ ಗಳು ಮಾಡುವದಕ್ಕೆ ಲೇಸು.

ಶಿಶುವು ಹುಟ್ಟಿದರೆ ೧ ಚರಣದಲ್ಲಿ ಹುಟ್ಟಿದವನು ಪ್ರಮುಖ ಜಾಣ ನಾಹನು. ೨ ಚರಣಕ್ಕೆ ಮೂರ್ಖ, ಗರ್ವಿ, ಹುಸಿಯುನಾಡುವನು. ೩ ಚರಣಕ್ಕೆ ಮಂದ ಮೂರ್ಖನಾಹನು. ೪ ಚರಣಕ್ಕೆ ಮಾಡುವ ಕೆಲಸ ಕೆಡಿಸುವನು, ದರಿದ್ರ. ರಾಹುವಿನ ಮಹದರ್ಶಾ. ೭ ದಿವಸಕ್ಕೆ ಗಂಡಾಂತರ. ೭ ವರಷಕ್ಕೆ ಕೆಮ್ಮಿನಭಯ. ೧೫ ವರುಷಕ್ಕೆ ರಾಜಭಯ. ೧೭ ವರುಷಕ್ಕೆ ಚೋರಭಯ, ಶಸ್ತ್ರಭಯ. ೧೮ ವರುಷಕ್ಕೆ ಮಹಾಭಯ ಆರಿದ್ರಾದಲ್ಲಿ ಶಿಶುವು ಹುಟ್ಟಿದರೆ ತಂದೆ-ತಾಯಿ ಸಾವರು, ಇಲ್ಲವೆ ತಾನೇ ಹೋಗುವದು. ಶಾಂತಿಯಿಂದ ಲೇಸು.

## ೭ ಪುನರ್ವಸು ನಕ್ಷತ್ರದ ಫಲ

ಕೆ ಕೊ ಹಾ ಹಿ ಪುನರ್ವಸು; ಕಪ್ಪುವರ್ಣ, ದ್ವಿತಾರಿ, ದೇವಗಣ, ಹೆಣ್ಣು ಬೆಕ್ಕು, ಸೂರ್ಯನಾಧಿದೇವತಿ, ವೈಶ್ಯಜಾತಿ, ಸಮತಾರೆಳ, ವಾಯು ಮಂಡಲ, ಚಿಲ್ಲಾಪುರ, ಮಿಷಮರ, ಪಕ್ಷಿ ಹಂಸ, ಆ ಎಂಬ ಅಕ್ಷರ, ೧೪— ೧೪ ವಿಷಘಳಿಗಿ. ಗಮನಕ್ಕೆ ಹಾಲು ಸೇವಿಸಿ ಪೂರ್ವಕ್ಕೆ ಉತ್ತರಕ್ಕೆ ಹೋಗು ವದು. ವ್ಯಾಧಿಬಂದರೆ ಬೊಂಬಿಯುಮಾಡಿ ನಾಲ್ಕು ತೋಳು, ಕೈಯಲ್ಲಿ ಕಮಂಡಲ, ಸೂರ್ಯನಮಂತ್ರದಿಂದ ಷೋಡಶೋಪಚಾರದಿಂದ ಪೂಜೆಯು ಮಾಡಿದರೆ ವ್ಯಾಧಿಬಂದವರಿಗೆ ಬೆಲ್ಲವಕೊಟ್ಟರೆ ಪರಿಹಾರವಾಗುವದು. ನಕ್ಷತ್ರಯೋಗ— ರವಿವಾರ ಶುಭಯೋಗ, ಸೋಮವಾರ ಸಿದ್ಧಿಯೋಗ,

ಮಂಗಳವಾರ ಸ್ಥಿರಯೋಗ, ಬುಧವಾರ ಭೋಜನಯೋಗ, ಗುರುವಾರ ಅಮೃತಯೋಗ, ಸಿಲಿಯೋಗ, ಶುಕ್ರವಾರ ಹೀನಯೋಗ, ಶನಿವಾರ ಶುಭ ಯೋಗ ಮೃತ್ಯುಯೋಗ, ಮೂಲಾನಕ್ಷತ್ರದಲ್ಲಿ ಕ್ರೂರಗ್ರಹವಿರಲು ಶೂಲ ಯೋಗ, ಜ್ಯೇಷ್ಠದಲ್ಲಿ ಉತ್ಪತ್ಯಕಂಡರೆ ಸಿದ್ಧಿ. ಈ ನಕ್ಷತ್ರದಲ್ಲಿ ಸಂಕ್ರಾಂತಿ ಯಾದರೆ ಧಾನ್ಯ ಅಗ್ಗ, ಮೈನೆರದರೆ ಜಗಳಗಂಟಿ.

**ಕಾರ್ಯಗಳು—** ಈ ನಕ್ಷತ್ರದಲ್ಲಿ ಹೆಸರಿಡಲಿಕ್ಕೆ, ಮದುವೆ-ಮುಂಜಿ ಮಾಡಲಿಕ್ಕೆ, ಅಕ್ಷರ ಮೊದಲಾಗಿ ವೇದ-ಶಾಸ್ತ್ರ ಕಲಿಯಲಿಕ್ಕೆ, ಚಿತ್ರ ಬರೆಯುವದಕ್ಕೆ, ಅಲಂಕಾರ ಇಟ್ಟುಕೊಳ್ಳಲಿಕ್ಕೆ, ವೈದ್ಯ ತಕ್ಕೊಳ್ಳಲಿಕ್ಕೆ, ಮಜ್ಜನಮಾಡಲಿಕ್ಕೆ, ಪಟ್ಟಾಭಿಷೇಕಮಾಡಲಿಕ್ಕೆ, ತಪಸ್ಸುಮಾಡಲಿಕ್ಕೆ, ಅಂದಣವ ಏರುವದಕ್ಕೆ, ಛತ್ರಹಿಡಿಸಿಕೊಳ್ಳಲಿಕ್ಕೆ, ಊರು ಮನೆ ಕಟ್ಟಲಿಕ್ಕೆ ಇಂತಿ ಶುಭಕಾರ್ಯಕ್ಕೆ ಲೇಸು.

ಶಿಶುವು ಹುಟ್ಟಿದರೆ ಸ್ಥೂಲದೇಹನಾಹನು, ಭೋಗಿಯಾಗುವನು, ಆಯುಷ್ಯವಂತನಾಹನು, ಗುರುವಿನ ಮಹದರ್ಶಾ. ೧ ಚರಣಕ್ಕೆ ಪುತ್ರ ವಂತ, ಧರ್ಮವಂತ. ೨ ಚರಣಕ್ಕೆ ತೇಜವುಳ್ಳವ, ಕೀರ್ತಿವಂತನಾಹನು. ೩ ಚರಣಕ್ಕೆ ವಸ್ತ್ರದಲ್ಲಿ ಸುಖಿ. ೪ ಚರಣಕ್ಕೆ ಭಾಗ್ಯವಂತ, ದಾನವಂತ ಎನಿಸುವನು. ಇದರಲ್ಲಿ ಹುಟ್ಟಿದ ಶಿಶುವಿಗೆ ೩ ವರುಷಕ್ಕೆ ಹೊಟ್ಟೆಬೇನೆ, ೫ ವರುಷಕ್ಕೆ ಭಯ, ೬ ವರುಷಕ್ಕೆ ಮಹಾಭಯಾ, ೧೬ ವರಷಕ್ಕೆ ಮೃತ್ಯು ಭಯ. ೭೦ ವರುಷಕ್ಕೆ ಭಯ, ೮೦ ವರುಷಕ್ಕೆ ಕಂಟಕ. ಇವು ಪರಿಹಾರ ವಾದರೆ ೯೦ ವರುಷ ಬಾಳುವನು.

## ೮ ಪುಷ್ಯ ನಕ್ಷತ್ರದ ಫಲ

ಹು ಹೆ ಹೊ ಡಾ ಪುಷ್ಯ; ಬಿಳಿವರ್ಣ, ತಾರೆ ೩, ಅಭಿ ಆಕೃತಿ, ಗಂಡು ಬೆಕ್ಕು, ದೇವಗಣ, ಬ್ರಹಸ್ಪತಿ ಅಧಿದೇವತೆ ೪, ಊರ್ಧ್ವ ಮುಖ, ಸಮದೃಷ್ಟಿ, ಅಗ್ನಿಮಂಡಲ, ಅಸ್ವತ್ಥಮರ, ಪಕ್ಷಿ ಬೆಳ್ಳಕ್ಕಿ, ಪ್ರೈಣಕ್ಕೆ ಶುಭ. ಜ್ವರಬಂದರೆ ೭ ದಿನಕ್ಕೆ ಪರಿಹಾರ ಶುಭ. ವ್ಯಾಧಿಬಂದರೆ ಅರಿಷಣದ ಬೊಂಬಿಯಮಾಡಿ ಭುಜ ಕೊರಳಲ್ಲಿ ಜನಿವಾರ, ಕೈಯಲ್ಲಿ ಕಮಂಡಲ

ಜಪಸರ, ಅರುಣದ ವಸ್ತ್ರ ಹೊದಿಸಿ ಬೃಹಸ್ಪತಿ ಮಂತ್ರ ಅಷ್ಟವಿಧಾರ್ಚನೆ ಯಿಂದ ಪೂಜೆಮಾಡಲು ಪರಿಹಾರವಾಗುವದು. ನಕ್ಷತ್ರಯೋಗ— ರವಿವಾರ ಸಿದ್ಧಿಯೋಗ, ಸೋಮವಾರ ಕಂಟಕಯೋಗ, ಮಂಗಳವಾರ ಲಾಭಯೋಗ, ಬುಧವಾರ ನಾಶಯೋಗ, ಗುರುವಾರ ಅಮೃತಯೋಗ, ಶುಕ್ರವಾರ ಕಲಹ ಯೋಗ, ಶನಿವಾರ ಶೂಲಯೋಗ. ವೈಶಾಖದೊಳು ಉತ್ಪತ್ಯಕಂಡರೆ ದುರ್ಭಿಕ್ಷ. ಜ್ಯೇಷ್ಠಾನಕ್ಷತ್ರದಲ್ಲಿ ಕ್ರೂರಗ್ರಹವಿರಲು ಮಹಾ ಶೂಲಯೋಗ. ವೈನೆರದರೆ ಮಹಾ ಪತಿವ್ರತಿ. ಸಂಕರಾತ್ರಿಯಾದರೆ ಧಾನ್ಯ ಅಗ್ಗ.

**ಕಾರ್ಯಗಳು—** ಪುಷ್ಯನಕ್ಷತ್ರದಲ್ಲಿ ಹೆಸರು ಇಡಲಿಕ್ಕೆ, ಅಕ್ಷರವ ಕಲಿಯಲಿಕ್ಕೆ, ಚತುರಂಗವರ್ಾಬಲವ ಕೂಡಿಸಲಿಕ್ಕೆ, ಅಂದಣವ ಏರಲಿಕ್ಕೆ, ಮಜ್ಜನವ ಮಾಡಲಿಕ್ಕೆ, ಆನೆ ಕುದುರೆ ದಳ ಪಾದತಿಯ ಮಾಡಲಿಕ್ಕೆ, ಬುದ್ಧಿ ಕಲಿಸುವದಕ್ಕೆ, ಊರ-ಮನೆ ಕಟ್ಟಲಿಕ್ಕೆ, ಉಪದೇಶಮಾಡಲಿಕ್ಕೆ, ಹೋಮ-ಜಪ-ತಪವ ಮಾಡಲಿಕ್ಕೆ ಇಂಥ ಶುಭಕಾರ್ಯಗಳಿಗೆ ಲೇಸು.

ಈ ನಕ್ಷತ್ರದಲ್ಲಿ ಶಿಶುವು ಹುಟ್ಟಿದರೆ ಸರ್ವಗುಣ ಸಂಪನ್ನನಾಹನು, ಸೂಕ್ಷ್ಮ ಮಾತನಾಡುವನು, ಸಿಟ್ಟಿನವನಾಹನು, ಪ್ರವೀಣನಾಹನು, ಶಾಸ್ತ್ರವಂತನಾಹನು, ಒಡಹುಟ್ಟಿದವರಿಗೆ ಪ್ರಿಯವುಳ್ಳವನಾಹನು, ಬಹು ಹುರೇತನವುಳ್ಳವನಾಹನು. ೧ ಚರಣಕ್ಕೆ ಮಚ್ಚೆವುಂಟು, ಜನಿಸಲು ಕೆಂಪು ಕಣ್ಣು, ಕಣ್ಣುಬ್ಯಾನಿ ಬಹು ಶೂಲಿಯಾಹನು. ೨ ಚರಣಕ್ಕೆ ಪರೋಪಕಾರಿ, ರೋಭಿ, ತಂದೆ-ತಾಯಿಗೆ ಗಂಡಾಂತರವು. ೩ ಚರಣಕ್ಕೆ ಶಾಂತ ಗುಣ. ೪ ಚರಣಕ್ಕೆ ಬಹು ಹೇಸಿ. ಶನಿಯ ಮಹದರ್ಶಾ. ೩ ವರುಷಕ್ಕೆ ಮಹಾ ಭಯ. ೫ ವರುಷಕ್ಕೆ ಮೃತ್ಯುಭಯ. ೧೯ ವರುಷಕ್ಕೆ ಯಮಕಂಟಕ. ೨೨ ವರುಷಕ್ಕೆ ಶಸ್ತ್ರಭಯ. ಇಂತಿವು ಪರಿಹಾರವಾದರೆ ೮೯ ವರುಷ ಪರಮಾಯುಷ್ಯವಂತನಾಹನು.

## ೯ ಆಶ್ಲೇಷಾ ನಕ್ಷತ್ರದ ಫಲ

ಡಿ ಡೂ ಡೆ ಡೊ ಆಶ್ಲೇಷಾ; ಕಪ್ಪುವರ್ಣ, ತಾರೆ ೬, ಹಾವಿನ ಹೆಡಿಯ ಆಕಾರ, ರಾಕ್ಷಸಗಣ, ಹೆಣ್ಣುಹಾವು, ಚಾಂಡಾಲಜಾತಿ, ಬಡದೃಷ್ಟಿ,

ಅಧಮತಾರೆ, ವರುಣಮಂಡಲ, ಪುಗನಾಮರ, ಪಕ್ಷಿ ಗರುಡ, ಆಕಾರ ಸ್ವರ, ಪೈಣಕ್ಕೆ ವರ್ಜ, ಬೆಲ್ಲ ಸಲಿಸಿ ಪೂರ್ವಕ್ಕೆ ಉತ್ತರಕ್ಕೆ ಹೋಗುವದು. ವ್ಯಾಧಿ ಬಂದರೆ ಮರಣ ಶಾಂತಿಯಿಂದ ಲೇಸು. ಪದ್ಮದಲ್ಲಿ ಕುಳ್ಳಿರಿಸಿ ಭುಜ ಕೈಯಲ್ಲಿ ಕಮಂಡಲ, ಕಪ್ಪುವಸ್ತ್ರ ಹೊದಿಸಿ ಕೆಂಪುಚಂದನ ಗಂಧ, ತಾವರೆ, ಕಪ್ಪು ಗುಗ್ಗುಳ ಧೂಪ, ಅಕ್ಕಿಪಾಯಸದ ನೈವೇದ್ಯ, ಸರ್ಪಿನ ಮಂತ್ರದಿಂದ ಪರಿಹರಿಸಲು ಅಕ್ಕಿ ಬಾನವ ಸಲಸುವದು, ತಿಂಗಳಿಗೆ ಪರಿಹಾರ. ತಿಥಿ, ವಾರ, ನಕ್ಷತ್ರ, ಯೋಗ– ರವಿವಾರ ಕಂಟಕಯೋಗ, ಸೋಮವಾರ ನಷ್ಟ ಯೋಗ, ಮಂಗಳವಾರ ಹೀನಯೋಗ, ಬುಧವಾರ ಕಂಟಕಯೋಗ, ಗುರುವಾರ ನಷ್ಟಯೋಗ, ಶುಕ್ರವಾರ ಮರಣಯೋಗ, ಶನಿವಾರ ಸಿದ್ಧಿ ಯೋಗ. ಈ ನಕ್ಷತ್ರದಲ್ಲಿ ವೈನೆರದರೆ ಜಾರಿಯಾಗುವಳು. ಸಂಕ್ರಾಂತಿ ಆದರೆ ಧಾನ್ಯ ಅಗ್ಗ.

**ಕಾರ್ಯಗಳು—** ಈ ನಕ್ಷತ್ರದಲ್ಲಿ ಅಂಬು-ಬಿಲ್ಲು ಕೊಳ್ಳಲು, ಕಳವು ಮಾಡಲು, ಬಸವಿಯು ಬಿಡಲು, ಹೆಣ್ಣು ಮಾಡಲು ಹೀನಕಾರ್ಯಕ್ಕೆ ಲೇಸು.

ಇದರಲ್ಲಿ ಶಿಶುವು ಹುಟ್ಟಿದರೆ ವಾದಿಯಾಗುವನು, ದಿನದೊಳಗೆ ಬಹಳ ನೆನೆಸುವನು, ಕೊಟ್ಟಿಹನು. ಅರಸಿಗೆ ವೈರಿಯಾಗುವನು. ತೊಡಿಯಲ್ಲಿ ಮಚ್ಚೆವುಂಟು. ಹೀನ ಬಯಸುವನು. ಭೋಗವುಳ್ಳವನು. ಬುಧವಿನ ಮಹರ್ದಶಾ. ೧ ಚರಣದಲ್ಲಿ ಸುಖ, ಬುದ್ಧಿವಂತನು. ೨ ಚರಣದಲ್ಲಿ ಅಧಮ, ರೋಗಿ. ೩ ಚರಣದಲ್ಲಿ ತಂದೆಯು ನೀಗುವನು. ೪ ಚರಣದಲ್ಲಿ ಭಾಗ್ಯವಂತನಾಹನು. ೫ ವರುಷಕ್ಕೆ ಗಂಡಾಂತರ, ಅಪಮೃತ್ಯು. ೧೧ ವರುಷಕ್ಕೆ ಶಸ್ತ್ರಭಯ. ೧೫ ವರುಷಕ್ಕೆ ಮೃತ್ಯುಭಯ. ೩೫ ವರುಷಕ್ಕೆ ಶಸ್ತ್ರ ಭಯ. ಇಷ್ಟು ಪರಿಹಾರವಾದರೆ ೮೦ ವರುಷ ಪರಮಾಯುಷ್ಯವಂತನು.

## ೧೦ ಮಘಾ ನಕ್ಷತ್ರದ ಫಲ

ಮಾ ಮಿ ಮು ಮೊ ಮಘಾ; ತಾರೆ ೬, ಅಂದಣದ ಆಕಾರ, ಕಪ್ಪು ವರ್ಣ, ಗಂಡು ಇಲಿ, ರಾಕ್ಷಸಗಣ, ಬ್ರಹ್ಮ ಆದಿದೇವತಿ, ಶೂದ್ರಜಾತಿ,

ಬಡದೃಷ್ಟಿ, ಅಗ್ನಿಮಂಡಲ, ಪಕ್ಷಿ ಕೋಳಿ. ಮಘಿಯಲ್ಲಿ ಅರ್ಜುನ ಹುಟ್ಟಿದನು. ೨೦ ವಿಷಘಳಿಗಿ ಪ್ರೈಣಕ್ಕೆ ವರ್ಜ್ಯ. ದಕ್ಷಿಣಕ್ಕೆ ಪಶ್ಚಿಮಕ್ಕೆ ಎಳ್ಳೆಣ್ಣಿಯು ಸಲಿಸಿ ಹೋಗುವದು. ಜ್ವರಬಂದರೆ ಶಾಂತಿಯಿಂದ ಲೇಸು. ೨೦ ದಿನಕ್ಕೆ ಪರಿಹಾರ. ಕಪ್ಪಿನವರ್ಣ, ಬೊಂಬೆರ ಭುಜ, ವ್ಯೈಯಲ್ಲಿ ಸೂತ್ರ, ಕೈಯಲ್ಲೆ ಕಮಂಡಲ, ಕರಿಯುವಸ್ತ್ರ ಹೊದಿಸುವದು, ಕರಿಯುವಗರಗಂಧ, ಕಮಲಪುಷ್ಪಗಳ ಧೂಪ, ತುಪ್ಪದ ನೈವೇದ್ಯ, ಕರಿಯ ಆಕಳ ದಾನ ಕೊಡುವದು. ವ್ಯಾಧಿಬಂದರೆ ೨೦ ದಿನಕ್ಕೆ ಪರಿಹಾರ, ಎಳ್ಳು ಮೆಲ್ಲುವದು. ತಿಥಿ, ವಾರ, ನಕ್ಷತ್ರ, ಯೋಗ– ಆದಿತ್ಯವಾರ ಮುಗ್ಧಯೋಗ, ಸೋಮವಾರ ನಾಶಯೋಗ, ಮಂಗಳವಾರ ಭಯಯೋಗ, ಬುಧವಾರ ಲೇಸು ಯೋಗ, ಗುರುವಾರ ಸಿದ್ಧಿಯೋಗ, ಶುಕ್ರವಾರ ಶುಭಯೋಗ, ಶನಿವಾರ ನಾಶಯೋಗ. ಕಾರ್ತಿಕಮಾಸದಲ್ಲಿ ಉತ್ಪತ್ಯಕಂಡರೆ ದುರ್ಭಿಕ್ಷ. ಸಂಕ್ರಾಂತ್ರಿ ಆದರೆ ಧಾನ್ಯ ಅಗ್ಗ. ವ್ಯೈನೇರದರೆ ದುಃಖಿ, ದರಿದ್ರಳಾಗುವಳು.

**ಕಾರ್ಯಗಳು—** ಮಘಿಯಲ್ಲಿ ತೊತ್ತುಗಳ ಕೊಳ್ಳಲು, ನೇಗಲ ಹೊಡೆಯಲು, ಭೂಮಿಯ ಸಾಧಿಸಲು, ಭಂಗಾರ ಬಚ್ಚಿಡಲು, ಯಂತ್ರಗಳ ಬರೆಯಲು, ಕೆರೆ-ಭಾಂವಿ ತೆಗೆಸಲು, ತೊಟ್ಟಿಲ ಕಟ್ಟಲು, ತೋಟಮಾಡಲು, ಹೊಲವಮಾಡಲು ಇಂಥ ಕಾರ್ಯಗಳಿಗೆ ಲೇಸು. ಮಘಾನಕ್ಷತ್ರದಲ್ಲಿ ಹುಟ್ಟಿದ ಶಿಶುವು ಬಲ್ಲಿದನಾಹನು. ನಿಪುಣನಾಹನು. ಧನಿಯಾಹನು. ಉಪಕಾರಿಯಾಗುವನು. ವೇಷಕ್ಕೆ ಪ್ರಿಯಾ. ತಂದೆ-ತಾಯಿಗೆ ಪ್ರಿಯಾ. ಭಕ್ತಿವುಳ್ಳವನು. ವೈರಿಗಳಿಗೆ ಹಿತವ ಬಯಸುವನು. ಸ್ತ್ರೀ ಸಂಭೋಗಿ. ಕರ್ನಮೂಲಾ. ೧ ಚರಣಕ್ಕೆ ಸುಖಿ, ಬುದ್ಧಿವಂತನು. ೨ ಚರಣಕ್ಕೆ ಭೋಗಿಯಾಹನು. ೩ ಚರಣಕ್ಕೆ ಬುದ್ಧಿವಂತನು, ಪುಣ್ಯವಂತನು. ೪ ಚರಣಕ್ಕೆ ಹಲ್ಲಶೂಲಿಯಾಹನು, ಕವಿಯಾಗುವನು. ಮಘಿಯಲ್ಲಿ ಹುಟ್ಟಿದವನಿಗೆ ಕೇತುವಿನ ಮಹರ್ದಶಾ. ೫ ವರುಷಕ್ಕೆ ಬಹು ಬೇನೆ ೭ ವರುಷಕ್ಕೆ ಕಣ್ಣು ಬೇನೆ. ೧೩ ವರುಷಕ್ಕೆ ಭಯ. ೧೮ ವರುಷಕ್ಕೆ ಮಹಾ ಭಯ. ೭೮ ವರುಷಕ್ಕೆ ಶಸ್ತ್ರಭಯ. ಇವು ಪರಿಹಾರವಾದರೆ ೯೭ ಪರಮಾಯುಷ್ಯವಂತನು ಆಗುವನು.

# ೧೧ ಹುಬ್ಬಿ ನಕ್ಷತ್ರದ ಫಲ

ಮೊ ಟಾ ಟೇ ಟು ಹುಬ್ಬಿ; ಬಿಳಿವರ್ಣ, ತಾರೆ ೨, ತಕ್ಕಡಿ ಆಕಾರ, ಮನುಷ್ಯಗಣ, ಹೆಣ್ಣು ಇಲಿ, ವಿಪ್ರಜಾತಿ, ಪಾದ ಅಧಮ, ಮೂಕಿ, ಶುಭ ದೃಷ್ಟಿ, ಪಕ್ಷಿ ಇಹದು, ಅತ್ತಿಯ ಮರ, ೨೯ ವಿಷಘಳಿಗಿ. ತೈಲ ಮಸರು ಸಲಿಸಿ ಪೂರ್ವಕ್ಕೆ ಗಮನ. ಜ್ವರ ಬಂದರೆ ಕಷ್ಟ. ಹಸರು ಬೊಂಬಿಯ ಮಾಡಿ ೨ ಭುಜ, ಕುದರೆಯ ವಾಹನ, ಬ್ರಹಸ್ಪತಿ ಮಂತ್ರದಿಂದ ಕೆಂಪು ವಸ್ತ್ರವ ಹೊದಿಸಿ, ಕೆಂಪು ಚಂದನ ಗಂಧ, ಕೆಂಪು ಕಣಗಲಿಹೂವು, ಗುಗ್ಗಳ ಧೂಪ, ಅಕ್ಕಿಯ ಬೋನದ ನೈವೇದ್ಯ, ಷೋಡಶೋಪಚಾರದಿಂದ ಪೂಜೆ ಮಾಡಿ ಜ್ವರ ಬಂದರೆ ಉಪ್ಪು, ತುಪ್ಪ ಮಂತ್ರಿಸಿ ಹೋಮಗಳಮಾಡಿ ಜಪವ ಮಾಡಿ ಬ್ರಾಹ್ಮಣರಿಗೆ ಕೆಂಪುಧಾನ್ಯಗಳಿಂದ ದಾನವಮಾಡಿದರೆ ೨ ತಿಂಗಳಿಗೆ ಪರಿಹಾರ. ನಕ್ಷತ್ರಯೋಗ– ಆದಿತ್ಯವಾರ ಲೇಸುಯೋಗ, ಸೋಮವಾರ ಸಿದ್ಧಿಯೋಗ, ಮಂಗಳವಾರ ಲಾಭಯೋಗ, ಬುಧವಾರ ಸಿದ್ಧಿಯೋಗ, ಗುರುವಾರ ಶುಭಯೋಗ, ಶುಕ್ರವಾರ ಸಿದ್ಧಿಯೋಗ, ಶನಿವಾರ ರೋಗ ಯೋಗ, ತ್ರಯೋದಶಿ ಬರಲು ಶೂಲಯೋಗ. ಆಷಾಢಮಾಸದಲ್ಲಿ ಉತ್ಪತ್ಯ ಕಂಡರೆ ದುರ್ಭಿಕ್ಷ ಅಶ್ವಿನಿಯಲ್ಲಿ ಕ್ರೂರಗ್ರಹವಿರಲು ಶೂಲಯೋಗ. ಕಾಮನಬಿಲ್ಲು ಮೂಡಿದರೆ ಮಳೆ ಆದೀತು. ಸಂಕ್ರಾಂತ್ರಿ ಆದರೆ ಧಾನ್ಯ ಅಗ್ಗ. ಮೈನೆರದರೆ ರಂಡಿಯಾಗುವಳು, ಶಾಂತಿಯಿಂದ ಲೇಸು.

**ಕಾರ್ಯಗಳು—** ಹುಬ್ಬಿ ನಕ್ಷತ್ರದಲ್ಲಿ ಕಳವುಮಾಡಲು, ಓಡಿ ಹೋಗಲು ಹೀನಕಾರ್ಯಕ್ಕೆ ಮಹಾ ಲೇಸು.

ಹುಬ್ಬಿಯಲ್ಲಿ ಜನಿಸಿದಾತನು ಚಲುವನಾಹನು. ಜನಗಳಿಗೆ ಪ್ರಿಯಾ. ಬುದ್ಧಿವಂತನಾಹನು. ತನ್ನ ಹೆಂಡತಿಗೆ ಅಂಜುವನು. ವಾದ್ಯ, ತಾಳದಲ್ಲಿ ಜಾಣನಾಹನು. ಉದ್ಯೋಗಮಾಡುವನು. ತಂದೆ-ತಾಯಿಗೆ ಅಂಜಿ ನಡೆ ಯುವನು. ೧ ಚರಣಕ್ಕೆ ಚಪಲನು. ೨ ಚರಣಕ್ಕೆ ಕ್ಲೇಶ. ೩ ಚರಣಕ್ಕೆ ಪುತ್ರವಂತನು, ಬಹು ಕುಟುಂಬಿಯಾಗಿ ಬಾಳುವನು. ೪ ಚರಣಕ್ಕೆ ಪುತ್ರ ವಂತನು. ಶುಕ್ರನ ಮಹರ್ದಶಾ. ೪ ವರುಷಕ್ಕೆ ಮಹಾ ಹೊಟ್ಟೆಬೇನೆ,

ಮಲ-ಮೂತ್ರಕಟ್ಟುವದು. ೭ ವರುಷಕ್ಕೆ ಜಲಭಯ. ೯ ವರುಷಕ್ಕೆ ಮೃತ್ಯು ಭಯ, ಶಸ್ತ್ರಭಯ. ೧೨ ವರುಷಕ್ಕೆ ಮಹಾ ಭಯ. ೧೬ ವರುಷಕ್ಕೆ ಅಪ ಮೃತ್ಯು. ಇಂತಿವು ಪರಿಹಾರವಾಗಲು ೯೦ ವರುಷ ಬಾಳುವನು.

## ೧೨ ಉತ್ರಾ ನಕ್ಷತ್ರದ ಫಲ

ಟೆ ಟೊ ಪಾ ಪಿ ಉತ್ರಾ; ಕೆಂಪಿನವರ್ಣ, ತಾರೆ ೨, ಪಲ್ಲಾಡಿ ಆಕಾರ, ಹೆಣ್ಣು ಹುಲಿ, ಮನುಷ್ಯಗಣ, ಗುರುವು ಅದಿದೇವ, ಕ್ಷತ್ರಿಜಾತಿ, ಉರ್ಧ್ವಮುಖ, ಬಡದೃಷ್ಟಿ, ಬಹು ಉಗ್ರತಾರೆ, ಶುಭನಕ್ಷತ್ರ, ಬೋರಿಯ ಮರ, ಪಕ್ಷಿ ಗೂಗಿ, ಅದಕ್ಕೆ ಬೀಜ ಅಕ್ಷರ, ಬ್ರಹಸ್ಪತಿ ಹುಟ್ಟಿದ. ೮ ವಿಷ ಘಳಿಗಿ. ಪಂಚಾಮೃತ ಸಲಿಸಿ ಪಶ್ಚಿಮಕ್ಕೆ ದಕ್ಷಿಣಕ್ಕೆ ಪೈಣ. ಜ್ವರ ಬಂದರೆ ೭ ದಿನಕ್ಕೆ ಪರಿಹಾರ. ಪದ್ಮವರ್ಣದ ಬೊಂಬೆಯಮಾಡಿ ಷೋಡಶೋಪ ಚಾರದಿಂದ ಪೂಜೆಯ ಮಾಡಿದರೆ ಪರಿಹಾರ. ತುಪ್ಪವ ಸಲಿಸಿದರೆ ೭ ದಿನಕ್ಕೆ ಪರಿಹಾರ. ರವಿವಾರ ಶುಭಯೋಗ, ಸೋಮವಾರ ಸಿದ್ಧಿಯೋಗ, ಮಂಗಳ ವಾರ ಲಾಭಯೋಗ, ಬುಧವಾರ ಶುಭಯೋಗ, ಶುಕ್ರವಾರ ಸಿದ್ಧಿಯೋಗ, ಶನಿವಾರ ಮೃತ್ಯುಯೋಗ. ರೇವತಿಯಲ್ಲಿ ಕ್ರೂರಗ್ರಹವಿರಲು ಶೂಲಯೋಗ. ತದಗಿ ದಿನ ಉತ್ರಿ ಬರಲು ಕಂಟಕಯೋಗ. ಮಾರ್ಗಶಿರಮಾಸದೊಳಗೆ ಉತ್ಪತ್ಯಕಂಡರೆ ದುರ್ಭಿಕ್ಷ. ಕಾಮನಬಿಲ್ಲು ಮೂಡಿದರೆ ಮಹಾ ಮಳೆ. ಸಂಕ್ರಾಂತ್ರಿ ಆದರೆ ನಡು ಕೆಡುವದು. ವೈನೆರದರೆ ಪುತ್ರವಂತಿಹಳು.

**ಕಾರ್ಯಗಳು—** ಉತ್ರಾ ನಕ್ಷತ್ರದಲ್ಲಿ ಅನ್ನಶಾಂತಿಮಾಡಲು, ಉದ್ಯೋಗಮಾಡಲು, ಹೆಸರನಿಡಲು, ನೇಗಿಲಹೊಡಿಯಲು, ಮದುವೆ ಮುಂಜಿವೆಮಾಡಲು, ಅಲಂಕಾರ ಇಡಲು, ಪಟ್ಟಾಭಿಷೇಕಮಾಡಲು, ಅಂದಣವನೇರಲು, ಊರಕಟ್ಟಲು, ಗಮನಮಾಲು, ದೇವರ ಕೇಳಲು, ಸಂತೇಪೇಟೆ ಸೇರಲಿಲು ಇವೆಲ್ಲ ಶುಭಕಾರ್ಯಕ್ಕೆ ಮಹಾ ಲೇಸು. ಉತ್ರಿ ಯಲ್ಲಿ ಶಿಶುವು ಹುಟ್ಟಿದರೆ ಬಲವಂತನಾಹು. ಧರ್ಮವುಳ್ಳವನಾಹನು. ಹೆಣ್ಣಿಗೆ ಪ್ರೀಯವುಳ್ಳವನು. ೧ ನೇ ಚರಣಕ್ಕೆ ಸ್ತ್ರೀಯರ ಸಂಭೋಗಿ. ೨ ನೇ ಚರಣದಲ್ಲಿ ಗರ್ವಿಯಾಹನು. ೩ ನೇ ಚರಣಕ್ಕೆ ಚಪಲನಾಹನು.

೪ ನೇ ಚರಣಕ್ಕೆ ವಿನೋದಿಯಾಹನು. ಇದರಲ್ಲಿ ಹುಟ್ಟಿದವನಿಗೆ ೧೦ ದಿನಕ್ಕೆ ಜ್ವರಭಯ. ೨ ತಿಂಗಳಿಗೆ ಭಯ. ೪ ವರುಷಕ್ಕೆ ರೋಗ ೨೦ ವರುಷಕ್ಕೆ ತಂದೆಗೆ ಹೀನ. ೩ ಪಾದ ಅಪಮೃತ್ಯು. ಶಾಂತಿಯಿಂದ ಲೇಸು. ೨೪ ವರುಷಕ್ಕೆ ಬ್ರುಂಗಿಭಯ. ಇವು ಪರಿಹಾರವಾದರೆ ೮೪ ವರುಷ ಪರಮ ಆಯುಷ್ಯ. ಉತ್ರಿಯ ಮೊದಲಿಗೆ ಜನನ ತಂದೆಗೆ ಹೀನ.

## ೧೩ ಹಸ್ತಾ ನಕ್ಷತ್ರದ ಫಲ

ಪು ಷಂ ಣ ಟ ಹಸ್ತಾ; ಕೆಂಡದ ಆಕಾರ, ೫ ತಾರೆ, ಕೆಂಪುವರ್ಣ, ಯೋನಿ ಎಮ್ಮೆ, ನಾದಿ ದೇವತೆ, ವೈಶ್ಯಜಾತಿ, ೪ ಪಾದ ಬಟ್ಟೆನ್ನ, ಮಾರಿ, ವರ್ಜ್ಯತಾರೆ, ೨೦ ವಿಷಘಳಿಗೆ. ಅಕ್ಕಿಯ ಹಿಟ್ಟು ಮುದ್ದು ಪೈಣಕ್ಕೆ ಹೋಗುವದು. ಬಡಗಲು ಹೋಗಲು ಹೀನ, ಪಡವಲು ಲಾಭ. ತುಪ್ಪ, ಅಕ್ಕಿ ಮೊಲ್ಲಲು ಜ್ವರ ಪರಿಹಾರ. ನಕ್ಷತ್ರಯೋಗ– ರವಿವಾರ ಅಮೃತಯೋಗ, ಸೋಮವಾರ ಕಷ್ಟಯೋಗ, ಮಂಗಳವಾರ ಸಿದ್ಧಿಯೋಗ, ಬುಧವಾರ ಲಾಭಯೋಗ, ಗುರುವಾರ ವಿಷಯೋಗ, ಶುಕ್ರವಾರ ಸಿದ್ಧಿಯೋಗ. ಶನಿವಾರ ಮರಣಯೋಗ. ರವಿವಾರ ಪಂಚಮಿ ಬಂದರೆ ವಿಷಯೋಗ, ಹುಣ್ಣಿವೆ ಬರಲು ಸಿರ್ಜರಯೋಗ. ಉತ್ರಾಭಾದ್ರಪದದಲ್ಲಿ ಕ್ರೂರಗ್ರಹವಿರಲು ಸುಟಯೋಗ. ಪುಷ್ಯಮಾಸದೊಳು ಉತ್ಪತ್ಯಕಂಡರೆ ರಾಜಭಯ. ಸಂಕ್ರಾಂತ್ರಿಯಾದರೆ ಧಾನ್ಯ ಅಗ್ಗ. ವೈನೆಂದರೆ ಪುತ್ರವಂತಿಹಳು.

**ಕಾರ್ಯಗಳು—** ಹಸ್ತಾನಕ್ಷತ್ರದಲ್ಲಿ ಋತುಮತಿ ಹೆಣ್ಣು ಎನಸಲಿಕ್ಕೆ, ಹೆಸರಿಸಿಡಲು, ಅಂಗಶುದ್ಧಿಯಮಾಡಲು, ನೇಗಲಹೊಡಿಯಲು, ಮದುವೆ ಮುಂಜಿವೆಮಾಡಲು, ಸರ್ವ ಶುಭಕಾರ್ಯಗಳಿಗೆ ಮಹಾ ಲೇಸು. ಶಿಶುವು ಹುಟ್ಟಿದರೆ ಬಲವುಳ್ಳವನಾಗುವನು. ಬೇಗ ಒಳ್ಳೆಯುವನಾಹನು. ಸ್ತ್ರೀಯರ ಸಂಭೋಗಿ. ಪೂಜೆ ಉಳ್ಳವನಾಹನು ಪರೋಪಕಾರಿಯಾಹನು. ಕೀರ್ತಿ ಉಳ್ಳವನಾಹನು. ಹೊಟ್ಟೆಯಲ್ಲಿ ಮಚ್ಚವುಂಟು. ಸೂರ್ಯನ ಮಹರ್ದಶಾ. ಜನಿಸಿದಲ್ಲಿ ಕ್ರೂರಗ್ರಹವಿರಲು ಭಂಗ ಒಂದು ಉಣ್ಣದೆ ಸಾವನು. ಒಂದು ವರುಷಕ್ಕೆ ಮಹಾಭಯ. ೧ ಚರಣಕ್ಕೆ ಕರ್ತನಾಹನು. ೨ ಚರಣಕ್ಕೆ

ನಿಪುಣನಾಹನು. ೩ ಚರಣಕ್ಕೆ ಧರ್ಮವುಳ್ಳವನು. ೪ ಚರಣಕ್ಕೆ ಸನ್ಯಾಸಿ, ಪೂಜ್ಯನಾಹನು. ೩೩ ವರುಷಕ್ಕೆ ರಾಜಭಯ. ೩೪ ವರುಷಕ್ಕೆ ಸರ್ಪಭಯ, ೩೬ ವರುಷಕ್ಕೆ ಅಪಮೃತ್ಯು. ಇವು ಗೆಲಿದರೆ ೮೬ ವರುಷ ಬಾಳುವರು.

## ೧೪ ಚಿತ್ತಿ ನಕ್ಷತ್ರದ ಫಲ

ಪೆ ಪೊ ರಾ ರಿ ಚಿತ್ತಿ; ತಾರೆ ೧, ಬಿಳಿವರ್ಣ, ಗಂಡು ರಾಕ್ಷಸ, ರಾಕ್ಷಸಗಣ, ಹೆಣ್ಣು ಇಲಿ, ಹಿಂದಕ್ಕೆ ತಿರುವಾರಿ, ಬಡದೃಷ್ಟಿ, ಶೂದ್ರ ಜಾತಿ, ವಾಯುಮಂಡಲ, ಕಲ್ಲತ್ತಿಮರ, ಪಕ್ಷಿ ಕಲ್ಲಂಬ, ಉಗ್ರತಾರೆ ೨, ೨೦ ವಿಷಘಳಿಗಿ. ಗಮನತಾರೆ ಅಲ್ಲ. ಚಿತ್ರನ್ನ ಸಲಿಸಿ ಪೂರ್ವಕ್ಕೆ ಪ್ರೈಣ. ಉತ್ತರಕ್ಕೆ ಹೋಗುವದು. ವ್ಯಾಧಿ ಬಂದರೆ ಬಿಳಿಯ ಬೊಂಬಿಯಮಾಡಿ ಭುಜ ಕೈಯಲ್ಲಿ ಕಮಂಡಲ ಕುಳ್ಳಿರಿಸಿ ಬಿಳಿಯವಸ್ತ್ರ ಹೊದಿಸಿ ನಾನಾವರ್ಣದ ಪುಷ್ಪ ಬಿಳಿಯಧೂಪ ತಂಬಿಟ್ಟಿನ ನೈವೇದ್ಯ ಷೋಡಶೋಪಚಾರದಿಂದ ಪೂಜೆ ಗಾಯತ್ರಿಮಂತ್ರದಿಂದ ವ್ಯಾಧಿಬಂದವರಿಗೆ ಬಿಳಿಯ ಅನ್ನವನುಂಡರೆ ವ್ಯಾಧಿ ಪರಿಹಾರ. ರವಿವಾರ ಆನಂದಯೋಗ, ಸೋಮವಾರ ಶೂಲಯೋಗ, ಮಂಗಳವಾರ ನಾಶಯೋಗ, ಬುಧವಾರ ಕಂಟಕಯೋಗ, ಗುರುವಾರ ಮೃತ್ಯುಯೋಗ, ಶುಕ್ರವಾರ ಶೂಲಯೋಗ, ಶನಿವಾರ ಸಿದ್ಧಿಯೋಗ, ಹುಬ್ಬಿಯಲ್ಲಿ ಕ್ರೂರಗ್ರಹವಿರಲು ಶೂಲಯೋಗ. ವೈಶಾಖಮಾಸದೊಳು ಕಾಮನಬಿಲ್ಲು ಮೂಡಿದರೆ, ಉತ್ಪತ್ತಿಕಂಡರೆ ಮಳೆಯಕ್ಷಾಂ. ಸಂಕ್ರಾಂತ್ರಿ ಆದರೆ ಶುಭ.

**ಕಾರ್ಯಗಳು—** ಚಿತ್ತಿಯಲ್ಲಿ ಹೆಸರನಿಡಲು, ಸ್ತ್ರೀಯರ ಸಂಭೋಗಕ್ಕೆ, ಕಿವಿಯ ಚುಚ್ಚಿಸಲು, ಮದುವೆ-ಮುಂಜಿವೆಯ ಮಾಡಲು, ವೇದ ಶಾಸ್ತ್ರ ಕಲಿಯಲು, ಮಜ್ಜನಮಾಡಲು, ಮುತ್ತುಗಳನಿಡಲು, ಆನೆ-ಕುದುರೆಯನೇರಲು, ಶೃಂಗಾರಮಾಡಲು ಇಂಥ ಶುಭಕಾರ್ಯಕ್ಕೆ ಲೇಸು.

ಚಿತ್ತಿಯಲ್ಲಿ ಶಿಶುವು ಹುಟ್ಟಿದರೆ ಸ್ತ್ರೀಯರ ಸಂಭೋಗಿ, ಮಮತಾ ಶಾಸ್ತ್ರ ಕಲಿವನು. ಮಂಗಳಮಹರ್ದಶಾ. ೧ ಚರಣಕ್ಕೆ ನಗೆಮುಖವುಳ್ಳವ

ನಾಹನು. ೨ ಚರಣಕ್ಕೆ ಗರ್ವಿಯಾಹನು. ೩ ಚರಣಕ್ಕೆ ಉದಾರನಾಗುವನು, ಚಿತ್ರಕನಾಹನು. ೪ ಚರಣಕ್ಕೆ ಕಳ್ಳನಾಹನು, ಹಾದರಿಗನಾಹನು. ಹೆಣ್ಣು ಹುಟ್ಟಿದರೆ ಜಾರಿಯಾಗುವಳು, ಬಸವಿತನ ಮಾಡುವಳು. ಚಿತ್ತಿಯಲ್ಲಿ ಹುಟ್ಟಿದವರಿಗೆ ೧ ವರುಷದಲ್ಲಿ ೯ ವರುಷದಲ್ಲಿ ರಾಜಭಯ. ಇದು ಪರಿಹಾರವಾದರೆ ೮೪ ವರುಷ ಪರಮಾಯುಷ್ಯವಂತನು.

# ೧೫ ಸ್ವಾತಿ ನಕ್ಷತ್ರದ ಫಲ

ರು ರೆ ರೊ ತಾ ಸ್ವಾತಿ; ತಾರೆ ೨, ಕೆಂಪುವರ್ಣ, ಯೋನಿಯಲ್ಲಿ ಕೋಣ, ದೇವಗಣ, ವಾಯುಮಂಡಲ, ಇಂದ್ರನಾದಿದೇವತಿ, ಉಗ್ರತಾರೆ, ೪ ಪಾದ, ತಿರುವು ಮಾರೆ, ಕೆಟ್ಟಕಣ್ಣು, ವೃಕ್ಷ ಅತ್ತಿಯ ಮರ, ಪಕ್ಷಿ ಹಾಲಕ್ಕಿ, ೧೪ ವಿಷಘಳಿಗಿ. ರಾಮಚಂದ್ರ ಹುಟ್ಟಿದ. ಪ್ರೈಣ ವರ್ಜ್ಯ. ನೆಲ್ಲಿಯಚೆಟ್ಟು ಸಲಿಸಿ ದಕ್ಷಿಣಕ್ಕೆ ಪಶ್ಚಿಮಕ್ಕೆ ಹೋಗುವದು. ಜ್ವರ ಬಂದರೆ ಕಷ್ಟ ತೋರುವದು. ಶಾಂತಿಯಿಂದ ಲೇಸು. ತಿಂಗಳಿಗೆ ಪರಿಹಾರ. ಸಕಲ ಶುಭಕಾರ್ಯಗಳಿಗೆ ಲೇಸು. ನಕ್ಷತ್ರಯೋಗ– ರವಿವಾರ ಶೂಲಯೋಗ, ಸೋಮವಾರ ಸಿದ್ಧಿಯೋಗ, ಮಂಗಳವಾರ ಶೂಲಯೋಗ, ಬುಧವಾರ ಹೀನಯೋಗ, ಗುರುವಾರ ಶುಭಯೋಗ, ಶುಕ್ರವಾರ ಮೃತ್ಯುಯೋಗ, ಶನಿವಾರ ಶೂಲಯೋಗ. ವೈಶಾಖಮಾಸದೊಳು ಉತ್ಪತ್ತ್ಯಕಂಡರೆ ಲೋಕಕ್ಕೆ ವಾತಾ, ಪೈತ್ಯ. ಸಂಕ್ರಾಂತ್ರಿ ಆದರೆ ಧಾನ್ಯ ಅಗ್ಗ. ಮೈನೆರದರೆ ಧನ-ಧಾನ್ಯ ಸಂಪದವು, ಪುತ್ರವಂತಿಹಳು.

**ಕಾರ್ಯಗಳು—** ಈ ನಕ್ಷತ್ರದಲ್ಲಿ ನೇಗಿಲಹೊಡಿಯುವದು, ಜೆಡಿಯ ನಿಳಿಸುವದು, ಕೋಟೆಯಕಟ್ಟಲು, ಅಕ್ಷರಕಲಿಯಲು, ವಸ್ತ್ರವಕಳಿಯಲು, ಮದುವೆ-ಮುಂಜಿವೆ ಮಾಡಲು, ಪಾತ್ರವು ಆಡಲು, ಆನೆ–ಕುದುರೆ ಶೃಂಗಾರ ಮಾಡಲು ಇಂಥ ಶುಭಕಾರ್ಯಗಳಿಗೆ ಲೇಸು.

ಸ್ವಾತಿಯಲ್ಲಿ ಹುಟ್ಟಿದ ಶಿಶುವು ಸಿರಿವಂತನಾಹನು. ದೈವ ಉಳ್ಳವನಾಹನು. ದೊಡ್ಡ ಕಂಗಳು. ಅನ್ನವಂತನಾಗುವನು. ಅರವಟ್ಟಿಗೆಯ

ನಿಕ್ಕುವನು. ದೇವರ ಬಲಗೊಂಬುವನು. ಗುರು–ಹಿರಿಯರಿಗೆ ನಡಿವನು, ಇಂಥ ಕಾರ್ಯ ಮಾಡುವನು. ಧರ್ಮವುಳ್ಳವನಾಗುವನು. ರಾಹುವಿನ ಮಹರ್ದಶಾ. ಹುಟ್ಟಿದ ೧೪ ವರುಷಕ್ಕೆ ಗಂಡಾಂತರ. ೧ ಚರಣಕ್ಕೆ ಪೂಜ್ಯನಾಹನು, ಬಳಗಕ್ಕೆ ಪ್ರಿಯನಾಹನು, ಬುದ್ಧವಂತನಾಹನು, ಸುಳ್ಳರ ಭಾಡ ಹೇಳುವವರ ಸೇರನು. ೨ ಚರಣಕ್ಕೆ ಕಳ್ಳನಾಹನು. ೩ ಚರಣಕ್ಕೆ ಹೊಟ್ಟೆ ಬೇನೆ. ೪ ಚರಣಕ್ಕೆ ಕೋಪಿಯಾಗುವನು. ಹುಟ್ಟಿದ ೧೨ ವರುಷಕ್ಕೆ ಆನೆ ಕುದುರೆಯ ಭಯ. ಇವು ಪರಿಹಾರವಾಗಲು ೮೦ ವರುಷ ಪರಮಾಯುಷ್ಯವಂತರಾಗುವರು.

## ೧೬ ವಿಶಾಖಾ ನಕ್ಷತ್ರದ ಫಲ

ತಿ ತು ತೆ ತೊ ವಿಶಾಖಾ; ೬ ತಾರೆ, ಕುಂಬಾರ ತಿಗರಿ ಆಕಾರ, ಯೋನಿ ಗಂಡು ಇಲಿ, ಧೂಮ್ರವರ್ಣ, ೪ ಪಾದ, ರಾಕ್ಷಸಗಣ, ಸುರಪತಿ ಹುಟ್ಟಿದ, ವೃಕ್ಷ ನೆಲ್ಲಿ, ಪಕ್ಷಿ ಕಾಗಿ, ಅಗ್ನಿಮಂಡಲ, ೧೫ ವಿಷಘಳಿಗಿ. ಪ್ರೈಣಕ್ಕೆ ವರ್ಜ್ಯ. ಶಿಜ್ಜಿಯಬಾನ ಸಲಿಸಿ ಹೋಗುವದು ಉತ್ಪತ್ತಿ ಕಂಡರೆ ದುರ್ಭಿಕ್ಷ. ವೈನೆರದರೆ ಶುಭ, ಜಾರಿಯಾಗುವಳು. ನಕ್ಷತ್ರಯೋಗ– ರವಿವಾರ ವಿಷಯೋಗ. ಸೋಮವಾರ ಭಯಯೋಗ. ಮಂಗಳವಾರ ಸಿದ್ಧಿಯೋಗ. ಬುಧವಾರ ನಾಶಯೋಗ. ಗುರುವಾರ ಆನಂದಯೋಗ. ಶುಕ್ರವಾರ ಸಿದ್ಧಿಯೋಗ. ಶನಿವಾರ ನಾಶಯೋಗ.

**ಕಾರ್ಯಗಳು—** ಈ ನಕ್ಷತ್ರದಲ್ಲಿ ವೈರಿಗಳ ಕೊಲ್ಲಲು, ಮನೆಯ ಕೆಡಸಲು, ಬೆಂಕಿಹಚ್ಚಲು, ಬಾಗಲ ಮುತ್ತಿಕೊಳ್ಳಲು ಇಂಥ ಹೀನಕಾರ್ಯಗಳಿಗೆ ಲೇಸು. ವ್ಯಾಧಿಬಂದರೆ ಭೂಸುರರಿಗೆ ಆಕಳದಾನವಕೊಟ್ಟರೆ ಪರಿಹಾರ. ತಿಂಗಳಿಗೆ ಪರಿಹಾರ. ದನವಕೊಳ್ಳಲು, ಕೆರೆ-ಭಾಂವಿಕಟ್ಟಿಸಲು ಇಂಥ ಶುಭ ಕಾರ್ಯಗಳಿಗೆ ಲೇಸು.

ವಿಶಾಖದಲ್ಲಿ ಹುಟ್ಟಿದ ಶಿಶುವು ವಿದ್ವಾಂಸನಾಹನು, ಕರ್ಣರೋಗಿ, ಹೊಟ್ಟೆಶೂಲಿ, ಕೆಂಪುಕಣ್ಣು, ಹೊಟ್ಟೆಯಲ್ಲಿ ಮಚ್ಚವುಂಟು. ೧ ಚರಣಕ್ಕೆ

ಪಿಂಗಳನಾಹನು, ಕೆಂಪು ಕೂದಲು. ೨ ಚರಣಕ್ಕೆ ನ್ಯಾಯಗಾರನು. ೩ ಚರಣಕ್ಕೆ ನಿಪುಣನಾಹನು. ೪ ಚರಣಕ್ಕೆ ಸ್ತ್ರೀ ಸಂಭೋಗಿ, ಕಂಠರೋಗಿ. ಗುರುವಿನ ಮಹರ್ದಶಾ. ೧೧-೧೬ ವರುಷಕ್ಕೆ ಗಂಡಾಂತರವು. ೧೮ ವರುಷಕ್ಕೆ ೧೮ ತಿಂಗಳಿಗೆ ಮರಣ. ೫ ವರುಷಕ್ಕೆ ೭ ವರುಷಕ್ಕೆ ನೇತ್ರರೋಗ. ೧೦ ವರುಷಕ್ಕೆ ೧೩ ವರುಷಕ್ಕೆ ಜ್ವರಭಯ. ೨೩ ವರುಷಕ್ಕೆ ಗುಲ್ಮರೋಗ. ೨೬ ವರುಷಕ್ಕೆ ಶಸ್ತ್ರಭಯ. ೬೮ ವರುಷಕ್ಕೆ ಮಹಾ ಜ್ವರಭಯ. ಇವು ಉಳಿದುಳಿದರೆ ೮೦ ವರುಷ ಪರಮಾಯುಷ್ಯ ಹೆಣ್ಣು ಜನಿಸಲು ಮೂರು ಮಂದಿ ಗಂಡರಾಹರು

## ೧೭ ಅನುರಾಧಾ ನಕ್ಷತ್ರದ ಫಲ

ನಾನಿನುನೆ ಅನುರಾಧಾ; ಬಿಳಿವರ್ಣ, ದೇವಗಣ, ಯೋನಿ ಹೆಣ್ಣು ಚಿಗರಿ, ಇಂದ್ರ ನಾಡಿ ದೇವತಿ, ಶೂದ್ರಜಾತಿ, ಚಲುವ ಮುಖ, ವೃಕ್ಷ ಹುಲಿಸಿನಮರ. ೧೦ ವಿಷಘಳಿಗೆ. ಬೆಳ್ಳಿಮೊಗ್ಗು ಗಮನಕ್ಕೆ ಹೋಗುವದು. [illegible]ಂದರೆ ಶಾಂತಿ ಮಾಡಿದ ಲೇಸು. ಇದರ ಯೋಗ— ರವಿವಾರ ಮೃತ್ಯುರೋಗ. ಸೋಮವಾರ ದುಃಖಯೋಗ. ಮಂಗಳವಾರ ಕಂಟಕಯೋಗ. ಬುಧವಾರ ಅಮೃತಯೋಗ. ಗುರುವಾರ ಲಾಭಯೋಗ. ಶುಕ್ರವಾರ ಶುಭಯೋಗ. ಶನಿವಾರ ಸಿದ್ಧಿಯೋಗ. ಬುಧವಾರ ಅಷ್ಟಮಿ ಒದಗಲು [illegible]ಯೋಗ. [illegible]ರಲು ಶೂಲಯೋಗ. ಆಶ್ಲೇಷದಲ್ಲಿ ಕ್ರೂರಗ್ರಹ ಇರಲು ಸಂಕಟಯೋಗ. [illegible] ಗಂಡನಿಗೆ [illegible] ಆದರೆ ಲೋಕಕ್ಕೆ [illegible] ಸಂಕ್ರಾಂತಿ ಆದರೆ ಒಂದು [illegible] ಪೈನಡದರೆ ಪುತ್ರ ಸಂತತಿಯಾಗುವದು.

**ಕಾರ್ಯಗಳು—** ಈ ನಕ್ಷತ್ರದಲ್ಲಿ ಕಿವಿಯ ಚುಚ್ಚಲು, ಹೊಂದರೆ ಕೊಳ್ಳಲು, ತೆಂಗು ನೆಟ್ಟಲು, ಹೆಸರಿಡುವದು, ಮಂಚ [illegible] ಮಾಡಲು, ಮದುವೆ ಮಾಡುವದು, ಆಭರಣ ಧರಿಸಿಕೊಳ್ಳುವದು, ವೇದ-ಶಾಸ್ತ್ರ ಕಲಿಯುವದು, ಪಟ್ಟಾಭಿಷೇಕ ಮಾಡಲು, ಕಾದುರಿ ಚಂದಣ ಸೇವಿಸಲು. ಛತ್ರ-ಚಾಮರ ಹಿಡಿಸಿಕೊಳ್ಳಲು, ಹರನ ಪೂಜೆಯ ಮಾಡಲು, ಜಡಿಯ ನಿಳಿಸಲು, ಊರು

ಕಟ್ಟಲು, ಪಾತ್ರವ ಕಲಿಯುಲು, ವೇಣಿಯುಬಾರಿಸಲು, ಶಿಲ್ಪಶಾಸ್ತ್ರಕಲಿಯುಲು, ಉದ್ಯೋಗವಮಾಡಲು, ಬಿತ್ತಲು, ಅನ್ನಶಾಂತಿಯುಮಾಡಲು ಇವೇ ಮೊದಲಾದ ಶುಭಕಾರ್ಯಂಗಳಿಗೆ ಲೇಸು.

ಶಿಶುವು ಹುಟ್ಟಿದರೆ ಪ್ರಾಜ್ಞನಾಹನು. ದುರ್ಜನನಾಹನು. ಹೆಣ್ಣಿಗೆ ಪ್ರಿಯುಭೋಗಿಯಾಹನು. ಬಳಗದೊಳು ಪೂಜ್ಯನಾಹನು. ಮಕ್ಕಳ ಬಲವುಳ್ಳವನಾಹನು ಅನ್ನದಾನಿಯಾಹನು. ೧ ಚರಣಕ್ಕೆ ಪ್ರಾಜ್ಞನಾಹನು, ಜಾಣನಾಹನು, ಶೀಲವಂತನು. ೨ ಚರಣಕ್ಕೆ ಪ್ರವೀಣನಾಹನು. ೩ ಚರಣಕ್ಕೆ ಗುರು-ಹಿರಿಯರಿಗೆ ಅಂಜಿನಡೆಯುವನು. ೪ ಚರಣಕ್ಕೆ ಜಡನಾಹನು, ಚಾಡನಾಹನು, ಕಳ್ಳನಾಹನು. ಶನೇಶ್ವರನ ಮಹದರ್ಶಾ. ಹುಟ್ಟಿದ ೭ ವರುಷಕ್ಕೆ ಕಂಟಕ. ೧೩ ವರುಷಕ್ಕೆ ಮಹಾಭಯು. ೨೫ ವರುಷಕ್ಕೆ ಶಸ್ತ್ರಭಯು. ೨೭ ವರುಷಕ್ಕೆ ಮಹಾಭಯು. ಇವು ಪರಿಹಾರವಾಗಲು ೯೦ ವರುಷ ಪರಮಾಯುಷ್ಯ. ಹೆಣ್ಣು ಜನಿಸಲು ಭಾಗ್ಯವಂತಿ, ಪುತ್ರವಂತಿಯಾಗುವಳು.

# ೧೮ ಜ್ಯೇಷ್ಠಾ ನಕ್ಷತ್ರದ ಫಲ

ನೊ ಯಾ ಯು ಯೆ ಜ್ಯೇಷ್ಠಾ; ಕೆಂಪುವರ್ಣ, ತಾತೆ ೪, ಸತ್ತರಗಿ ಆಕಾರ, ದೇವೇಂದ್ರ ಪುಟ್ಟಿದ, ಇಂದ್ರಮಂಡಲ, ವೃಕ್ಷ ಬಿದರ ಮರ, ಪಕ್ಷಿ ನವಿಲು, ೧೪ ವಿಷಘಳಿಗೆ. ದಕ್ಷಿಣಕ್ಕೆ ಪಶ್ಚಿಮಕ್ಕೆ ಪ್ರೈಣ. ಜ್ವರಬಂದರೆ ಶಾಂತಿಯಿಂದ ಲೇಸು. ೧ ತಿಂಗಳಿಗೆ ಪರಿಹಾರ. ಇದರ ಯೋಗ— ರವಿವಾರ ಅಮೃತಯೋಗ. ಸೋಮವಾರ ಶುಭಯೋಗ. ಮಂಗಳವಾರ ಮೃತ್ಯುಯೋಗ. ಬುಧವಾರ ನಾಶಯೋಗ. ಗುರುವಾರ ವಿಷಯೋಗ. ಶನಿವಾರ ಸಿದ್ಧಿಯೋಗ. ಷಷ್ಠಿ ಬರಲು ಶೂಲಯೋಗ. ಫಾಲ್ಗುಣಮಾಸದೊಳಗೆ ಉತ್ಪತ್ತ್ಯಕಂಡರೆ ಲೋಕಕ್ಕೆ ಅಗ್ನಿಭಯು, ಜ್ವರಭಯು, ದುರ್ಭಿಕ್ಷ. ಸಂಕ್ರಾಂತ್ರಿ ಆದರೆ ಧಾನ್ಯ ಅಗ್ಗ. ವ್ಯೈನೆರದರೆ ದೋಷವು. ಗಂಡಗೆ ಮರಣ. ಶಾಂತಿಯಿಂದ ಲೇಸು.

**ಕಾರ್ಯಗಳು—** ಔಷಧಕೊಡಿಸಲಿಕ್ಕೆ, ಬೆಂಕಿಹಚ್ಚಲಿಕ್ಕೆ, ಕಳವು ಮಾಡಲಿಕ್ಕೆ, ಕುಂಟಲಿತನವ ಮಾಡಲಿಕ್ಕೆ, ಮಂತ್ರವ ಕಲಿಯಲಿಕ್ಕೆ,

ಚಾಡವ ಮಾಡಲಿಕ್ಕೆ, ಜಗಳಮಾಡಲಿಕ್ಕೆ ಇಂಥ ಹೀನಕಾರ್ಯಗಳಿಗೆ ಲೇಸು. ಭೂತಬಡದರೆ ಬಿಡಸಲು, ತೊತ್ತುಗಳ ಕೊಳ್ಳಲು, ಆಳುತರಲು, ಧಾತು ವೇದಕ್ಕೆ ಇಂಥ ಕಾರ್ಯಂಗಳಿಗೆ ಲೇಸು

ಜ್ಯೇಷ್ಠದಲ್ಲಿ ಶಿಶುವು ಹುಟ್ಟಿದರೆ ಭಂಗಾರವರ್ಣ ಪ್ರಿಯುವುಳ್ಳವನಾಹನು, ಶ್ರೇಷ್ಠನಾಹನು, ನಿಪುಣನಾಹನು, ಪೂಜ್ಯನಾಹನು, ಎಡದ ಆಳ್ಳಿಯ ಮೇಲೆ ಮಚ್ಚೆವುಂಟು. ೧ ಚರಣಕ್ಕೆ ಗರ್ವಿಯಾಗುವನು, ನಗೆಮುಖದವನು, ೨ ಚರಣಕ್ಕೆ ರೋಗಿ, ಕಿಂಚಿತ ಭೋಗಿ. ೩ ಚರಣಕ್ಕೆ ಉಪಕಾರಿ. ೪ ಚರಣಕ್ಕೆ ರೋಗಿಯಾಗುವನು, ವಾದಿಯಾಗುವನು ಜ್ಯೇಷ್ಠನಕ್ಷತ್ರದಲ್ಲಿ ಹುಟ್ಟಿದ ಶಿಶುವಿಗೆ ಆ ನಕ್ಷತ್ರದ ಹತ್ತು ಚರಣದ ಮಾಡಿಕೊಂಬುವದು. ೧ ಚರಣಕ್ಕೆ ತಾಯಿಯ ನೀಗುವನು ೨ ಚರಣಕ್ಕೆ ತಂದೆ-ತಾಯಿಗೆ ಗಂಡಾಂತರವು. ೩ ಚರಣಕ್ಕೆ ತಾಯಿ ಅಣ್ಣಗೆ ಗಂಡಾಂತರವು ೪ ಚರಣಕ್ಕೆ ಬಹು ಗಂಡಾಂತರ. ೫ ಚರಣಕ್ಕೆ ತನ್ನ ಗಂಡಾಂತರ. ೬ ಚರಣಕ್ಕೆ ತಂದಿಗೆ ಗಂಡಾಂತರ. ೭ ಚರಣಕ್ಕೆ ತಂದೆ-ತಾಯಿಗೆ ಗಂಡಾಂತರ. ೮ ಚರಣಕ್ಕೆ ಸಮಸ್ತರಿಗೂ ಗಂಡಾಂತರವು. ೯ ಚರಣಕ್ಕೆ ತಾನು ಸಾಯುವನು. ಧನ ಧಾನ್ಯ ಬದಕು ನಾಶವು. ೧೦ ಚರಣಕ್ಕೆ ಸರ್ವ ಗಂಡಾಂತರವು, ನೆಂಟರು ಗೆಳೆಯರಿಗೆ ಗಂಡಾಂತರವು. ಜ್ಯೇಷ್ಠದ ಕಡೆಯ ಒಂದು ಘಳಿಗಿ ಮೂಲ ಮೊದಲು ಎರಡು ಘಳಿಗಿ ಅಂತು ಮೂರು ಘಳಿಗಿ ಶಿಶುವು ಹುಟ್ಟಿದ ಠಾವಿನಲ್ಲಿ ನೆಲನ ಮಣ್ಣುಕೆತ್ತಿ ಆ ಶಿಶುವುಸಹವಾಗಿ ನಡುಮನೆಯ ಗೋಡೆಯ ನೊಡೆದು, ಹೊರಿಯಕ್ಕೆ ಬೀಸಾಟುವದು. ಬಾಗಿಲಿಂದ ತೆಗೆಯಲಾಗದು. ಮನೆಯವರು ನೋಡಲಾಗದು. ಬುಧವಿನ ಮಹದರ್ಶಾ. ಹುಟ್ಟಿದ ಏಳು ದಿನಕ್ಕೆ ಮೃತ್ಯುಭಯ. ೩ ವರುಷಕ್ಕೆ ಮಹಾಭಯ. ೭ ವರುಷಕ್ಕೆ ಶಸ್ತ್ರ ಭಯ. ೩೩ ವರುಷಕ್ಕೆ ಮಹಾ ಗಂಡಾಂತರವು. ಇವನೆಲ್ಲ ಗೆಲಿದರೆ ೯೬ ವರುಷ ಪರಮಾಯುಷ್ಯ. ಹೆಣ್ಣು ಜನಿಸಲು ಜಾರಿಯಾಗುವಳು.

## ೧೯ ಮೂಲಾ ನಕ್ಷತ್ರದ ಫಲ

ಯೆ ಯೊ ಬಾ ಬಿ ಮೂಲಾ; ತಾರೆ ೬, ಕಪ್ಪುವರ್ಣ, ಅಂಕುಶದ ಆಕಾರ, ರಾಕ್ಷಸಗಣ, ಯೋನಿ ಹೆಣ್ಣು ನಾಯಿ, ದೇವತೆಗಳು ಆದಿದೈವ,

ಕ್ಷತ್ರಿಜಾತಿ, ಕೆಟ್ಟಕಣ್ಣು, ಊರ್ಧ್ವಮುಖ, ದೇವರು ವರುಣಮಂಡಲ, ಸಂಕೊಬವೃಕ್ಷ, ಪಕ್ಷಿ ಕೋಗಿಲೆ. ಇದರಲ್ಲಿ ರಾಮ-ಲಕ್ಷ್ಮಣರು ಹುಟ್ಟಿದರು. ೯ ವಿಷಘಳಿಗಿ. ಮೂಲಂಗಿಮೆಟ್ಟು ಪಶ್ಚಿಮಕ್ಕೆ ದಕ್ಷಿಣಕ್ಕೆ ಪೈಣ ಜ್ವರ ಬಂದರೆ ೯ ದಿನಕ್ಕೆ ಪರಿಹಾರ. ಇನ್ನು ನಕ್ಷತ್ರಯೋಗ– ರವಿವಾರ ಸಿದ್ಧಿ ಯೋಗ, ಸೋಮವಾರ ರೋಗಯೋಗ, ಮಂಗಳವಾರ ಮೃತ್ಯುಯೋಗ, ಬುಧವಾರ ಸಿದ್ಧಿಯೋಗ, ಗುರುವಾರ ಶುಭಯೋಗ, ಶುಕ್ರವಾರ ಶೂಲ ಯೋಗ, ಶನಿವಾರ ಸಿದ್ಧಿಯೋಗ, ಶುಭಯೋಗ ಪುನರ್ವಸುವಿನಲ್ಲಿ ಕ್ರೂರಗ್ರಹವಿರಲು ಶೂಲಯೋಗ. ಮಾಘಮಾಸದೊಳು ಉತ್ಪತ್ತ್ಯಕಂಡರೆ ಮಳೆ ಬಹಳ. ಮೈನೆಂದರೆ ಲೇಸು, ಸಂತೋಷ ಸಂಕ್ರಾಂತ್ರಿ ಆದರೆ ಧಾನ್ಯ ಅಗ್ಗವು.

**ಕಾರ್ಯಗಳು—** ಈ ನಕ್ಷತ್ರದಲ್ಲಿ ಹೆಸರನಿಡಲು, ತೊಟ್ಟಿಲಕಟ್ಟಲು, ಕಿವಿಯುಚುಚ್ಚಲು, ವೈದ್ಯಮಕೊಳ್ಳಲು, ಮದುವೆಮಾಡಲು, ಅಲಂಕಾರ ಮಾಡಲು, ಆಭರಣ ಧರಿಸಿಕೊಳ್ಳಲು, ತೋಟಮಾಡಲು, ಕೆರೆ-ಭಾಂವಿ ಕಟ್ಟಲು, ಮೂಲಸ್ತಸನ ದೇಗಿಲಕಟ್ಟಲು, ಮನೆಯುಕಟ್ಟಲು, ಹೊಸ ಹಗೆವು ತೆಗೆಯಲು, ಕಂದ-ಮೂಲ ಮೊದಲಾದ ವಸ್ತುಗಳ ಬಿತ್ತಲು, ಭೂತಬಿಡಿದರೆ ಬಿಡಿಸಲು, ಕೋಟೆಯುಕಟ್ಟಲು ಇವೇ ಮೊದಲಾದ ಶುಭಕಾರ್ಯಂಗಳಿಗೆ ಲೇಸು

ಮೂಲಾನಕ್ಷತ್ರದಲ್ಲಿ ಹುಟ್ಟಿದವನು ಧೈರ್ಯವಂತನಾಗುವನು, ಧನಾಢ್ಯನಾಗುವನು, ಸಾಹಸವಂತನು, ವಿದ್ಯಾವಂತನಾಗುವನು. ತೊಡೆಯಲ್ಲಿ ರೋಗಿಯಾಗುವನು, ಸಂಚಲಚಿತ್ತನಾಗುವನು. ವಿ... ಬಹು ವ್ರತವಂತನಾಗುವನು, ಬಂಧುಗಳಿಗೆ ಪ್ರಿಯನು, ಸ್ತ್ರೀಲೋಲನಾಗುವನು. ೧ ಚರಣಕ್ಕೆ ತಂದೆ ನಾಶವಾಗುವನು. ೨ ಚರಣಕ್ಕೆ ತಾಯಿ ನಾಶವಾಗುವನು. ೩ ಚರಣಕ್ಕೆ ಮಂದ ಸೂರ್ಯನಾಗುವನು, ಸಿರಿವಂತನಾಗುವನು ೪ ಚರಣಕ್ಕೆ ಹಿರಿತನವುಳ್ಳವನಾಗುವನು. ಕೇತುವಿನ ಮಹದರ್ಶಾ. ಹುಟ್ಟಿದ ೧ ವರುಷಕ್ಕೆ ಭಯ. ೬ ವರುಷಕ್ಕೆ ಜ್ವರಭಯ ೬ ವರುಷಕ್ಕೆ ಹೊಟ್ಟೆಬೇನೆ ಮೂಲಾದಲ್ಲಿ ಹುಟ್ಟಿದಾತಗಾ ಶಾಂತಿ ನಿರ್ಯತ್ಯ ಇಷ್ಟು ಪರಿಹಾರವಾಗಲು ೯೩ ವರುಷ ಪರಮ

ಆಯುಷ್ಯವಂತನು. ಹೆಣ್ಣು ಜನಿಸಿದರೆ ದೊಡ್ಡ ಕಂಗಳು. ಮೂಲದಲ್ಲಿ ಕರಿ ಹರವದು.

## ೨೦ ಪೂರ್ವಾಷಾಢಾ ನಕ್ಷತ್ರದ ಫಲ

ಬು ಧ ಬಾ ಡ ಪೂರ್ವಾಷಾಢಾ; ತಾರೆ ೬, ಖಂಡೆದ ಆಕೃತಿ, ಮನುಷ್ಯ ಗಣ, ನೈಋತ್ಯನಾದಿದೇವತೆ, ಕುಲ ವಿಪ್ರಜಾತಿ, ೪ ಪಾದ, ಅಧೋಮುಖ ವಿಶಾಲಕಣ್ಣು. ೨೪ ವಿಷಘಳಿಗೆ, ಮೊದಲು ೧೪ ಘಳಿಗೆ ಕಳೆದು ಸೀರನೆರ- ಕೊಂಡು ದಕ್ಷಿಣಕ್ಕೆ ಪಶ್ಚಿಮಕ್ಕೆ ಪ್ರೈಣ. ವ್ಯಾಧಿಬಂದರೆ ಹೀನ, ಶಾಂತಿ ಯಿಂದ ಲೇಸು. ಇದರ ಯೋಗ– ರವಿವಾರ ರಾಜಯೋಗ, ಸೋಮವಾರ ಉತ್ಪತ್ಯಯೋಗ, ಮಂಗಳವಾರ ಯಮಕಂಟಕಯೋಗ, ಬುಧವಾರ ಶುಭ ಯೋಗ, ಗುರುವಾರ ಲಾಭಯೋಗ, ಶುಕ್ರವಾರ ಮೃತ್ಯುಯೋಗ, ಶನಿ ವಾರ ನಿರ್ಜರಯೋಗ. ಆರಿದ್ರಾದಲ್ಲಿ ಕ್ರೂರಗ್ರಹವಿರಲು ಮಹಾ ಶೂಲ ಯೋಗ. ಶ್ರಾವಣಮಾಸದಲ್ಲಿ ಉತ್ಪತ್ಯಕಂಡರೆ ಸಂತೋಷ. ಸಂಕ್ರಾಂತ್ರಿ ಆದರೆ ಧಾನ್ಯ ಅಗ್ಗ. ವೈನೆರದರೆ ದೋಷ, ಶಾಂತಿಯಿಂದ ಲೇಸು.

**ಕಾರ್ಯಗಳು—** ಈ ನಕ್ಷತ್ರದಲ್ಲಿ ಸುಳಿಗರಿಕೆ, ನೆಲ್ಲಬಿತ್ತಲು, ಗೋದಿ ಬಿತ್ತಲು, ಅಕ್ಷರವಕಲಿಯಲು, ಮುತ್ತು-ರತ್ನಗಳ ಧರಿಸಿಕೊಳ್ಳಲು ಇಂಥ ಕಾರ್ಯಗಳಿಗೆ ಲೇಸು.

ಈ ನಕ್ಷತ್ರದಲ್ಲಿ ಹುಟ್ಟಿದ ಶಿಶುವು ಊರ್ಧ್ವ ತನು, ಸಹಜನಾಹನು, ಪೂಜ್ಯನಾಹನು, ದಾನಿಯಾಹನು, ಭೋಗಿಯಾಹನು, ಜನವಂತನಾಹನು. ೧ ಚರಣಕ್ಕೆ ಕೋಪಿ, ಕವಿಯಾಗುವನು. ೨ ಚರಣಕ್ಕೆ ಹಾಸ್ಯಗಾರನು, ಜಾಣನಾಹನು. ೩ ಚರಣಕ್ಕೆ ಗುಣವಂತನು. ೪ ಚರಣಕ್ಕೆ ನಿಷ್ಠುರ ನಾಹನು, ಸುಳ್ಳನಾಹನು. ಶುಕ್ರನ ಮಹರ್ದಶಾ. ಹುಟ್ಟಿದ ೨ ವರುಷಕ್ಕೆ ಗಂಡಾಂತರ. ೫ ವರುಷಕ್ಕೆ ಭಯ. ೮ ವರುಷಕ್ಕೆ ಅಗ್ನಿಭಯ. ೧೬ ವರುಷಕ್ಕೆ ಮಹಾಭಯ, ಗೋಭಯ. ೩೭ ವರುಷಕ್ಕೆ ಶಸ್ತ್ರಭಯ. ೪೪ ವರುಷಕ್ಕೆ ಭಯ. ೭೦ ವರುಷಕ್ಕೆ ಮೃತ್ಯುಭಯ. ಇವು ಪರಿಹಾರವಾಗಲು ೯೧ ವರುಷ ಪರಮಾಯುಷ್ಯವು ೩ ಪಾದಕ್ಕೆ ಗಂಡಾಂತರವು, ತಂದೆಯ ನುಂಗುವನು. ಕನ್ನಿಕೆ ಜನಿಸಲು ಬಂಜೆಯಾಹಳು.

# ೨೧ ಉತ್ರಾಷಾಢಾ ನಕ್ಷತ್ರದ ಫಲ

ಬೆ ಬೊ ಜಾ ಜಿ ಉತ್ರಾಷಾಢಾ; ನಸುಗೆಂಪು, ಸಮತಾರೆ ನಾಲ್ಕು, ಹೆಣ್ಣು ಮುಂಗಲಿ, ಮನುಷ್ಯಗಣ, ಆದಿದೇವರು ದೇವತಿ, ವಿಶಾಲ ಕಣ್ಣು, ಇಂದ್ರಮಂಡಲ, ವೃಕ್ಷ ಹಲಸಿನಮರ, ಪಕ್ಷಿ ನವಿಲು. ೨೦ ವಿಷಘಳಿಗಿ. ಅಕ್ಕಿಯ ಹಿಟ್ಟು ಮೊದ್ದು ಟೆಂಕಲು ಪಡವಲು ಪೈಣ. ಜ್ವರಬಂದರೆ ತಿಂಗಳಿಗೆ ಪರಿಹಾರ. ಇದರ ಯೋಗ– ರವಿವಾರ ಸಿದ್ಧಿಯೋಗ, ಸೋಮವಾರ ಮೃತ್ಯುಯೋಗ, ಮಂಗಳವಾರ ಕಲಹಯೋಗ, ಬುಧವಾರ ಲಾಭಯೋಗ, ಗುರುವಾರ ಸಿದ್ಧಿಯೋಗ, ಶುಕ್ರವಾರ ಸ್ತಂಭಯೋಗ, ಶನಿವಾರ ವಿಷ ಯೋಗ. ತದಗಿ ಸೋಮವಾರ ಬರಲು ನಿರ್ಜರಯೋಗ. ಮಾರ್ಗಶಿರ ದೊಳಗೆ ಉತ್ಪತ್ಯಕಂಡರೆ ಸಂತೋಷ. ಸಂಕ್ರಾಂತ್ರಿ ಆದರೆ ಧಾನ್ಯ ಅಗ್ಗ. ಮೈನೆರದರೆ ಪತಿವ್ರತಿಯಾಗುವಳು, ಮಕ್ಕಳ ಹಡಿವಳು, ದಯಾಳು ಗುಣ ದವಳು.

**ಕಾರ್ಯಗಳು—** ಈ ನಕ್ಷತ್ರದಲ್ಲಿ ಹೆಸರನಿಡಲು, ಅನ್ನಶಾಂತಿಯ ಮಾಡಲು, ವೇದ-ಶಾಸ್ತ್ರ ಕಲಿಯಲು, ಮದುವೆಯಮಾಡಲು, ಮಜ್ಜನ ಮಾಡಲು, ನೇಗಿಲಹೊಡಿಯಲು, ಪಟ್ಟಾಭಿಷೇಕಮಾಡಲು, ಊರು ಮನೆ ಕಟ್ಟಲು, ಬಿತ್ತಲು, ಉದ್ಯೋಗಮಾಡಲು ಇವೇ ಮೊದಲಾದ ಶುಭಕಾರ್ಯ ಗಳಿಗೆ ಲೇಸು.

ಇದರಲ್ಲಿ ಶಿಶುವು ಹುಟ್ಟಿದರೆ ಪ್ರಾಜ್ಞನಾಗುವನು, ಸರ್ವ ಗುಣವುಳ್ಳವ ನಾಗುವನು, ಹೊಕ್ಕಳದಲ್ಲಿ ಮಚ್ಚವುಂಟು, ಬಹು ನಿದ್ರೆ, ಕುದುರೆ ವ್ಯಾಧಿ. ೧ ಚರಣಕ್ಕೆ ಪ್ರಾಜ್ಞನಾಹನು, ಮತಿವಂತನಾಹನು, ನಿಪುಣನಾಹನು, ದೊಡ್ಡ ದೇಹವುಳ್ಳವನು. ೨ ಚರಣಕ್ಕೆ ಯೋಗಿಯಾಗುವನು, ಭೋಗಿ ಯಾಗುವನು. ೩ ಚರಣಕ್ಕೆ ರೋಗಿಯಾಗುವನು. ೪ ಚರಣಕ್ಕೆ ಜಗಳಗಂಟ ನಾಹನು. ಸೂರ್ಯನ ಮಹರ್ದಶಾ. ತೊಡೆ ಗಂಡಾಂತರವು. ೮೦ ವರುಷ ಪರಮಾಯುಷ್ಯ. ಹೆಣ್ಣು ಜನಿಸಲು ಭೋಗಿಯಾಹಳು. ಪುತ್ರವಂತಿಹಳು. ಕಿಂಚಿತ ಜಾರಿಯಾಗುವಳು.

# ೨೨ ಶ್ರವಣಾ ನಕ್ಷತ್ರದ ಫಲ

ಕಿ ಕು ಕೇ ಕೊ ಶ್ರವಣಾ; ಕಪ್ಪಿನವರ್ಣ, ತಾರೆ ೪, ಮದ್ದಳೆ ಆಕಾರ, ದೇವಗಣ, ಯೋನಿ ಗಂಡು ಕಪ್ಪಿ, ೪ ಪಾದ, ಅಧಮತಾರೆ, ಸಮದೃಷ್ಟಿ, ಇಂದ್ರಮಂಡಲ, ವೃಕ್ಷ ನೆಲ್ಲಿಯಮರ, ಪಕ್ಷಿ ಸಾಳುಗ. ವಿಭೀಷಣ ಪುಟ್ಟಿದ. ೨೦ ವಿಷಘಳಿಗಿ. ನೆಲ್ಲಕ್ಕಿ ಹಿಟ್ಟು ಮೆದ್ದು ಬಡಗಲು ಮೂಡಲು ಹೋಗು ವದು. ವ್ಯಾಧಿಬಂದರೆ ೧೧ ದಿನಕ್ಕೆ ಪರಿಹಾರ. ಇದರ ಯೋಗ– ರವಿವಾರ ಸಿದ್ಧಿಯೋಗ, ಸೋಮವಾರ ಅಮೃತಯೋಗ, ಮಂಗಳವಾರ ಮೃತ್ಯು ಯೋಗ, ಬುಧವಾರ ಶುಭಯೋಗ, ಗುರುವಾರ ಶುಭಯೋಗ, ಶುಕ್ರವಾರ ಉತ್ಪತ್ಯಯೋಗ, ಶನಿವಾರ ಯಮಕಂಟಕಯೋಗ. ಸೋಮವಾರ ಷಷ್ಠಿ ಬರಲು ವಿಷಯೋಗ, ಚೌತಿಬರಲು ಹೀನಯೋಗ. ಕೃತ್ತಿಕದಲ್ಲಿ ಕ್ರೂರಗ್ರಹ ವಿರಲು ಮಹಾ ಶೂಲಯೋಗ. ಮಾಘಮಾಸದಲ್ಲಿ ಉತ್ಪತ್ಯಕಂಡರೆ ಮಹಾ ಲೇಸು. ಸಂಕ್ರಾಂತ್ರಿ ಆದರೆ ಧಾನ್ಯ ಅಗ್ಗ. ಮೈನೆರದರೆ ಲೇಸು.

**ಕಾರ್ಯಗಳು—** ಈ ನಕ್ಷತ್ರದಲ್ಲಿ ಕಿವಿಯಚುಚ್ಚಲು, ಹೆಸರನಿಡಲು, ಛತ್ರವಮಾಡಲು, ಜಡಿಯನಿಳವಲು, ಅಕ್ಷರವಕಲಿಯಲು, ಅಲಂಕಾರ ನಿಡಲು, ವೇದ-ಶಾಸ್ತ್ರಕಲಿಯಲು, ಲಕ್ಷಣವನೋಡಲು, ಮುತ್ತು-ಮಾಣಿಕವ ಕೊಳ್ಳಲು, ಪಟ್ಟಾಭಿಷೇಕಮಾಡಲು, ಊರುಕಟ್ಟಲು, ಮುಂಜಿವೆಯ ಮಾಡಲು, ಉಪದೇಶವ ತುಂಬಿಸಲು, ಬೀಜವ ಬಿತ್ತಲು, ಪಿತೃಕಾರ್ಯ ಮಾಡಲು ಇಂಥ ಶುಭಕಾರ್ಯಗಳಿಗೆ ಲೇಸು.

ಶಿಶುವು ಹುಟ್ಟಿದರೆ ಮೈಯೆಲ್ಲ ಕಣ್ಣು, ಚಿಬ್ಬು ಹತ್ತುವದು, ಸ್ತ್ರೀ–ಯರಿಗೆ ಪ್ರಿಯವುಳ್ಳವನು, ಸ್ತ್ರೀ ಸಂಭೋಗಿಯಾಗುವನು, ಸ್ತ್ರೀಯರಿಗೆ ಅಳಪುವನು, ಅಕ್ಷರವ ಕಲಿವನು, ಧನಾಢ್ಯನಾಹನು, ತಿಗದಲ್ಲಿ ಮಚ್ಚೆ ಉಂಟು. ೧ ಚರಣಕ್ಕೆ ಜಗಳಗಂಟನಾಹನು, ಟೊಂಕಬೇನೆಯವನಾಹನು. ೨ ಚರಣಕ್ಕೆ ಸ್ತ್ರೀಯರ ಸಂಭೋಗಿಯಾಹನು. ೩ ಚರಣಕ್ಕೆ ಉದಾರಿಯು ಆಗುವನು. ೪ ಚರಣಕ್ಕೆ ಧನಾಢ್ಯನಾಹನು. ಹುಟ್ಟಿದ ೧೦ ವರುಷದಲ್ಲಿ ಗಂಡಾಂತರವು. ೩ ವರುಷಕ್ಕೆ ಸರ್ಪಿನ ಭಯು. ೭ ವರುಷಕ್ಕೆ ಅಗ್ನಿಯ

ಭಯ. ೧೩ ವರುಷಕ್ಕೆ ಜ್ವರಭಯ. ೨೩ ವರುಷಕ್ಕೆ ಮಹಾ ಕಂಟಕ. ೭೨ ವರುಷಕ್ಕೆ ಅಪಮೃತ್ಯು. ಇಂತಿವು ಪರಿಹಾರವಾದರೆ ೯೦ ವರುಷ ಪರಮಾಯುಷ್ಯ. ರಾಹುವಿನ ಮಹದರ್ಶಾ. ಹೆಣ್ಣು ಜನಿಸಲು ಸೌಭಾಗ್ಯ ವಂತಿಯಾಗುವಳು.

## ೨೩ ಧನಿಷ್ಠಾ ನಕ್ಷತ್ರದ ಫಲ

ಗಾ ಗಿ ಗು ಗೆ ಧನಿಷ್ಠಾ; ಮೃದ್ಧಳಿ ಆಕಾರ, ಹೆಣ್ಣು ನಕ್ಷತ್ರ, ರಾಕ್ಷಸ ಗಣ, ಇಂದ್ರಮಂಡಲ, ವೃಕ್ಷ ಶೀಗೆಯ ಮರ, ಆ ಎಂಬುವ ಅಕ್ಷರ, ಒಂದು ಘಳಿಗಿ ಕಳೆದು ಯತಿಗೆ ನೆಲ್ಲಿಯುಚಿಟ್ಟು ಮೆಟ್ಟು ಒಡಗಲು ಮಾಡಲು ಪ್ರೈಣ. ಜ್ವರಬಂದರೆ ಒಂದ ಘಳಿಗೆ ಪರಿಹಾರ. ಇನ್ನು ನಕ್ಷತ್ರಯೋಗ— ರವಿವಾರ ಕಲಹಯೋಗ, ಸೋಮವಾರ ಶುಭಯೋಗ, ಮಂಗಳವಾರ ಮೃತ್ಯು ಯೋಗ, ಬುಧವಾರ ಭಯಯೋಗ, ಗುರುವಾರ ವಿಷಯೋಗ, ಶುಕ್ರವಾರ ನಾಶಯೋಗ, ಶನಿವಾರ ಹಾನಿಯೋಗ. ಹುಣ್ಣಿವೆ ಬರಲು ಮೃತ್ಯುಯೋಗ. ಆಷಾಢಮಾಸದಲ್ಲಿ ಉತ್ಪತ್ಯಕ್ಕಂಡರೆ, ಕಾಮನಬಿಲ್ಲು ಮಾಡಿದರೆ ಮಳೆ ಯುಕ್ಕುಂ. ಸಂಕ್ರಾಂತ್ರಿ ಆದರೆ ಹೀನವು. ವ್ಯೈನೆರದರೆ ಪುತ್ರವಂತಿಹಳು.

**ಕಾರ್ಯಗಳು—** ಧನಿಷ್ಠದಲ್ಲಿ ಕಿವಿಯಚುಚ್ಚಲು, ಹೆಸರನಿಡಲು, ಮದುವೆಯಮಾಡಲು, ಬೀಜವಬಿತ್ತಲು, ಪಟ್ಟಾಭಿಷೇಕಮಾಡಲು, ಆನೆ ಕುದುರೆ ಶೃಂಗಾರಮಾಡು ಇಂಥ ಶುಭಕಾರ್ಯಮಾಡಲಿಕ್ಕೆ ಲೇಸು.

ಶಿಶುವು ಹುಟ್ಟಿದರೆ ಉಷ್ಣ ಪ್ರಕೃತಿಯನು, ಶಾಸ್ತ್ರವ ನೋಡುವವನು, ಗಾಯತ್ರಿ ಗಾಯನ ಕಲಿವನು, ಶ್ರೇಷ್ಠನಾಹನು, ಕರುಣಿಯಾಹನು, ಧೂರ್ತ ನಾಹನು, ಸಹಜನಾಹನು. ೧ ಚರಣಕ್ಕೆ ಸ್ಥೂಲ ಕಾಯ. ೨ ಚರಣಕ್ಕೆ ಸುಖಭೋಜನನಾಹನು, ಶಾಸ್ತ್ರಿಕನಾಹನು, ಗುಣವಂತನಾಹನು, ನಿಪುಣ ನಾಹನು ೩ ಚರಣಕ್ಕೆ ಮಾನ್ಯನಾಹನು. ೪ ಚರಣಕ್ಕೆ ಕಳ್ಳನಾಹನು. ಮಂಗಳನ ಮಹದರ್ಶಾ. ಹುಟ್ಟಿದ ೫ ವರುಷಕ್ಕೆ ಜ್ವರಭಯ. ೮ ವರುಷಕ್ಕೆ ಮೃತ್ಯುಭಯ. ೧೫ ವರುಷಕ್ಕೆ ಮಹಾಭಯು, ಸುಂಗಿಭಯ, ಶೃಂಗಿಭಯ.

೬೫ ವರುಷಕ್ಕೆ ಮೃತ್ಯುಭಯು, ಅಪಮೃತ್ಯು. ಇಂತಿವು ಪರಿಹಾರವಾದರೆ ೭೫ ವರುಷ ಪರಮಾಯುಷ್ಯ. ಹೆಣ್ಣು ಜನಿಸಲು ದಾನಿಯಾಹಳು.

## ೨೪ ಶತತಾರಾ ನಕ್ಷತ್ರದ ಫಲ

ಗೊ ಸಾ ಸಿ ಸು ಶತತಾರಾ; ಕೆಂಪುವರ್ಣ, ರಾಕ್ಷಸಗಣ, ಯೋನಿ ಹೆಣ್ಣು ಕುದುರೆ, ವರುಣಮಂಡಲ, ವೃಕ್ಷ ಅಡಸಾಲದಮರ, ಪಕ್ಷಿ ಕೋಗಿಲೆ. ತಾಯತ ಆಕಾರ, ೧೦ ವಿಷಘಳಿಗಿ. ಅನ್ನ ಉಂಡು ಮಾಡಲು ಬಡಗಲು ಪ್ರೈಣ. ಜ್ವರಬಂದರೆ ೧೦ ದಿನಕ್ಕೆ ಪರಿಹಾರ. ಈ ನಕ್ಷತ್ರದ ಯೋಗ–ರವಿವಾರ ನಾಶಯೋಗ, ಸೋಮವಾರ ಸಿದ್ಧಿಯೋಗ, ಮಂಗಳವಾರ ನಾಶಯೋಗ, ಬುಧವಾರ ಲಾಭಯೋಗ, ಗುರುವಾರ ಕಲಹಯೋಗ, ಶುಕ್ರವಾರ ವಿಷಯೋಗ, ಶನಿವಾರ ಲಾಭಯೋಗ. ಸ್ವಾತಿಯಲ್ಲಿ ಕ್ರೂರಗ್ರಹ ವಿರಲು ಶೂಲಯೋಗ. ಸಂಕ್ರಾಂತ್ರಿ ಆದರೆ ಸುಖ. ಮೈನೆರದರೆ ಶುಭ, ಪುತ್ರವಂತಿಯಾಗುವಳು, ಜಗಳಗಂಟಿಯಾಗುವಳು, ಭೋಗಕ್ಕೆ ಪ್ರಿಯಳು. ಶುಭಕಾರ್ಯಕ್ಕೆ ಲೇಸು.

ಶಿಶುವು ಹುಟ್ಟಿದರೆ ಮಾನ್ಯನಾಹನು. ಪುತ್ರವಂತನಾಹನು. ಬಂಧುಗಳಿಗೆ ಪ್ರಿಯನು. ಸಿರಿವಂತನಾಹನು. ವೈರಿಗಳ ಗೆಲಿಯುವನು. ೧ ಚರಣಕ್ಕೆ ಹೆಣ್ಣಿಗೆ ಪ್ರಿಯನಾಹನು. ೨ ಚರಣಕ್ಕೆ ಜಗಳಗಂಟನಾಹನು. ೩ ಚರಣಕ್ಕೆ ಬುದ್ಧಿವಂತನಾಹನು. ೪ ಚರಣಕ್ಕೆ ಭಾಗ್ಯವಂತನಾಹನು. ರಾಹುವಿನ ಮಹರ್ದಶಾ. ಹುಟ್ಟಿದ ೧ ವರುಷಕ್ಕೆ ಮಹಾ ಗಂಡಾಂತರವು. ೨ ವರುಷಕ್ಕೆ ಯಮಕಂಟಕ. ೬ ವರುಷಕ್ಕೆ ಮಹಾ ಕಂಟಕ ೧೨ ವರುಷಕ್ಕೆ ಅಪಮೃತ್ಯು. ೩೭ ವರುಷಕ್ಕೆ ಮಹಾ ಭಯ ೪೪ ವರುಷಕ್ಕೆ ಗಂಡಾಂತರವು. ಇವು ಪರಿಹಾರವಾಗಲು ೮೬ ವರುಷ ಪರಮಾಯುಷ್ಯ. ಹೆಣ್ಣು ಜನಿಸಿದರೆ ವೇಶ್ಯೆಯಾಗುವಳು.

## ೨೫ ಪೂರ್ವಾಭಾದ್ರಪದ ನಕ್ಷತ್ರದ ಫಲ

ಸೆ ಸೊ ದಾ ದಿ ಪೂರ್ವಾಭಾದ್ರಪದ; ತಾರೆ ೨, ಕರೇವರ್ಣ, ಮನುಷ್ಯಗಣ, ವಿಪ್ರಜಾತಿ, ಉಗ್ರತಾರೆ, ವೃಕ್ಷ ನೀರಲಮರ, ಪಕ್ಷಿ ಕಪೋತ, ಇಂದ್ರ

ಮಂಡಲ, ೧೬ ವಿಷಘಳಿಗಿ ಯತಿಗೆ ವರ್ಜ್ಯ. ಜೇನತುಪ್ಪ ಮೆದ್ದು ಉತ್ತರಕ್ಕೆ ಪೂರ್ವಕ್ಕೆ ಪ್ರೈಣ. ಜ್ವರಬಂದರೆ ತಿಂಗಳಿಗೆ ಪರಿಹಾರ. ಇಂದ್ರನಾದಿ ದೇವತೆ. ಈ ನಕ್ಷತ್ರದ ಯೋಗ- ರವಿವಾರ ನಾಶಯೋಗ, ಸೋಮವಾರ ಶುಭ ಯೋಗ, ಮಂಗಳವಾರ ಸಿದ್ಧಿಯೋಗ, ಬುಧವಾರ ಲಾಭಯೋಗ, ಗುರು ವಾರ ಕಷ್ಟಯೋಗ, ಶುಕ್ರವಾರ ಶೂಲಯೋಗ, ಶನಿವಾರ ನಾಶಯೋಗ. ಚಿತ್ತಿಯಲ್ಲಿ ಕ್ರೂರಗ್ರಹವಿರಲು ಶೂಲಯೋಗ. ಸಂಕ್ರಾಂತ್ರಿ ಆದರೆ ಶುಭ ಯೋಗ, ಧಾನ್ಯ ಅಗ್ಗ. ಮೈನೆರದರೆ ವ್ಯಾಧಿಯಾಹಳು, ದರಿದ್ರೆಯಾಗುವಳು. ಚೆನ್ನಾಗಿ ಶಾಂತಿಮಾಡಿದರೆ ಲೇಸು. ಹೀನಕಾರ್ಯಕ್ಕೆ ಮಹಾ ಲೇಸು.

ಶಿಶುವು ಹುಟ್ಟಿದರೆ ಹೀನನಾಹನು, ಅನ್ನ ಬಹಳ ಉಂಬುವನು, ಕೋಪಿಯಾಗುವನು, ಕರ್ಣರೋಗಿ. ೧ ಚರಣಕ್ಕೆ ಉದ್ಯೋಗಮಾಡುವನು. ೨ ಚರಣಕ್ಕೆ ತಾಯಿ-ತಂದೆಗೆ ಪ್ರಿಯನು, ತಾಯಿ ಸಾವುವಳು. ೩ ಚರಣಕ್ಕೆ ರೋಗಿಯಾಗುವನು. ೪ ಚರಣಕ್ಕೆ ಭೋಗಿಯಾಗುವನು. ಗುರುವಿನ ಮಹರ್ದಶಾ. ೧೬ ವರುಷಕ್ಕೆ ವ್ರತವಂತನಾಗುವನು, ವ್ರತಭಯ. ೩ ವರುಷಕ್ಕೆ ಶಸ್ತ್ರಭಯ. ೬ ವರುಷಕ್ಕೆ ಮಹಾ ಭಯ. ೨೦ ವರುಷಕ್ಕೆ ಭಯ. ೪೫ ವರುಷಕ್ಕೆ ರಾಜಭಯ. ಇಂತಿ ಇವನೆಲ್ಲ ಗೆಲಿದರೆ ೮೬ ವರುಷ ಪರಮ ಆಯುಷ್ಯವು. ಕನ್ಯಕೆ ಜನಿಸಲು ಮಾನಹೀನಿ, ಜಾರಿಯಾಗುವಳು.

## ೨೬ ಉತ್ರಾಭಾದ್ರಪದ ನಕ್ಷತ್ರದ ಫಲ

ದುಸಂಜಾತ ಉತ್ರಾಭಾದ್ರಪದ; ತಾರೆ ೨, ಮನುಷ್ಯಗಣ, ಯೋನಿ ಆಕಳು, ಕ್ಷತ್ರಿಯಜಾತಿ, ಊರ್ಧ್ವಮುಖ, ೪ ಪಾದ, ವಾಯು ಮಂಡಲ, ಸಮದೃಷ್ಟಿ, ವೃಕ್ಷ ಮುತ್ತಲಮರ, ದೇವಗಣ, ಆ ಎಂಬುವ ಅಕ್ಷರ, ಇಂದ್ರನಾದಿದೈವತ. ೨೦ ವಿಷಘಳಿಗಿ. ನೆಲ್ಲಕ್ಕಿಯ ಮೆದ್ದು ಪೂರ್ವಕ್ಕೆ ಉತ್ತರಕ್ಕೆ ಗಮನ. ಜ್ವರಬಂದರೆ ೭ ದಿನಕ್ಕೆ ಪರಿಹಾರ. ಈ ನಕ್ಷತ್ರಯೋಗ- ರವಿವಾರ ಹೀನಯೋಗ, ಸೋಮವಾರ ಸಿದ್ಧಿಯೋಗ, ಮಂಗಳವಾರ ನಾಶ ಯೋಗ, ಬುಧವಾರ ಲೇಸುಯೋಗ, ಗುರುವಾರ ಶುಭಯೋಗ, ಶುಕ್ರವಾರ ಸಿದ್ಧಿಯೋಗ, ಶನಿವಾರ ಮರಣಯೋಗ. ಸಂಕ್ರಾಂತ್ರಿ ಆದರೆ ಧಾನ್ಯ ಅಗ್ಗ. ಮೈನೆರದರೆ ಭಾಗ್ಯವಂತಿಯಾಗುವಳು. ಶುಭಕಾರ್ಯಂಗಳಿಗೆ ಲೇಸು.

ಶಿಶುವು ಹುಟ್ಟಿದರೆ ಕಾರ್ಯಕರ್ತನಾಹನು, ಪಾತ್ರ ಗೀತವ ಕೇಳುವನು, ಬಹು ಪ್ರಿಯವುಳ್ಳವನಾಹನು, ಬುದ್ಧಿವಂತನಾಹನು, ಧನಪತಿಯಾಗುವನು. ೧ ಚರಣಕ್ಕೆ ಗುಣವಂತನಾಹಾನು, ಶ್ರೇಷ್ಠನಾಹನು. ೨ ಚರಣಕ್ಕೆ ಧನಾಢ್ಯ ನಾಹನು. ೩ ಚರಣಕ್ಕೆ ಶಾಸ್ತ್ರಿಕನಾಹನು, ಸುಖಿಯಾಗುವನು. ೪ ಚರಣಕ್ಕೆ ಶೂರನಾಹನು. ಶನಿಯ ಮಹರ್ದಶಾ. ಹುಟ್ಟಿದ ೩ ದಿನಕ್ಕೆ ಮರಣ. ೭ ದಿನಕ್ಕೆ ವ್ಯಾಧಿ ೭ ವರುಷಕ್ಕೆ ಮೃತ್ಯುಭಯ. ೨೦ ವರುಷಕ್ಕೆ ಗಂಡಾಂತರವು. ಇವನ್ನು ಗೆಲಿದರೆ ೯೦ ವರುಷ ಪರಮಾಯುಷ್ಯವು. ಉತ್ರಾಭಾದ್ರ ಪದದಲ್ಲಿ ತದಿಗಿ ಕೂಡಿಬರಲು ಶೂಲಯೋಗ. ಸೂರ್ಯ ಮಹರ್ದಶಾ. ಹೆಣ್ಣು ಜನಿಸಲು ಜಾರಿಯಾಗುವಳು.

## ೨೭ ರೇವತಿ ನಕ್ಷತ್ರದ ಫಲ

ದೆ ದೊ ಚಾ ಚಿ ರೇವತಿ; ೧೩ ತಾರೆ, ಮೀನಿನ ಆಕಾರ, ಬಿಳಿಯ ವರ್ಣ, ಊರ್ಧ್ವ ಮುಖ, ೪ ಪಾದ, ದೇವಗಣ, ಯೋನಿ ಹೆಣ್ಣಾನೆ, ವೃಕ್ಷ, ಪಕ್ಷಿ ಅರ್ಧತಾರೆ, ಸ್ಥಾನ ಶೂನ್ಯ, ವಾಯುಮಂಡಲ, ಆ ಎಂಬುವ ಅಕ್ಷರ, ೧೦ ವಿಷಘಳಿಗಿ. ಯತಿಗೆ ಸುಖ. ವ್ಯಾಧಿಬಂದರೆ ಪ್ರಾಣಭಯ. ೧೧ ದಿನಕ್ಕೆ ಪರಿಹಾರ. ಇನ್ನು ನಕ್ಷತ್ರಯೋಗ– ರವಿವಾರ ಶುಭಯೋಗ, ಸೋಮವಾರ ಕಲಹಯೋಗ, ಮಂಗಳವಾರ ಸಿದ್ಧಿಯೋಗ, ಬುಧವಾರ ಉತ್ಪತ್ಯಯೋಗ, ಗುರುವಾರ ಶುಭಯೋಗ, ಶುಕ್ರವಾರ ಜಲಯೋಗ, ಶನಿವಾರ ಶುಭಯೋಗ. ಮಘಾನಕ್ಷತ್ರದಲ್ಲಿ ಕ್ರೂರಗ್ರಹವಿರಲು ಶೂಲ ಯೋಗ. ಶುಭಕಾರ್ಯಕ್ಕೆ ಬೀಜಮುಹೂರ್ತ. ಸಂಕ್ರಾಂತ್ರಿ ಆದರೆ ಶುಭ. ವೈನೆರದರೆ ಸೌಭಾಗ್ಯವಂತಿಯಾಗುವಳು, ಪುತ್ರವಂತಿಯಾಗುವಳು. ಧನ ಧಾನ್ಯ ಸಂಪದವು.

**ಕಾರ್ಯಗಳು—** ರೇವತಿಯಲ್ಲಿ ಕಿವಿಯಚುಚ್ಚಲು, ಮದುವೆಯ ಮಾಡಲು, ಮುಂಜಿವೆಯಮಾಡಲು, ಭಾಂವಿ-ಕೆರೆ ಕಟ್ಟಿಸಲು, ಪಟ್ಟಾಭಿ ಷೇಕ ಮಾಡಲು, ಅಂದಣವನೇರಲು, ಚತುರಂಗಬಲವ ಕೂಡಿಸಲು, ಕಂದ-ಮೂಲವ ಬಿತ್ತಲು, ಛತ್ರ-ಚಾಮರ ಹಿಡಿಸಿಕೊಳ್ಳಲು, ಮನೆಯ

ಕಟ್ಟಲು, ಅನ್ನಶಾಂತಿಯ ಮಾಡಲು, ಮುತ್ತು-ರತ್ನಗಳ ಧರಿಸಿಕೊಳ್ಳಲು, ಹೊರಸು ಹೆಣಿಯುಲು ಇಂಥ ಶುಭಕಾರ್ಯಗಳಿಗೆ ಮಹಾ ಲೇಸು.

ಶಿಶುವು ಹುಟ್ಟಿದರೆ ನಿಷ್ಠುರನಾಗುವನು, ಶೂರನಾಗುವನು, ನಿಪುಣನಾಹನು, ಮೌನನಾಹನು, ಕೆಂಪುಕಣ್ಣು, ಭೋಗಿಯಾಗುವನು, ಉತ್ಪತ್ಯನು, ಹೊಟ್ಟೆಯಲ್ಲಿ ಮಚ್ಚೆ, ಸ್ತ್ರೀ ಸಂಭೋಗಿಯಾಗುವನು, ಭಾಗ್ಯವಂತನಾಹನು. ೧ ಚರಣಕ್ಕೆ ಗುಣವಂತನು, ವಿದ್ಯಾವಂತನು, ನಿಪುಣನು, ಚಪಲನು. ೨ ಚರಣಕ್ಕೆ ಹೀನ ದೇಹದವನಾಗುವನು, ದೇಹ ನಾರುವದು. ೩ ಚರಣಕ್ಕೆ ಹೀನನಾಹನು. ೪ ಚರಣಕ್ಕೆ ಉದಾರಿಯಾಗುವನು, ಧನಿಕನಾಗುವನು. ಬುಧನ ಮಹರ್ದಶಾ. ಹುಟ್ಟಿದ ೩ ವರುಷಕ್ಕೆ ಭಯ. ೭ ವರುಷಕ್ಕೆ ಯಮಕಂಟಕ, ಗುಲ್ಮರೋಗ. ೬೦ ವರುಷಕ್ಕೆ ಮೃತ್ಯುಭಯ. ಇವು ಪರಿಹಾರವಾಗಲು ೯೭ ವರುಷ ಪರಮಾಯುಷ್ಯವು. ಹೆಣ್ಣು ಜನಿಸಿದರೆ ಪುತ್ರವಂತಿಯಾಗುವಳು

---

# ಯೋಗೀಶ್ವರನ ಪ್ರಶ್ನೆಯು

**ಈ ಶಕುನವನ್ನು ಆದಿತ್ಯವಾರ, ಬ್ರಹಸ್ಪತಿವಾರ, ಬುಧವಾರ ದಿವಸ ಶುಚಿರ್ಭೂತರಾಗಿ ಬೆಟ್ಟಡಿಕೆಯನ್ನು ಇಟ್ಟು ಕೇಳುವದು.**

| | | | | | | | |
|---|---|---|---|---|---|---|---|
| ೧೧೧ | ೧೧೨ | ೧೧೩ | ೧೧೪ | ೧೨೧ | ೧೨೨ | ೧೨೩ | ೧೨೪ |
| ೧೩೧ | ೧೩೨ | ೧೩೩ | ೧೩೪ | ೧೪೧ | ೧೪೨ | ೧೪೩ | ೧೪೪ |
| ೨೧೧ | ೨೧೨ | ೨೧೩ | ೨೧೪ | ೨೨೧ | ೨೨೨ | ೨೨೩ | ೨೨೪ |
| ೨೩೧ | ೨೩೨ | ೨೩೩ | ೨೩೪ | ೨೪೧ | ೨೪೨ | ೨೪೩ | ೨೪೪ |
| ೩೧೧ | ೩೧೨ | ೩೧೩ | ೩೧೪ | ೩೨೧ | ೩೨೨ | ೩೨೩ | ೩೨೪ |
| ೩೩೧ | ೩೩೨ | ೩೩೩ | ೩೩೪ | ೩೪೧ | ೩೪೨ | ೩೪೩ | ೩೪೪ |
| ೪೧೧ | ೪೧೨ | ೪೧೩ | ೪೧೪ | ೪೨೧ | ೪೨೨ | ೪೨೩ | ೪೨೪ |
| ೪೩೧ | ೪೩೨ | ೪೩೩ | ೪೩೪ | ೪೪೧ | ೪೪೨ | ೪೪೩ | ೪೪೪ |

೧೧೧ ಸರ್ವ ಲಾಭವಾದೀತು, ಅನುಮಾನಬೇಡವು.

೧೧೨ ಬಹು ಲಾಭವಾದೀತು, ಸಂದೇಹ ಬ್ಯಾಡವು.

೧೧೩ ಪುತ್ರಲಾಭ, ಧನಲಾಭ, ಹಿಡಿದ ಕಾರ್ಯ ಆದೀತು.

೧೧೪ ತನ್ನ ಮನೆ ದೇವರ ಪೂಜೆ ತಾ ಸಾಂಗಮಾಡಿದರೆ ಸುಖ.

೧೨೧ ಸಜ್ಜನರ ಸಂಗತಿ ಹಿಡಿದು ಹೋದರೆ ಸುಖದಲ್ಲಿ ಬಂದಾನು.

೧೨೨ ಲಾಭವಾದೀತು ಚಿಂತೆ ಮಾಡಬೇಡವು.

೧೨೩ ನಿನ್ನ ಮನಸ್ಸಿನಲ್ಲಿ ದಾವಕಾರ್ಯ ಅದೆ, ಆ ಕಾರ್ಯ ಸಿದ್ಧಿಯಾಗುವದು.

೧೨೪ ನಿನ್ನ ನೆಂಟರ ಭೆಟ್ಟಿಯಾದೀತು, ಹೊಸ ವಸ್ತ್ರ ಕಂಡಿ.

೧೩೧ ಬಹು ಚಿಂತೆ ಹುಟ್ಟೀತು, ದಾವಕಾರ್ಯಕ್ಕೂ ಕಷ್ಟ ತೋರೀತು.

೧೩೨ ನಿನ್ನ ಮನಸ್ಸಿನಲ್ಲಿ ಇದ್ದದ್ದು ಆಗದು, ಬರೆ ಸಂದೇಹ ಬ್ಯಾಡ.

೧೩೩ ನೀನು ನೆನೆಸಿದ ಕಾರ್ಯ ಆಗದು, ಕಷ್ಟ.

೧೩೪ ನೀನು ಸುಖ ಭೋಗಿಸಲಿಕ್ಕೆ ಹೋದೆನೆನುತಿದ್ದಿ, ಸಿದ್ಧಿ ಆದೀತು.

೧೪೧ ಪರದೇಶವತಿರುಗಿ ವೈರಾಗ್ಯ ಹುಟ್ಟಿತು, ತಪ್ಪಿತು ಅನುಮಾನಬೇಡ.

೧೪೨ ಇದರಿಂದ ಹೀನ ತೋರೀತು, ಚಿಂತೆ ತಟ್ಟೀತು, ಕಾರ್ಯಮಾಡಬೇಡ.

೧೪೩ ನೀನು ಚಿಂತೆಮಾಡಬೇಡ, ಒಳ್ಳೇದು; ದೇವರ ದಯಾ ಆದೀತು.

೧೪೪ ಶುಭಕಾರ್ಯ ಚಿಂತಿಸುತ್ತಿದ್ದೀ, ಸಿದ್ಧಿ ಆಗುವದು, ಗಣೇಶಪೂಜೆ ಮಾಡು.

೨೧೧ ನಿನ್ನ ಮನೋರಥ ಸಿದ್ಧಿ ಆದೀತು, ವಸ್ತು ಬಂದೀತು, ಚಿಂತೆಬೇಡ.

೨೧೨ ದೇಶಕ್ಕೆನೆಂಬು ಚಿಂತೆ ಹೋದರೆ ಒಳ್ಳೇದು, ಚಿಂತೆ ಮಾಡಬೇಡ.

೨೧೩ ನೀನು ಯೋಚಿಸಿದ ಕಾರ್ಯ ಬೇಡ, ಹೀನಸಾರಿ ದುಃಖ.

೨೧೪ ನೀನು ದಾವಕಾರ್ಯ ಮಾಡುದು ಅದು ಸಿದ್ಧಿ ಆದೀತು ನಂಬು.

೨೨೧ ನಿನಗೆ ಲಾಭವುಂಟು, ಧೈರ್ಯವ ಮಾಡುವದು, ಕಂಟಕ ತೊಡಗೀತು.

೨೨೨ ನಿನ್ನ ಮನೋರಥ ಸಿದ್ಧಿ ಆಡೀತು, ಹೊಸ ವಸ್ತು ಸಿಕ್ಕೀತು ನಂಬು.

೨೨೩ ನಿನ್ನ ಮನದಲ್ಲಿದ್ದ ಕಾರ್ಯವು ಸಿದ್ಧಿ ಆದೀತು, ಚಿಂತೆ ಮಾಡಬೇಡ.

೨೨೪ ನಿನ್ನ ಮನದಾಗ ಡವಾಡೋಲು ಆಗುವದು ಒಳಿತುಂಟು;
ಸಂತೋಷವಾದೀತು.

೨೩೧ ರಾಜ ಬಂಧನವುಂಟು, ಒಳಿತಿಲ್ಲ, ಭಯವುಂಟು ಮಾಡಬೇಡ.

೨೩೨ ನಿನ್ನ ಮನಸ್ಸಿನಲ್ಲಿ ಚಿಂತೆ ಅದೆ, ಒಳಿತಾದೀತು ಚಿಂತೆ ಮಾಡಬೇಡ.

೨೩೩ ಬಹು ಒಳ್ಳೇದು; ಸಂತೋಷದ ಸುದ್ದಿ, ಲಾಭವುಂಟು.

೨೩೪ ಒಂದು ಕಾರ್ಯ ಯೋಚನೆ ಮಾಡುತ್ತಿದ್ದೀ; ದೇವರ ನಂಬು
ಆಗುವದು.

೨೪೧ ರಾಜಭಯ, ಚೋರಭಯ ಉಂಟು; ಆ ಕಾರ್ಯ ಮಾಡಬೇಡ.

೨೪೨ ಇದರಿಂದ ಲಾಭವುಂಟು, ಒಬ್ಬರಿಂದಾದೀತು, ನಂಬುವದು.

೨೪೩ ಈಗ ಚಿಂತೆ, ಮುಂದೆ ಒಳಿತು, ಬಿಡಬೇಡ ನಂಬುವದು.

೨೪೪ ಈ ಕಾರ್ಯವಾದೀತು, ಒಳಿತದೆ, ಬೇಗಮಾಡುವದು, ಸಿದ್ಧಿ ಆದೀತು.

೩೧೧ ಈ ಕಾರ್ಯ ಒಳಿತು; ಅಮೃತಾನಂದನಾದೀತು.

೩೧೨ ಒಂದು ಯೋಚನೆ ಮಾಡಿದ್ದೀ, ಸಿದ್ಧಿ ಆಗದು ಮಾಡಬೇಡ.

೩೧೩ ಈ ಕಾರ್ಯ ಆಗದು, ಮಾಡಬೇಡ.

೩೧೪ ಈ ಕಾರ್ಯ ಆಗದು, ಹೀನ, ಸತ್ತ ಸುದ್ದಿ ಕೇಳಿ.

೩೨೧ ನೀನು ಚಿಂತಿಸಿದ ಕಾರ್ಯ ಫಲಸಿದ್ಧಿ ಅದೆ; ದೇವರ ನಂಬು.

೩೨೨ ಸರ್ವ ಪೀಡೆ ಹೋದೀತು, ಮಹಾ ಧ್ಯಾನ-ಭಕ್ತಿ ಹುಟ್ಟೀತು.

೩೨೩ ಈ ಕಾರ್ಯ ಒಳಿತಿಲ್ಲ, ಮುಂದೆ ಕೇಡು; ಕಾರ್ಯ ಮಾಡಬೇಡ.

೩೨೪ ನಿನ್ನ ದೇವರ ಪೂಜೆ ಮಾಡಿದರೆ ಒಳಿತು, ಕೇಳುವದು.

೩೩೧ ನೀನು ಮನೆ ಚಿಂತಿ ಮಾಡುತ್ತಿದ್ದೀ; ಆದೀತು ಅನುಮಾನಬೇಡ.

೩೩೨ ನೀನು ಚಿಂತೆಮಾಡುತಿದ್ದಿ, ಆ ಚಿಂತೆ ಪರಿಹಾರವಾದೀತು.

೩೩೩ ನೀನು ನೋಡಲಿಕ್ಕೆ ಹೋದೆನೆನುತಿದ್ದಿ, ಒಳಿತು ಲಾಭವು.

೩೩೪ ಮೂರು ವರುಷ ಸುಖವಿಲ್ಲ, ಇನ್ನು ಒಳಿತು ಸಂಶಯಬೇಡ.

೩೪೧ ನೀನು ಬಾಂಧವರ ಭೆಟ್ಟಿಗೆ ಹೋದೆನೆನುತಿದ್ದಿ, ಆಗದು.

೩೪೨ ಈ ಕಾರ್ಯ ಒಳಿತಿಲ್ಲ; ಸಾವು, ಧನಹಾನಿ, ಪ್ರಾಣಭಯ.

೩೪೩ ಈ ಕಾರ್ಯಕ್ಕೆ ಹೋದೆನೆನುತಿದ್ದಿ, ಸಂತೋಷವಾದೀತು.

೩೪೪ ಪರದೇಶವ ತಿರುಗಿ ಗೃಹತಟ್ಟಿತು, ತಪ್ಪದು ಪರಾರ್ಥ.

೪೧೧ ಮಹಾ ಉತ್ತಮ, ಒಳ್ಳೇದದೆ, ಕಾರ್ಯವಾದೀತು ನಂಬುವದು.

೪೧೨ ರಾಜಮನ್ನಣೆ, ದೇವಮನ್ನಣೆ, ಲಾಭ ಒಳ್ಳೇದು, ನಂಬು.

೪೧೩ ಒಂದು ಕಾರ್ಯ ಯೋಚನೆಮಾಡುತ್ತಿದ್ದಿ, ಆದೀತು.

೪೧೪ ವ್ಯವಹಾರ ಮಾಡೆನೆನುತಿದ್ದಿ, ಲಾಭವುಂಟು.

೪೨೧ ಮನದಲ್ಲಿ ಚಿಂತೆ, ಸರ್ವಕಾರ್ಯ ಆದೀತು, ಭಯಬೇಡ.

೪೨೨ ಈ ಕಾರ್ಯ ಸರ್ವಬಗೆಯಿಂದ ಆದೀತು, ನಂಬು.

೪೨೩ ಒಂದು ಸ್ಥಳದ ಸುದ್ದಿ ಚಿಂತಿಸುತ್ತಿದ್ದಿ, ಆದೀತು ನಂಬು.

೪೨೪ ಒಂದು ಕಾರ್ಯ ಯೋಚಿಸುತ್ತಿದ್ದಿ, ಪ್ರೀತಿಯಿಂದ ಆದೀತು.

೪೩೧ ಕೆಟ್ಟು ಬಂದ ಚಿಂತೆ, ಅದು ಪರಿಹಾರವಾದೀತು, ಭಯಬೇಡ.

೪೩೨ ಬಂಧನ ಬಿಟ್ಟು ತೋರುವದು.

೪೩೩ ಮೂರು ವರುಷ ಕಷ್ಟ ತೋರೀತು, ಮುಂದೆ ಒಳಿತು.

೪೩೪ ಬಹು ಚಿಂತೆ ಮಾಡುತಿದ್ದಿ, ಕಾರ್ಯವಾದೀತು, ಚಿಂತೆ ಬೇಡವು.

೪೪೧ ಈ ಕಾರ್ಯಕ್ಕೆ ಚಿಂತಿಸುತ್ತಿದ್ದಿ, ಆ ಕ್ಷಣದೊಳಗೆ ಆದೀತು.

೪೪೨ ಈ ಕಾರ್ಯ ಫಲವದೆ, ಲಾಭ, ಕಲ್ಯಾಣವಾದೀತು.

೪೪೩ ಈ ಕಾರ್ಯ ಒಳಿತಿಲ್ಲ, ಆಗದು, ಚಿಂತೆ ಮಾಡಬೇಡ.

೪೪೪ ನಿನಗೆ ಪುತ್ರಲಾಭ, ಧನಲಾಭ, ಐಶ್ವರ್ಯಲಾಭ ಅದೆ.

---

## ದ್ವಾದಶ ರಾಶಿಯುವರ ಮರಣಾಂತ

# ಪುರುಷ ಜಾತಕವು



## ಮೇಷರಾಶಿಯುವರಿಗೆ

ಅಶ್ವಿನಿ, ಭರಣಿ, ಕೃತ್ತಿಕಾ ೧ ಪಾದಂ ಮೇಷರಾಶಿ. ಈ ರಾಶಿಗೆ ಅಧಿಪತಿ ಮಂಗಳನು. ಅಶ್ವಿನಿ ಗಂಡು ಕುದುರೆ, ಪುರುಷನಕ್ಷತ್ರ, ದೇವ ಗಣ, ಸಮಮುಖ, ಅಧಿಪತಿ ಬ್ರಹ್ಮನು, ವೃಕ್ಷ ಹೆಮ್ಮುಷ್ಟಿ, ಪಕ್ಷಿ ಗರುಡ. ಭರಣಿ ಗಂಡಾನೆ, ಪುರುಷನಕ್ಷತ್ರ, ಮನುಷ್ಯಗಣ, ತಳಮುಖ, ವೃಕ್ಷ ನೆಲ್ಲಿ, ಪಕ್ಷಿ ಸಾಳವ. ಈ ರಾಶಿಯಲ್ಲಿ ಹುಟ್ಟಿದವನು ಕೈ-ಕಾಲು ಉದ್ದ, ಮೂಗು ದೊಡ್ಡದು, ಬಂಧುಗಳ ಸರಿ ವಾಚಕನು, ಲಲಾಟದಲ್ಲಾಗಲಿ ಬ್ರಹ್ಮಸ್ಥಾನದ ಮೇಲೆಯಾಗಲಿ ಮಚ್ಚೆವುಂಟು, ಆತಗೆ ಸಕಲವಸ್ತು ದೊರಕುವದು, ಧ್ಯಾನ ವಂತನು, ಗುಣವಂತನು, ಉಪ್ಪಿಗೆ ಹುಳಿಗೆ ಪ್ರಿಯನು, ಮಾನ್ಯನಾಹನು. ಈ ರಾಶಿಯಲ್ಲಿ ಹುಟ್ಟಿದವನಿಗೆ ೧ ವರುಷ, ೫ ವರುಷ, ೭ ವರುಷ ಈ ಮೂರದರಲ್ಲಿ ಅಪಮೃತ್ಯು ಉಂಟು. ಜ್ವರ, ನೀರು, ಕಿಚ್ಚು, ಸ್ವಾನ ಇವುಗಳ ಭಯ ಉಂಟು. ಇವು ಕಳೆದುಳಿದರೆ ೮೫ ವರುಷ ಬಾಳಿ ಮುಂದೆ ಕಾಲ ಮೃತ್ಯುಕ್ಕೆ ಚೈತ್ರ ಬಹುಳ ಮಂಗಳವಾರ ಧನಿಷ್ಠಾ ನಕ್ಷತ್ರದಲ್ಲಾಗಲಿ, ರೋಹಿಣಿ ನಕ್ಷತ್ರದಲ್ಲಾಗಲಿ ಉದಯವಾದ ಜಾವಕ್ಕೆ ತಲೆಬೇನೆಯಲ್ಲಿ ಮರಣ. ಈ ರಾಶಿಯುವರು ಆದಿತ್ಯನುದಯಲ್ಲಿ ಕೋಪಿ. ಚಂದ್ರನುದಯ ದಲ್ಲಿ ಐಶ್ವರ್ಯವಂತನು. ಮಂಗಳನುದಯದಲ್ಲಿ ನಿರ್ಗುಣಿಹನು. ಬುಧನ ಉದಯದಲ್ಲಿ ಬುದ್ಧಿವಂತನು. ಗುರು ಉದಯದಲ್ಲಿ ಪ್ರಜಪಾಲಕನು. ಶುಕ್ರನ ಉದಯದಲ್ಲಿ ಜನಮಿತ್ರನಾಹನು. ಶನಿ ಉದಯದಲ್ಲಿ ಚೋರನಾಗುವನು.

# ವೃಷಭರಾಶಿಯುವರಿಗೆ

ಕೃತ್ತಿಕಾ ತ್ರಯೋಪಾದಂ, ರೋಹಿಣಿ, ಮೃಗಶಿರಾರ್ಧ ವೃಷಭರಾಶಿ. ಈ ರಾಶಿ ಅಧಿಪತಿ ಶುಕ್ರನು. ಕೃತ್ತಿಕಾ ರಾಕ್ಷಸಗಣ, ಶ್ರೀ ನಕ್ಷತ್ರ, ಪಾತಾಳ ಮುಖ, ಆದಿದೈವ ಭಾಗ್ಯವಂತಿ, ವೃಕ್ಷ ಮತ್ತಿಯಮರ, ಪಕ್ಷಿ ನವಿಲು. ರೋಹಿಣಿ ಗಂಡು ನಾಯಿ, ಗರುಡ, ಮನುಷ್ಯಗಣ, ಪುರುಷನಕ್ಷತ್ರ, ಮೇಲು ಮುಖ, ಆದಿದೈವ ಮಾರುತಿ, ವೃಕ್ಷ ಮತ್ತಿಮರ, ಪಕ್ಷಿ ಗರುಡ. ಮೃಗಶಿರಾ ಹೆಣ್ಣು ನಾಗರ. ದೇವಗಣ, ಶ್ರೀ ನಕ್ಷತ್ರ, ಸಮಮುಖ, ವೃಕ್ಷ ತಾರಿ, ಪಕ್ಷಿ ಸಾಳವ. ಈ ರಾಶಿಯುವರ ಕೈ-ಕಾಲು ಸಣ್ಣ, ಸಕಲ ಜನರ ಪ್ರಿಯ, ವಾಚಕನು. ಗೀತಕ್ಕೆ ಪ್ರಿಯನು, ವಿದ್ಯದಲ್ಲಿ ಕೋವಿದನು, ಹಾಲು ಪಾನಕ್ಕೆ ಪ್ರಿಯನು, ಮಲಗುವಲ್ಲಿ ಮಚ್ಚವುಂಟು ಈ ರಾಶಿಯಲ್ಲಿ ಹುಟ್ಟಿದವನು ೧ ವರುಷದಲ್ಲಾಗಲಿ, ೨ ವರುಷದಲ್ಲಾಗಲಿ, ೬ ವರುಷದಲ್ಲಾಗಲಿ ಯಮಕಂಟಕ ಉಂಟು ಇವು ಕಳೆದುಳಿದರೆ ೮೬ ವರುಷ ಬಾಳಿ ಮುಂದೆ ವೈಶಾಖಮಾಸದ ಬಹುಳ ಗುರುವಾರ ರೋಹಿಣಿ ಅಸ್ತಮಾನವಾದ ಒಂದು ಜಾವಕ್ಕೆ ಹೊಟ್ಟೆಬೇನೆಯಲ್ಲಿ ಮರಣ. ಈ ರಾಶಿಯಲ್ಲಿ ಹುಟ್ಟಿದವನು ಆದಿತ್ಯನುದಯದಲ್ಲಿ ಕಳ್ಳನು. ಸೋಮನುದಯದಲ್ಲಿ ದೈವಂತನು. ಮಂಗಳನ ಉದಯದಲ್ಲಿ ದೈವಂತನು, ಸಿರಿವಂತನು. ಬುಧನ ಉದಯದಲ್ಲಿ ಬುದ್ಧಿವಂತನು. ಗುರು ಉದಯದಲ್ಲಿ ವಿದ್ಯೋಧಿಕನು. ಶುಕ್ರನ ಉದಯದಲ್ಲಿ ಪಂಡಿತನು. ಶನಿ ಉದಯದಲ್ಲಿ ರೋಗಿಯಾಗುವನು.

# ಮಿಥುನರಾಶಿಯುವರಿಗೆ

ಮೃಗಶಿರಾರ್ಧ, ಆರಿದ್ರಾ, ಪುನರ್ವಸು ತ್ರಯೋಪಾದಂ ಮಿಥುನ ರಾಶಿ. ಈ ರಾಶಿ ಅಧಿಪತಿ ಬುಧನು. ಆರಿದ್ರಾ ಹೆಣ್ಣು ನಾಯಿ, ಮನುಷ್ಯ ಗಣ, ಶ್ರೀ ನಕ್ಷತ್ರ, ಮೇಲ ಮುಖ, ಆದಿದೈವ ಈಶ್ವರ, ವೃಕ್ಷ ಸಂಪಿಗಿ, ಪಕ್ಷಿ ಪಿಂಗಲಿ. ಪುನರ್ವಸು ಹೆಣ್ಣು ಬೆಕ್ಕು, ದೇವಗಣ, ಆದಿದೈವ ಬ್ರಹ್ಮ ಶ್ರೀ ನಕ್ಷತ್ರ, ಮೇಗ ಮುಖ, ವೃಕ್ಷ ಆಲದಮರ, ಪಕ್ಷಿ ಬರಧ್ವಜ. ಈ ರಾಶಿ

ಯುವರ ಮೈಯಲ್ಲಿ ಮಚ್ಚೆವುಂಟು. ಬಾಗಿ ನಡೆವನು. ಮೂಗು ದೊಡ್ಡದು. ಗುಜಕೇಶ. ಸರ್ವ ಜನ ಪ್ರೀಯ. ೧ ವರುಷದಲ್ಲಿ, ೪ ವರುಷದಲ್ಲಿ, ೫ ವರುಷದಲ್ಲಿ ಅಪಮೃತ್ಯು ಉಂಟು. ಅವು ಕಳೆದುಳಿದರೆ ಮುಂದೆ ಕಾಲ ಮೃತ್ಯು ೮೭ ವರುಷ ಬಾಳಿ ಭಾದ್ರಪದಮಾಸ ಶುದ್ಧ ಏಕಾದಶಿ ಗುರುವಾರ ಉದಯವಾದ ಒಂದು ಜಾವದಲ್ಲಿ ಮರಣ. ಈ ರಾಶಿಯುವರು ಆದಿತ್ಯನ ಉದಯುದಲ್ಲಿ ಧನಾಢ್ಯನು. ಚಂದ್ರನುದಯುದಲ್ಲಿ ಗುಣವಂತನು. ಮಂಗಳ ನುದಯುದಲ್ಲಿ ಪೂಜ್ಯವಂತನು. ಬುಧನುದಯುದಲ್ಲಿ ಜನಮಿತ್ರನು. ಗುರು ನುದಯುದಲ್ಲಿ ಬುದ್ಧಿವಂತನು. ಶುಕ್ರನುದಯುದಲ್ಲಿ ವ್ಯಾಪಾರಿಯು ಶನಿ ಉದಯುದಲ್ಲಿ ವಿದ್ಯಾವಂತನು.

## ಕರ್ಕರಾಶಿಯುವರಿಗೆ

ಪುನರ್ವಸು ಪಾದಂ, ಪುಷ್ಯ, ಆಶ್ಲೇಷಾ ಕರ್ಕರಾಶಿ ಈ ರಾಶಿಗೆ ಅಧಿಪತಿ ಸೂರ್ಯನು. ಪುಷ್ಯನಕ್ಷತ್ರ ಎತ್ತು, ದೇವಗಣ, ಪುರುಷನಕ್ಷತ್ರ, ಸಮಮುಖ ತಾರೆ, ಆದಿದೈವ ಗುರು, ವೃಕ್ಷ ಸಂಪಿಗಿ, ಪಕ್ಷಿ ನೀರಕಾಗೆ. ಆಶ್ಲೇಷಾ ಗಂಡು ಬೆಕ್ಕು, ರಾಕ್ಷಸಗಣ, ಪುರುಷನಕ್ಷತ್ರ, ಪಾತಾಳ ಮುಖ, ಆದಿದೈವ, ವೃಕ್ಷ ಮತ್ತಿ, ಪಕ್ಷಿ ಕರೆಹಕ್ಕಿ. ಈ ರಾಶಿಯುಲ್ಲಿ ಹುಟ್ಟಿದವರು ಬಹು ರಸಿಕನು. ಆರಿಗೆ ಅಂಜನು. ಚೆಲುವನು. ತನ್ನ ಇಚ್ಛೆ ಆರ ಮಾತನು ಕೇಳನು. ಕುರುಳ ಗೂದಲ. ಹೊಟ್ಟೆಯಲ್ಲಾಗಲಿ ಕಣ್ಣಲ್ಲಾಗಲಿ ಮಚ್ಚೆವುಂಟು. ಈ ರಾಶಿಯುವರಿಗೆ ೧ ವರುಷದಲ್ಲಿ, ೧೭ ವರುಷದಲ್ಲಿ, ೩೭ ವರುಷದಲ್ಲಿ, ೩೯ ವರುಷದಲ್ಲಿ ಅಪಮೃತ್ಯು ಉಂಟು. ಇವು ಕಳೆದುಳಿದರೆ ಮುಂದೆ ಕಾಲಮೃತ್ಯುಕ್ಕೆ ಆಷಾಢಮಾಸದ ತ್ರಯೋದಶಿ ಮಂಗಳವಾರ ಮಧ್ಯರಾತ್ರಿಗೆ ಮರಣ. ಈ ರಾಶಿಯುವರು ಆದಿತ್ಯನುದಯುದಲ್ಲಿ ಸರ್ವ ಜನಪ್ರಿಯಾ. ಚಂದ್ರನುದಯುದಲ್ಲಿ ಕೋಪಿ ಮಂಗಳನುದಯುದಲ್ಲಿ ಹೇಡಿ. ಬುಧನುದಯುದಲ್ಲಿ ಪಂಡಿತ. ಗುರು ಉದಯುದಲ್ಲಿ ಯುವರಿ. ಶುಕ್ರನುದಯು ದಲ್ಲಿ ಪ್ರೌಢನು. ಶನಿ ಉದಯುದಲ್ಲಿ ಚೋರನಾಗುವನು.

# ಸಿಂಹರಾಶಿಯುವರಿಗೆ

ಮಖ್ಖಿ, ಹುಬ್ಬಿ, ಉತ್ರಿ ಪಾದಂ ಸಿಂಹರಾಶಿ. ಈ ರಾಶಿಗೆ ಅಧಿಪತಿ ಸೂರ್ಯನು. ಮಖಿ ಗಂಡು ಇಲಿ, ರಾಕ್ಷಸಗಣ, ಪುರುಷನಕ್ಷತ್ರ ಪಾತಾಳ ಮುಖ, ಶನಿನಾದಿದ್ಯೆವ, ವೃಕ್ಷ ಮತ್ತಿ, ಪಕ್ಷಿ ಗರುಡ ಹುಬ್ಬಿ ಹೆಣ್ಣು ಇಲಿ, ಮನುಷ್ಯಗಣ, ನಕ್ಷತ್ರ ಪಾತಾಳ ಮುಖ, ಆದಿದ್ಯೆವ ದುರ್ಗಿ, ವೃಕ್ಷ ಮತ್ತಿ, ಪಕ್ಷಿ ಗರುಡ. ಈ ರಾಶಿಯು ಫಲವು ಕೈ-ಕಾಲು ಗೊರದಗಿ-ಯಿಹದು ಮೂಗು ದೊಡ್ಡದು. ಹುಬ್ಬು ಸಣ್ಣ ಕೂದಲು ಉಸ್ಟು. ಗುಮಾನದವನು. ಕೊರಳೊಳಗೆ ಮಚ್ಛವುಂಟು. ನಡಿಗೆ ಬೇಗೆ ಬೇಗ. ಜೂಜುಗಾರನು. ಅಡಿ ತಪ್ಪನು. ಎದೆ ಉಬ್ಬ ಸಂಗೀತ ಪ್ರಿಯನು. ಬಟ್ಟೆ ಉಪಕಾರಿ. ಉಗರುಳ್ಳವನು. ಬ್ರಾಹ್ಮರಿಗೆ ಪ್ರಿಯನು ದೈವುಳ್ಳವನು. ಬೆನ್ನಲ್ಲಾಗಲಿ ಟೊಂಕದಲ್ಲಾಗಲಿ ಮಚ್ಛವುಂಟು. ಈ ರಾಶಿಯುವರು ೧೬ ವರುಷದಲ್ಲಾಗಲಿ, ೨೧ ವರುಷದಲ್ಲಾಗಲಿ ನೀರಿನಿಂದ, ಸರ್ಪನಿಂದ, ಜ್ವರ ದಿಂದ, ಹುಣ್ಣಿನಿಂದ, ಅಲಗಿನಿಂದ ಮರಣ. ಇವು ಕಳೆದುಳಿದರೆ ಮುಂದೆ ೯೬ ವರುಷ ಬಾಳಿ ಭಾದ್ರಪದಮಾಸ ಬಹುಳ ತ್ರಯೋದಶಿ ಗುರುವಾರ ಮಧ್ಯಾನ್ಹಕ್ಕೆ ಹೊಟ್ಟೆಬೇನೆಯಲ್ಲಿ ಮರಣ. ಈ ರಾಶಿಯಲ್ಲಿ ಹುಟ್ಟಿದವರು ಆದಿತ್ಯನುದಯದಲ್ಲಿ ಅರಸನು. ಸೋಮನುದಯದಲ್ಲಿ ಧನಾಢ್ಯನು. ಮಂಗಳನುದಯುದಲ್ಲಿ ಮಂದ. ಬುಧನುದಯದಲ್ಲಿ ಯುವರಿ. ಗುರು ಉದಯುದಲ್ಲಿ ವಿದ್ಯೆವಂತನು. ಶುಕ್ರನುದಯದಲ್ಲಿ ಜನಮಿತ್ರ. ಶನಿ ಉದಯ ದಲ್ಲಿ ದರಿದ್ರನಾಗುವನು.

# ಕನ್ಯಾರಾಶಿಯುವರಿಗೆ

ಉತ್ರಿ ತ್ರಿಪಾದಂ, ಹಸ್ತ, ಚಿತ್ತಿ ಅರ್ಧಪಾದಂ ಕನ್ಯಾರಾಶಿ. ಈ ರಾಶಿಗೆ ಅಧಿಪತಿ ಬುಧನು. ಉತ್ರಿ ರುಷಭ, ಮನುಷ್ಯಗಣ, ಪುರುಷ ನಕ್ಷತ್ರ, ಮೇಗ ಮುಖ, ಆದಿದ್ಯೆವ ಈಶ್ವರ, ವೃಕ್ಷ ಮತ್ತಿ, ಪಕ್ಷಿ ಪಿಂಗಲಿ. ಹಸ್ತಾ ಎಮ್ಮಿ, ದೇವಗಣ, ನಕ್ಷತ್ರ ಸವಮುಖ, ಆದಿದ್ಯೆವ ಈಶ್ವರ, ವೃಕ್ಷ

ಬಬ್ಬಲಿ, ಪಕ್ಷಿ ಸಾಳವ ಚಿತ್ತಿ ಹೆಣ್ಣು ಇಲಿ, ರಾಕ್ಷಸಗಣ, ನಕ್ಷತ್ರ ಸವ ಮುಖ, ಆದಿದೈವ ಈಶ್ವರ, ವೃಕ್ಷ ಬೆಲವಂತರ, ಪಕ್ಷಿ ಪಿಂಗಲಿ. ಈ ರಾಶಿಯಲ್ಲಿ ಹುಟ್ಟಿದವನು ಗುಣವಂತನು. ವಿದ್ಯಸದನಕ್ಕೆ, ಮೈಯಲ್ಲಿ ಮಚ್ಚೆ ಉಂಟು. ಪರಿಮಳಕ್ಕೆ ಪ್ರಿಯನು. ಪರಿಮಳಕ್ಕೆ ಸತ್ಯವುಳ್ಳವನು. ಚೆಲುವ ಸಾಹಸನು. ದೇವ-ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನು. ಹಿರಿಯರಿಗೆ ಅಂಜುವನು. ಇವನಿಗೆ ೧ ವರುಷದಲ್ಲಾಗಲಿ, ೪೮ ವರುಷದಲ್ಲಾಗಲಿ ವ್ಯಾಧಿಯಲ್ಲಿ ಪಶುವಿನಲ್ಲಿ, ಉದಕದಲ್ಲಿ ಇಷ್ಟು ಕಂಟಕ ಉಂಟು. ಇವು ಕಳೆದುಳಿದರೆ ಮುಂದೆ ಎಂಭತ್ತು ವರುಷ ಬಾಳಿ ಭಾದ್ರಪದಮಾಸ ಶುದ್ಧ ಷಷ್ಠಿ ಗುರುವಾರ ಮಧ್ಯರಾತ್ರಿ ಚಿತ್ತಿನಕ್ಷತ್ರದಲ್ಲಿ ಮರಣ. ಈ ರಾಶಿಯಲ್ಲಿ ಹುಟ್ಟಿದವರು ಆದಿತ್ಯನುದಯದಲ್ಲಿ ಅಳುತನದವನು. ಸೋಮನುದಯದಲ್ಲಿ ದೀನನು. ಮಂಗಳನುದಯದಲ್ಲಿ ರೋಗಿಯು. ಬುಧನುದಯದಲ್ಲಿ ದಾನಿಯಾಹನು. ಗುರು ಉದಯದಲ್ಲಿ ಸಂತಾನವುಳ್ಳವನು ಶುಕ್ರನುದಯದಲ್ಲಿ ಕಾಲಿ ಗುಣದವನು. ಶನಿಯುದಯದಲ್ಲಿ ದರಿದ್ರನು

# ತುಲಾರಾಶಿಯವರಿಗೆ

ಚಿತ್ತಿ ಅರ್ಧಪಾದಂ, ಸ್ವಾತಿ, ವಿಶಾಖಾ ತ್ರಿಯೋಪಾದಂ ತುಲಾರಾಶಿ. ಈ ರಾಶಿಗೆ ಅಧಿಪತಿ ಶುಕ್ರನು. ಸ್ವಾತಿ ಕೋಣ, ದೇವಗಣ, ಪುರುಷ ನಕ್ಷತ್ರ, ಸವಮುಖ, ಆದಿದೈವ ಚಂದ್ರ, ವೃಕ್ಷ ಮತ್ತಿ, ಪಕ್ಷಿ ನವಿಲು. ವಿಶಾಖಾ ರಾಕ್ಷಸಗಣ, ಪುರುಷನಕ್ಷತ್ರ, ತಳಮುಖ ತಾರೆ, ಆದಿದೈವಾ ವರುಣ, ವೃಕ್ಷ ಹುಲಗಲಿ, ಪಕ್ಷಿ ಪಿಂಗಲಿ. ಈ ರಾಶಿಯವರು ವ್ಯವಹಾರಿ ಕಳ್ಳನು. ಹುಸಿಕನು. ದಿನಾ ತನ್ನ ಸತಿ ವರ್ತಿಸುವನು. ದೀರ್ಘನು ಮೆಲ್ಲ ಮೆಲ್ಲನೆ ನಡಿಗೆ. ತನ್ನವರ ಕೆಡಿಸುವನು. ಕೆಲವರಿಗೆ ಲೇಸುಮಾಡುವನು. ಕುದಲಿಗನು. ಶರೀರ ಉದ್ದ ಕೈ-ಕಾಲು ಸೊಟ್ಟ ತಂದೆ-ತಾಯಿ ಹೋಲುವನು. ಈ ರಾಶಿಯಲ್ಲಿ ಹುಟ್ಟಿದವನು ೧ ವರುಷದಲ್ಲಿ, ೧೬ ವರುಷದಲ್ಲಿ ಅಪಮೃತ್ಯು. ಹೊಟ್ಟೆಶೂಲೆ, ಜ್ವರ, ನೀರಿನಿಂದ ಆಯುಷ್ಯದಿಂದ ಮರಣ. ಇವು ಕಳೆದುಳಿದರೆ ೮೬ ವರುಷ ಬಾಳಿ ಕಾಲಮೃತ್ಯು ಆಶ್ವಿಜಮಾಸ ಶುದ್ಧ

ಷಷ್ಠಿ ಗುರುವಾರ ಅನುರಾಧಾನಕ್ಷತ್ರದಲ್ಲಿ ಉದಯವಾದ ೪ ಘಳಿಗಿಗೆ ಮರಣ. ಈ ರಾಶಿಯುವನು ಆದಿತ್ಯನುದಯದಲ್ಲಿ ಹೆಳವ. ಚಂದ್ರನುದಯು ದಲ್ಲಿ ಬ ದ್ಧಿವಂತನು. ಮಂಗಳನುದಯುದಲ್ಲಿ ಮಿತ್ರವುಳ್ಳವನು. ಬುಧ ನುದಯುದಲ್ಲಿ ಬುದ್ಧಿವಂತನು. ಗುರು ಉದಯ ದಲ್ಲಿ ರಾಜ ಪೂಜಿತನು. ಶುಕ್ರನುದಯುದಲ್ಲಿ ಕುರುಡ. ಶನಿ ಉದಯದಲ್ಲಿ ಹಾದರಿಗನಾಹನು.

# ವೃಶ್ಚಿಕರಾಶಿಯುವರಿಗೆ

ವಿಶಾಖಾ ಏಕಪಾದಂ, ಅನುರಾಧಾ, ಜ್ಯೇಷ್ಠಾ ವೃಶ್ಚಿಕರಾಶಿ. ಈ ರಾಶಿಯುವರಿಗೆ ಅಧಿಪತಿ ಮಂಗಳನು. ಅನುರಾಧಾ ಹೆಣ್ಣು ಹುಲಿ, ದೇವ ಗಣ, ಸಮಮುಖ, ನಪುಂಸಕ ನಕ್ಷತ್ರ, ಆದಿದೈವ ವರುಣ, ವೃಕ್ಷ ಹಲಸು, ಪಕ್ಷಿ ಸಾಳವ. ಜ್ಯೇಷ್ಠಾ ಯುರಳಿ, ರಾಕಕ್ಷಸಗಣ, ಸಮಮುಖ, ನಪುಂಸಕ ನಕ್ಷತ್ರ, ಆದಿದೈವ ದುರ್ಗಿ, ವೃಕ್ಷ ಹಲಸು, ಪಕ್ಷಿ ಕುಕ್ಕುಟ. ಈ ರಾಶಿಯು ಫಲವು— ಕಣ್ಣು ದೊಡ್ಡವು, ಬಾಯಿ ಅಗಲ, ಮೂಗು ನೀಳವು, ಕೆಂಪು ಕೂದಲು, ಕಾಲು ದಪ್ಪ, ಕಷ್ಟವಂತ, ಹುಬ್ಬು ಕೆಂಪು, ಪ್ರಜ್ಞ್ಯಾವುಳ್ಳವರು, ಬ್ರಹ್ಮ ಒಡಿಯು, ಬಂಧು ಪ್ರೀತಿ. ಈ ರಾಶಿಯಲ್ಲಿ ಹುಟ್ಟಿದವನು ೧ ವರುಷ ಮತ್ತು ೧೫ ವರುಷದಲ್ಲಿ, ಹಾಗು ೪೮ ವರುಷದಲ್ಲಿ ಕಂಟಕ ಗ್ರಹದಿಂದ, ಜ್ವರದಿಂದ, ನೀರಿನಿಂದ, ಹೊಟ್ಟೆಬೇನೆಯಿಂದ, ಹುಣ್ಣಿನಿಂದ, ಆಯುಧ ದಿಂದ ಇಷ್ಟು ಅಪಮೃತ್ಯು ಉಂಟು. ಇವು ಕಳೆದುಳಿದರೆ ೮೪ ವರುಷ ಬಾಳಿ ಮುಂದೆ ಕಾರ್ತಿಕ ಶುದ್ಧ ಅಷ್ಟಮಿ ಮಂಗಳವಾರ ಶ್ರವಣಾನಕ್ಷತ್ರದಲ್ಲಿ ಮೂರನೆ ಜಾವಕ್ಕೆ ಮರಣ. ಈ ರಾಶಿಯುವರು ಆದಿತ್ಯನುದಯದಲ್ಲಿ ವ್ಯವಹಾರಿ. ಸೋಮನುದಯುದಲ್ಲಿ ಕಳ್ಳ. ಮಂಗಳನುದಯದಲ್ಲಿ ಚೋರ, ಕಿವುಡ ಬುಧನುದಯದಲ್ಲಿ ಬುದ್ಧಿವಂತನು. ಗುರು ಉದಯದಲ್ಲಿ ಸಂತಾಪಿ. ಶುಕ್ರನುದಯದಲ್ಲಿ ವಿದ್ವಾಂಸ. ಶನಿ ಉದಯುದಲ್ಲಿ ದರಿದ್ರನು.

# ಧನುರಾಶಿಯುವರಿಗೆ

ಮೂಲಾ, ಪೂರ್ವಾಷಾಢಾ, ಉತ್ತ್ರಾಷಾಢಾ ಏಕಪಾದಂ ಧನುರಾಶಿ. ಈ ರಾಶಿಗೆ ಅಧಿಪತಿ ಗುರುವು. ಮೂಲಾನಕ್ಷತ್ರ ಗಂಡು ನಾಯಿ, ರಾಕ್ಷಸ

ಗಣ, ಪುರುಷನಕ್ಷತ್ರ, ಪಾತಾಳ ಮುಖ, ಆದಿದೈವ ಸೂರ್ಯ, ವೃಕ್ಷ ಅಲ್ಲ, ಪಕ್ಷಿ ವಾಯಸ. ಪೂರ್ವಾಷಾಢಾ ಗಂಡು ಕೋಡಗ, ಮನುಷ್ಯಗಣ, ಪುರುಷನಕ್ಷತ್ರ, ಪಾತಾಳ ಮುಖ, ದೇವತಿ ಚಾಮುಂಡಿ, ವೃಕ್ಷ ಅರಳಿ, ಪಕ್ಷಿ ವಾಯಸ. ಈ ರಾಶಿಯ ಫಲ— ಈ ರಾಶಿಯಲ್ಲಿ ಹುಟ್ಟಿದವನು ಗುರುಭಕ್ತನಾಹನು, ಪರೋಪಕಾರಿ, ಸುಗುಣ, ಧರ್ಮಮಾಡುವವನು, ಪ್ರಸಂಗಾನುಸಾರ ಸಂಗೀತಕ್ಕೆ ಪ್ರಿಯಾ, ಶರೀರ ಚಲೋದು, ಭೋಜನಕ್ಕೆ ಪ್ರೀತಿಯುವ, ಹೊತ್ತು-ವ್ಯಾಳ್ಯ ಮಾಡುವ ಕಾರ್ಯವಂತನು, ಮನದಲ್ಲಿ ಕಪಟಯಿಲ್ಲ, ಬಹು ಗಂಟಗುರು, ಉಗರು ಉದ್ದ. ಈ ರಾಶಿಯುವರು ೧ ವರುಷದಲ್ಲಿ, ೪೮ ವರುಷದಲ್ಲಿ ಜ್ವರ, ನೀರು ಅಪೆದ ಬೆಂಕಿ, ಹೊಟ್ಟಿಬೇನೆ ಈಸು ಕಂಟಕವುಂಟು. ಇವು ಕಳೆದುಳಿದರೆ ಮುಂದೆ ೮೭ ವರುಷ ಬಾಳಿ ಮಾರ್ಗಶಿರ ಬಹುಳ ದಶಮಿ ಶುಕ್ರವಾರ ಸ್ವಾತಿನಕ್ಷತ್ರದಲ್ಲಿ ಮಧ್ಯಾಹ್ನಕ್ಕೆ ಮರಣ. ಈ ರಾಶಿಯುವರು ಆದಿತ್ಯನುದಯುದಲ್ಲಿ ಜನವಿರೋಧಿ. ಸೋಮನುದಯುದಲ್ಲಿ ರಾಜನಾಹನು. ಮಂಗಳನುದಯುದಲ್ಲಿ ಜನಮಿತ್ರನಾಹನು. ಬುಧನುದಯುದಲ್ಲಿ ಭಾಗ್ಯವುಳ್ಳವನು. ಗುರು ಉದಯುದಲ್ಲಿ ಪುಣ್ಯವುಳ್ಳವನು. ಶುಕ್ರ ಉದಯುದಲ್ಲಿ ಧನ-ಧಾನ್ಯ, ಒಳ್ಳೆಯುವನು. ಶನಿ ಉದಯುದಲ್ಲಿ ಬಹು ದರಿದ್ರನಾಗುವನು.

# ಮಕರರಾಶಿಯುವರಿಗೆ

ಉತ್ತ್ರಾಷಾಢಾ ತ್ರಿಪಾದಂ, ಶ್ರವಣ, ಧನಿಷ್ಠಾ ಅರ್ಧಪಾದಂ ಮಕರ ರಾಶಿ ಈ ರಾಶಿಗೆ ಅಧಿಪತಿ ಶನಿಯು ಉತ್ತ್ರಾಷಾಢಾ ಗಂಡು ಮುಂಗಲಿ, ಮನುಷ್ಯಗಣ, ಪುರುಷನಕ್ಷತ್ರ, ಮೇಲಮುಖ, ಆದಿದೈವ ಕ್ಷೇತ್ರಪಾಲ, ವೃಕ್ಷ ಅರಳಿ, ಪಕ್ಷಿ ನವಿಲು. ಶ್ರವಣಾ ಹೆಣ್ಣು ಕೋಡಗು, ಮನುಷ್ಯಗಣ, ಪುರುಷನಕ್ಷತ್ರ, ದೇವತಿ ಬ್ರಹ್ಮನು, ಮೋಲಮುಖ, ವೃಕ್ಷ ಅರಳಿ, ಪಕ್ಷಿ ಬರದ್ವಜ. ಧನಿಷ್ಠಾ ಹೆಣ್ಣು ಸಿಂಹ, ಅರಸುಗಣ, ನಕ್ಷತ್ರ ಮೋಲಮುಖ, ದೇವತಿ ಸ್ವಾಮಿ ಕಾರ್ತಿಕ, ವೃಕ್ಷ ಹುಣಸಿ, ಪಕ್ಷಿ ವಾಯಸ. ಈ ರಾಶಿಗೆ ೧ ತಿಂಗಳಿಲ್ಲಿ, ೨೭-೨೮-೬೪ ವರ್ಷದಲ್ಲಿ ಅಪಮೃತ್ಯು ಉಂಟು. ಮುಂದೆ

ಹೊಟ್ಟೆಬೇನೆಯಲ್ಲಿ ಮರಣ ಇವು ಕಳೆದುಳಿದರೆ ಮುಂದೆ ೯೦ ವರುಷ ಬಾಳಿ ಪುಷ್ಯ ಬಹುಳ ಧನಿಷ್ಠಾನಕ್ಷತ್ರ ಮಧ್ಯರಾತ್ರಿಯಲ್ಲಿ ಹೊಟ್ಟೆಬೇನೆಯಿಂದ ಮರಣ. ಈ ರಾಶಿಯವರಿಗೆ ಆದಿತ್ಯನುದಯದಲ್ಲಿ ರಾಜಪೂಜ್ಯವಂತನು. ಸೋಮನುದಯದಲ್ಲಿ, ಮಂಗಳನುದಯದಲ್ಲಿ ಕೋಪಿ ಬುಧನುದಯದಲ್ಲಿ ಬುದ್ಧಿವಂತನು. ಗುರು ಉದಯದಲ್ಲಿ ಶಾಂತಕ್ಕುಂ. ಶುಕ್ರನುದಯದಲ್ಲಿ ಕ್ರೋಧಿ ಶನಿ ಉದಯದಲ್ಲಿ ಬಲು ದರಿದ್ರನು.

# ಕುಂಭರಾಶಿಯವರಿಗೆ

ಧನಿಷ್ಠಾ ಅರ್ಧಪಾದಂ, ಶತತಾರಾ, ಪೂರ್ವಾಭಾದ್ರಪದ ತ್ರಯೋ ಪಾದಂ ಕುಂಭರಾಶಿ ಈ ರಾಶಿಗೆ ಒಡೆಯನು ಶನಿ ಶತತಾರಾ ಹೆಣ್ಣು ಕುದುರೆ, ರಾಕ್ಷಸಗಣ, ತ್ರಿ ನಕ್ಷತ್ರ, ಮೇಲಮುಖ, ಅದಿಷ್ಟೆವ ಈಶ್ವರ, ವೃಕ್ಷ ಕಾಡವಿ, ಪಕ್ಷಿ ಬರದ್ವಾಜ. ಪೂರ್ವಾಭಾದ್ರಪದ ಪುರುಷ, ವ್ಯಾರ್ಗ ಮನುಷ್ಯಗಣ, ಪುರುಷನಕ್ಷತ್ರ, ನಕ್ಷತ್ರ ತಳಮುಖ, ದೇವತಿ ಭೈರವ. ವೃಕ್ಷ ಹುಣಸಿ, ಪಕ್ಷಿ ಪಿಂಗಲಿ. ಈ ರಾಶಿಯವರು ಪದ್ವಸ್ವರು, ಅರಸರಿಗೆ ಪ್ರಿಯರು, ಪರೋಪಕಾರಿ, ಬನಾಯಿವುಳ್ಳವನು, ಸ್ಥೂಲ ಕಾಯ, ಗುಜ ನಾಲ್ಕು ಪ್ರವೀಣನಾಹನು. ಕೋಪಿಯು, ಸ್ತ್ರೀಯರ ಪ್ರಿಯನು, ವಿದ್ಯದಲ್ಲಿ ಹೀನನು, ಕಾರ್ಯಕ್ಕೆ ಶ್ರೇಷ್ಠ, ದೇವತಾ ಭಕ್ತನು. ಈ ರಾಶಿಯಲ್ಲಿ ಹುಟ್ಟಿ ದವನು ೧ ವರುಷದಲ್ಲಿ, ೭ ವರುಷದಲ್ಲಿ, ೧೧ ವರುಷದಲ್ಲಿ, ೩೨ ವರುಷದಲ್ಲಿ ೪೪ ವರುಷದಲ್ಲಿ, ೫೦ ವರುಷದಲ್ಲಿ ದೇವರಪೀಡೆ, ಭೂತಚೇಷ್ಟೆ, ಹೊಟ್ಟೆ ಶೂಲಿ, ಸಿಡಿಲು ಇಷ್ಟು ಕಂಟಕವು. ಇವು ಕಳೆದುಳಿದರೆ ಮುಂದೆ ಭಾದ್ರಪದ ಶುದ್ಧ ಜ್ಯೇಷ್ಠಾನಕಕ್ಷತ್ರ ಶನಿವಾರ ಉದಯವಾದ ಜಾವದಲ್ಲಿ ಮರಣ. ಈ ರಾಶಿಯವರು ಆದಿತ್ಯನುದಯದಲ್ಲಿ ಬುದ್ಧಿವಂತ. ಸೋಮನುದಯದಲ್ಲಿ ಕೃಷಿವಂತನು. ಮಂಗಳನುದಯದಲ್ಲಿ ಕಳ್ಳನು. ಬುಧನುದಯದಲ್ಲಿ ಪಂಡಿತನು. ಗುರು ಉದಯವಲ್ಲಿ ವಿದ್ಯೆಯುಳ್ಳವನು. ಶುಕ್ರನುದಯದಲ್ಲಿ ಕಿವುಡನು. ಶನಿ ಉದಯುದಲ್ಲಿ ಕಳ್ಳನು.

# ಮೀನರಾಶಿಯವರಿಗೆ

ಪೂರ್ವಾಭಾದ್ರಪದ ಏಕಪಾದಂ, ಉತ್ತ್ರಾಭಾದ್ರಪದ, ರೇವತಿ ಮೀನ ರಾಶಿ. ಈ ರಾಶಿಗೆ ಅಧಿಪತಿ ಗುರುವು. ಉತ್ತ್ರಾಭಾದ್ರಪದ ಆಕಳ, ಮನುಷ್ಯ ಗಣ, ನಕ್ಷತ್ರ ಮೇಗ ಮುಖ, ಆದಿದೈವ ಬ್ರಹ್ಮ, ವೃಕ್ಷ ಬೇವು, ಪಕ್ಷಿ ನವಿಲು. ರೇವತಿ ಹೆಂಣಾನೆ, ದೇವಗಣ, ಸಮಮುಖ ತಾರೆ, ಆದಿದೈವ ಭಗವತಿ, ತ್ರಿನಕ್ಷತ್ರ, ವೃಕ್ಷ ಮತ್ತಿ, ಪಕ್ಷಿ ನವಿಲು. ಈ ರಾಶಿಯವರು ಗುಣವಂತರು, ಬದಕರು, ಪರೋಪಕಾರಿ ಗುಣವಂತನು, ಮತಿವಂತನು, ಮುಖ ಕಳೆಉಳ್ಳವನು, ಸರ್ವ ಜನಪ್ರಿಯನು, ಪಶುವಿಗೆ ಪ್ರಿಯ, ಹಾದರಿಗೆ ಘನವಕ್ಕುಂ, ಸ್ತ್ರೀಯರ ನುಡಿಗೆ ಸಿಕ್ಕವನು, ತನಗೆ ಅವಕಾರ್ಯ ಮಾಡಿ ಕೊಂಬುವನು, ಬಲಾಢ್ಯನು. ಈ ರಾಶಿಯಲ್ಲಿ ಹುಟ್ಟಿದವನು ೬ ವರುಷದಲ್ಲಿ ೨೮ ವರುಷದಲ್ಲಿ, ೩೬ ವರುಷದಲ್ಲಿ ಕಂಟಕ. ಜ್ವರದಿಂದ, ನೀರಿನಿಂದ, ಕಾಳಗದಿಂದ, ಪಶುವಿನಿಂದ ಇಷ್ಟು ಕಂಟಕದಿಂದ ಉಳಿದರೆ ಮುಂದೆ ೯೬ ವರುಷ ಬಾಳಿ ಆಷಾಢ ಪೂರ್ವ ಪಕ್ಷದ ನವಮಿ ಶನಿವಾರ ಅಸ್ತವಾದ ಜಾವ ಕಾಲದಲ್ಲಿ ಮರಣ. ಈ ರಾಶಿಯಲ್ಲಿ ಹುಟ್ಟಿದವರು ಆದಿತ್ಯನುದಯದಲ್ಲಿ ಗುಜನಾಹನು, ಸೋಮನುದಯದಲ್ಲಿ ರಾಜಪೂಜಿತನು, ಮಂಗಳನುದಯ ದಲ್ಲಿ ಕುಷ್ಟ, ಬುಧನುದಯದಲ್ಲಿ ಕಾಂತಿವುಳ್ಳವನು, ಗುರು ಉದಯದಲ್ಲಿ ವಿದ್ಯೆವುಳ್ಳವನು, ಶುಕ್ರನುದಯದಲ್ಲಿ ಕುರುಡನಾಹನು, ಶನಿ ಉದಯದಲ್ಲಿ ಕೋಪವುಳ್ಳವನಾಗುವನು.



# ಅಂಗಚೇಷ್ಟೆಯ ಲಕ್ಷಣವು

## ನರ ಪಿಂಗಲ ಕೇಳಬಂದವರ ನೋಡಿ ಹೇಳುವದು

ಕೇಳಬಂದವರು ಲಲಾಟ ಮುಟ್ಟಿದರೆ ಲಾಭ. ಕರ್ಣ ಮುಟ್ಟಿಕೊಳ್ಳುತ ಬಂದರೆ ಹಲವು ಸುದ್ದಿ ಕೇಳುವದು. ತುಟಿಯು ಮುಟ್ಟುತ ಬಂದರೆ ಕಾರ್ಯ ಸಿದ್ಧಿ. ಆಕಳಿಸುತ್ತ, ಉಗಳುತ್ತ ಬಂದರೆ ಲಾಭ. ಗಡ್ಡ ಮುಟ್ಟಿಕೊಳ್ಳುತ್ತ ಬಂದರೆ ಕಾರ್ಯ ಹಾನಿ. ಕೊರಳ ಮುಟ್ಟುತ್ತ ಬಂದರೆ ಕೆಲಸ ಆಗುವದು. ಬೆನ್ನ ಹಿಡಕೊಂಡು ಬಂದರೆ ಲಾಭ. ಕೈಯ್ಯ ಹಿಡಕೊಂಡು ಬಂದರೆ ಹೋದ ಠಾವಿನಲ್ಲಿ ಕಲಹ. ತುರುಸುತ್ತ ಬಂದರೆ ನಷ್ಟ. ಹೃದಯ ಮುಟ್ಟಿಸುತ್ತ ಬಂದರೆ ಸಂತೋಷ. ಹೊಟ್ಟೆಯು ಮುಟ್ಟಿಕೊಳ್ಳುತ್ತ ಬಂದರೆ ಲಾಭ. ಶರೀರವ ಮುಟ್ಟಿಕೊಳ್ಳುತ್ತ ಬಂದರೆ ಮರಣ. ಕಾಲಿಂದ ಕಾಲನೊರೆಸುತ್ತ ಬಂದರೆ ಕಾರ್ಯ ಕೆಡುವದು. ಮಲಗುತ್ತ ಬಂದರೆ ಕಾರ್ಯ ಹಾನಿ.

## ರಾಗವಾರ್ಧಿಕ ಷಟ್ಪದಿ

ವಾರ್ಧಿಕ ಷಟ್ಪದಿಗಳಿಂದ ವಿಸ್ತಾರವಾಗಿ ಸಾರುವೆನು ಸರ್ವ ಕಾರ್ಯಕ್ಕೆ ಶುಭ ಮುಹೂರ್ತಗಳ ಆರಾದಾಡರಿತು ಪ್ರವರ್ತನೆ ಮಾಡಿದರೆ ಕಾರ್ಯ ದಿಗ್ವಿಜಯಕ್ಕಪ್ಪುದು ||ಪಲ್ಲ|| ಪಶು ಜೀವಿಗಳ ಕ್ರಯಮಾಡಿಕೊಳ್ಳಬೇಕಾದರೆ ದಶತಾರಿಗಳ ಕಳೆದುಳಿದ ನಕ್ಷತ್ರಗಳಲ್ಲಿ | ವಸುಧಿಯೊಳಗಾರಾದಡೈ ತೆಗದು ತರಲು | ಜಯಜಯುವಾಗಿ ಬಾಳುತಿಹವು ||೧|| ಉಸರುವೆನು ಇದರ ವಿಸ್ತರಗಳನು | ತಿಳಿವಂತೆ | ದೆಶೆವುಳ್ಳ ಅನುರಾಧರೋಹಿಣಿನಕ್ಷತ್ರದಲ್ಲಿ | ಪಸುರು ತಂದರೆ | ಬಸುಳಿದು ಪೋಪದು | ಕಂಡೆ ಕುಶಲವನು ಕೇಳು ಮುಂದೆ ||೨|| ಮುತ್ತೆ | ಚಿತ್ತೆ ಸ್ವಾತಿಯೆಂಬುದರೊಳಗೆ ಬೇಗೆ | ಪತ್ತಿ ತಂದರೆ | ಕುಂಟು ಕುರಡುಗಳು ಆಗುವವು | ಕುತ್ತ ಬಲುಪರಿಯಿಂದ ಕಾಡಿ ಕೆಡುವವು | ಮುಂದೆ ಬಿತ್ತರಿಪೆ ತಿಳಿದ ಕೊಳ್ಳಿ || ಸತ್ಯಮುದಂ ಸಿರಿ | ಶ್ರವಣ ರೇವತಿ | ಉತ್ತರಿಯ ವ್ಯರ್ಥವಾಗಿ ತನ್ನ ಬಿಟ್ಟು ಕಡಿಗ್ಹೋಗು | ಮುನಿತ್ಯವೆಂದರಿದು ಈಪರಿನೆಲ್ಲವ ಬಿಡಲು | ಸಾರ್ಥಕವೆಂದು ಸರ್ವದಾ ||೩||

# ಪ್ರಯಾಣದ ದಿಕ್ಕು-ವಾರದ ಫಲ

## ಪ್ರೈಣವನು ದಿಕ್ಕಿನಲ್ಲಿ ಮಾಡಬೇಕಾದರೆ ದಿನ ವಾರಗಳ ವಿಸ್ತಾರವು

ಪೂರ್ವ ದಿಕ್ಕಿಗೆ ಮಂಗಳವಾರ ಹೋದರೆ ಲಾಭ, ಶನಿವಾರ ಸೋಮವಾರ ನಷ್ಟ, ಕಾರ್ಯ ಲೇಸುಂಟು. ಮಂದ ಚಂದ್ರವಾರದಲಿ ಅರೆ ಹೋದರೆ ದಕ್ಷಿಣಕ್ಕೆ ಶುಭ, ಗುಣಗಳು ಮೀರಿ ಗುರುವಾರ ಆಕಡಿಗ್ಹೆಜ್ಜೆಯನಿಕ್ಕಬಾರದೈ ಕೇಳು ಮತ್ತೆ. ಪಶ್ಚಿಮಕ್ಕೆ ಗುರುವಾರ ಬುಧವಾರ ಹೋದರೆ ಲಾಭ, ಲೇಸು. ಅಚ್ಚು ಹೊಯಿದಂತೆ ಕೆಲಸಗಳು ಕೈಗೂಡುವವು, ಕೊಚ್ಚಿತಾರ್ಥಗಪ್ಪಿಭರ್ಗ ಅರ್ಕವಾರ ಮುಂದತ್ತತ್ತ ಹೋಗಬೇಡ, ನಿಶ್ಚಯವು. ಉತ್ತರಕೆ ಶುಕ್ರವಾರ ಭಾನುವಾರ ಬೆಚ್ಚಂತೆ ಕೆಲಸ ಕೈಗೂಡುವವು. ಕಂಡೆ ಎಚ್ಚರಿಕೆ ಇರಲಿ ಮಂಗಳವಾರ ಬುಧವಾರ ಆ ದಿಕ್ಕಿನಲ್ಲಿ ಹೋಗಬಾರದು.

ತಿಥಿ ವಾರ ಮಥಿನಿಸಲು ಅದರ ಗುಣದೋಷಗಳ ದ್ವಿತಿಯಾ ಭೌಮ್ಯವಾರ, ತೃತಿಯಾ ಶುಕ್ರವಾರ, ಚತುರ್ಥಿ ಭಾನುವಾರ, ಬುಧ ಪಂಚಮಿ ಬರಲು ಘಾತಗುಣವೆಂದರಿವದು; ಅತಿ ಹೀನವು ಷಷ್ಠಿ ಶನಿವಾರ, ಸಪ್ತಮಿ ಸೋಮವಾರ, ಮತಿಭೃಷ್ಟ ಅಷ್ಟಮಿ ಗುರುವಾರ ಬರೆ ಕಷ್ಟ, ಇತರ ಗುಣಗಳನುಳಿದು ಮಾಡಿದವರಿಗೆ ಮುಂದೆ ಶತ ಆಯುಷ್ಯವೆಂದರಿವದು.

## ವಾರವಾರಕೆ ಅವನ ನಕ್ಷತ್ರ ಕೂಡಿದರೆ ತೋರುವದು ಅದರ ಗುಣ

ಆವಪರಿಯಾದಡಂ ಕ್ಷೀರರುಚಿರದಂತೆ ಆದಿತ್ಯೆ ಹಸ್ತಬರಲು ವಿಶಾಖಾ ವಿನಾಶನಾ. ಶ್ರವಣ ಸೋಮವಾರ ಬರಲು ಅಮೃತವೆನ್ನಿ, ಕನಿಷ್ಟವೆನ್ನಿ ಪೂರ್ವಾಷಾಢಾ ನಷ್ಟಗುಣ. ಅಶ್ವಿನಿ ಮಂಗಳವಾರ ಬಂದರೆ ಹರುಷ, ಉತ್ತಮ, ರೋಹಿಣಿ ಕಷ್ಟ. ಮತ್ತೆ ಬುಧವಾರ ಅನುರಾಧಾ ಬರಲು ಮಡ್ಡು ಘೃತದಂತೆ, ಒದಗಿ ರೇವತಿ ಬಂದು ಕೂಡೆ ವಿನಾಶನ. ಚದುರ ಗುಣವುಳ್ಳ ಪುಷ್ಯ ಗುರುವಾರ ಬರಲು ಉತ್ತಮ. ಮತ್ತೆ ರೋಹಿಣಿ ಕಷ್ಟ.

ಶುಕ್ರವಾರ ರೇವತಿ ಬರಲು ಅಧಿಕ ಸುಖವುಂಟು, ಕದನವನ್ನು ಹಚ್ಚುವದು. ಪುಷ್ಯ ನಕ್ಷತ್ರವದ್ದು ಉದಪತ್ರಯೆಂಬುದು ರೋಹಿಣಿ ಕಷ್ಟ.

ರೋಹಿಣಿ ಶನಿವಾರ ಉತ್ತರಿ ಕುತ್ತಂಗಳು ತೂರ್ಯಬಂದರೆ ಹೊರಡು- ವರೆ ಶುಭವಿಲ್ಲದಿರೆ.

# ವಾರದೋಷಕ್ಕೆ ಪರಿಹಾರವು

ಸೂರ್ಯವಾರಕ್ಕೆ ಘೃತ, ಚಂದ್ರವಾರಕ್ಕೆ ಕ್ಷೀರ, ಮಂಗಳವಾರಕ್ಕೆ ಬೆಲ್ಲ ಅರಿತಕ್ಕುಂ, ಬುಧವಾರ ತೈಲ, ಗುರುವಾರದಿ ಭರ್ಗವಾರಕ್ಕೆ ಗೋದಿ ಪಾಯಸ, ಶನಿವಾರ ಉದ್ದು ಮರಿಯದಲೆ ಈ ಪರಿಯು ಮಾಡಿದವಂಗೆ ದುರಿತ ಹರವು; ನಿರ್ವಗಳವಾಗುವದು ಹೊಸ ಇಮಾರ್ತಿಗಳು ಗೃಹ ಗ್ರಾಮಕ್ಕೆ, ಕೆರೆ-ಭಾಂವಿಗಳ ನಸುನಗುತ ವಿವಹಳಿದ ಮೋಹಶ್ಚಗಳಿಗೆಲ್ಲ, ಹಲವು ಜೀನಿಸಿನ ಬಿತ್ತಿ ತೆಗೆದುಕೊಂಬುವದಕ್ಕೆಲ್ಲ ದಶಯೇಕ ನಕ್ಷತ್ರಗಳ ಪೆಸರು ತಿಳಿವಂತೆ ಉಸರುವೆನು. ಮಘ, ವ್ಯಾಗಶಿರ, ಹಸ್ತ, ಸ್ವಾತಿ, ಮೂಲ ಕುಶಲಗುಣವುಳ್ಳ ರೇವತಿ, ರೋಹಿಣಿ, ಅನುರಾಧಾ, ಉತ್ತರಿ ಕುತ್ತಂಗಳು.

# ಹೆಣ್ಣಿನ ಲಕ್ಷಣ

ಹೆಣ್ಣಿನ ಸಾಲಾವಳಿ ಕೇಳ ಬಂದಾತನ ನಿಂತ ದಿಕ್ಕನ್ನು ನೋಡಿ ಹೇಳುವದು. ಸೂರ್ಯನಮೇಲೆ ನಿಂತು ಕೇಳಿದರೆ ಹೆಣ್ಣಿನ ಲಕ್ಷಣವು ಬಣ್ಣ ಕೆಂಪು, ಬಟ್ಟನ್ನ ಮೋರೆ, ಬೆಳ್ಳನ್ನ ಕಣ್ಣು, ಕೂಡಿದ ಹುಬ್ಬು, ಮುಂಗೊಪ್ಪಿ ಆದನ್ನ ತಂದರೆ ದನ–ಕರ ಹೆಚ್ಚುವದು, ತರಬಹುದು.

ಮಧ್ಯದಲ್ಲಿ ನಿಂತು ಕೇಳಿದರೆ ಶಿಲವಧೆ, ಶುಭ್ರವು ಪತಿವ್ರತಿ, ಚೊಚ್ಚಲ ಗಂಡು ಮಗನ ಹಡಿವಳು, ಎಡಭಾಗ್ಯವಂತಿ, ತರಬಹುದು.

ಚಂದ್ರನ ಮೇಲೆ ನಿಂತು ಕೇಳಲು ಕುಂತಣಿ ಮಗಳು, ಕುಟಿಲಡ ಹುಬ್ಬು, ಛಾಯ ಕೆಂಪು, ಬಲದಲ್ಲಿ ಮಚ್ಚವುಂಟು, ಬೆನ್ನಮೇಲೆ ಸುಪತ್ತಿ ಗಿರ್‍ಯಾಕೆ ಸೂಳಿ, ತೊತ್ತನಾಳುವಳು, ತರಬಹುದು.

**ಮಧ್ಯದಲ್ಲಿ ನಿಂತು ಕೇಳಲು** ಕೆಲವು ಸಾಧಾರಣಿ ಕಾರ್ಯಸಿದ್ಧಿ ವುಳ್ಳವಳು, ಯಸವಯಾಪಾರಿ, ಸಣ್ಣ ಮೂಗು, ಶಾಮವರ್ಣ. ಕರೇಮಚ್ಚೆ, ಜಾರಿಯಾಗಿಹಳು.

**ಮಂಗಳನಮೇಲೆ ನಿಂತು ಕೇಳಲು** ಅಡಿಗೆಯಲ್ಲಿ ಜಾಣೆ, ಹವಳ ಗಣ್ಣು, ಯದಿಯು ಕೂದಲು ಬಹಳ, ಭ್ರಮರ ಕುಂತಳೆ, ತರುವದು ಸಾಮಾನ್ಯ. ಮಧ್ಯದಲ್ಲಿ ನಿಂತು ಕೇಳಿದರೆ ವಿಳ್ಳೆದ ಭೋಗಿ, ಕೆಂಬಲ್ಲು, ನಿಡಿಕೇಶ. ತಿಳಿ ಶಾಮವರ್ಣದ ಮಾನುನಿ

**ಬುಧನಿನಲ್ಲಿ ನಿಂತು ಕೇಳಲು** ದೊಡ್ಡ ಹೊಟ್ಟೆ, ದೊಡ್ಡ ಕಾಲು, ಕೈ ದೊಡ್ಡವು, ಕೊರಳು ದೊಡ್ಡದು, ಹಣೆ ದೊಡ್ಡದು. ಮೂಗು ದೊಡ್ಡದು, ಕೋಳಿಯಂತೆ ಮಕ್ಕಳ ಹಡೆಸಳು. ಮಧ್ಯದಲ್ಲಿ ನಿಂತು ಕೇಳಲು ಸಿರಿವಂತೆ, ಕೂಡಿದ ಹುಬ್ಬು, ಶಾಮವರ್ಣ, ಸಣ್ಣ ದೇಹವು, ಸತಿಯರಿಗೆ ಗುಣವುಳ್ಳ ಬಾಲತರುವದು.

**ಗುರುವಿನಲ್ಲಿ ನಿಂತು ಕೇಳಲು** ಐಶ್ವರ್ಯ, ಸಂಪನ್ನೆ, ಸಣ್ಣ ಮೂಗು, ಸಣ್ಣ ಹಣೆ, ಸಣ್ಣ ಮುಂಗೈ, ಸಣ್ಣ ಕೊರಳು, ಸಣ್ಣ ಹಿಡಕೆ, ಭುಜಾ ದೊಡ್ಡದು, ಹೇಮಭಾಯಾ ತರಬಹುದು. ಮಧ್ಯದಲ್ಲಿ ನಿಂತು ಕೇಳಿದರೆ ಇಲ್ಲ, ಮಲ್ಲ, ಜಾಡಿ, ದೊಡ್ಡ-ಹೊಟ್ಟೆ, ಹೊಳ್ಳಿ ಮೂಗು, ದೊಡ್ಡ ಹಣಿ, ಜಗನ ಗಾತ್ರ, ಎಡಗಪ್ಪು, ಸಣ್ಣ ಕಣ್ಣು, ಎಷ್ಟು ದಿನವಿನಲಿ ಮನೆಗಾತಿ.

**ಶುಕ್ರನಮೇಲೆ ನಿಂತು ಕೇಳಲು** ನಸುಮೈ, ತುಂಬಿದ ಪಾದ, ತಿಳಿ. ಶಾಮವರ್ಣ, ಕಿರಿಬೆರಳು ನೆಲವ ಹೊಂದವು, ಬಲಶಿನ ಮೊಗ ಕಾಲು, ಬೆರಳಿನ ಮೇಲೆ ಕೂದಲು, ಸಂಪತ್ತಿಗೆಯು ಕೂಳಿ ಮಧ್ಯದಲ್ಲಿ ನಿಂತು ಕೇಳಲು ತಿಳು ಉಸುರು ಕಡುಕಾಮಿನಿ, ಕೋಮಲೆಯು, ಸರ್ಪನನಡೆಯು, ಬಡವಿ, ದರಿದ್ರ, ಕರಿದು, ಬಲಗಣ್ಣು ಸಣ್ಣ. ದೊಡ್ಡ ಹಣೆ, ಕುಶಲ ಕಾಯು, ಜನಗಾತ್ರೆ.

**ಶನಿಯಲ್ಲಿ ನಿಂತು ಕೇಳಲು** ಟಿಟ್ಟೆಜನ ನಡೆಯು, ನಡವು ಸೊಟ್ಟ, ಕಾಗಿ ತಿಳಿಗೆಂಪು, ಪಾದ ಅಗಲ, ಕೂನ ಬೆನ್ನು, ಕೂಡಿಸಿದ ಹೊಟ್ಟೆ,

ಶ್ವಾನನ ಗುಣ, ಚವಳಿಯ ವಂಶ. ಮಧ್ಯದಲ್ಲಿ ನಿಂತು ಕೇಳಲು ದುಂಡನ್ನ ಮೂರಿ, ಸಣ್ಣ ತುಟಿ, ಸಣ್ಣ ಹಲ್ಲು, ಚೆಲುವ ಬಿಳಿಗಣ್ಣು, ಕಿರಿಗೂದಲು, ಬಿಳಿಗೆಂಪು, ಪತಿವ್ರತೆ, ಗಂಡನ ಸಲಹುವಳು, ತರಬಹುದು.

**ರಾಹುವಿನಮೇಲೆ ನಿಂತು ಕೇಳಲು** ಕಪ್ಪುಛಾಯಾ, ಸೊಟಕನಡೆ, ಹಿಮ್ಮಡ ಕೂಡಿದ ನಡೆ, ಗಂಡುಮಕ್ಕಳ ತಾಯಿ, ಹಾಸಿಕೆಯ ಮೇಲೆ ಉಚ್ಚಿ ಹೊಯ್ಯುವಳು. ಮಧ್ಯದಲ್ಲಿ ನಿಂತು ಕೇಳಲು ನೆಲೆಯ ಹೆಂಗಸು, ನಗೆಮುಖ, ಮೋಹನೆ, ದಾಳಿಂಬರ ಬೀಜದಂತೆ ದಂತ, ಕುಲಬಾಲೆ, ಕುಮುದ ಕುಚದವಳು, ಐಶ್ವರ್ಯಸಂಪನ್ನಿ, ಗಂಡನಮೇಲೆ ಮೋಹವು, ಗ್ರಾಮಕ್ಕೆ ಹಿರಿತನವ ಮಾಡುವಳು.

## ಹೆಣ್ಣಿನ ಪರೀಕ್ಷೆ

ಇಂದ್ರನಲ್ಲಿ ನಿಂತು ಕೇಳಲು ತನು ಶಾಮವರ್ಣ, ಮುಖ ತಿಳವು, ಗುಣಿಗಣ್ಣು, ಬಟ್ಟ ಕುಚಾ, ಮಂಡೆ ಕೂದಲುದ್ದ, ಪ್ರೊರವಾರವುಳ್ಳದ್ದು, ಜಾತಕದಲ್ಲಿ ಚಿತ್ತ್ರನಿ. ಅಗ್ನಿಯಲ್ಲಿ ನಿಂತು ಕೇಳಲು ಆ ಹೆಣ್ಣು ನಸುಗೆಂಪು. ಕುಚಗಾತ್ರ, ಬಟ್ಟಮುಖ, ದೊಡ್ಡ ಕಣ್ಣು, ಕಟ್ಟಿಗೆ ನುಣ್ಪುವಂತೆ, ಜಾತಕದಲ್ಲಿ ಪದ್ಮಿನಿ. ಯಮುನಲ್ಲಿ ನಿಂತು ಕೇಳಲು ಶಾಮವರ್ಣ, ಕುಚಗಾತ್ರ, ಮುಖವು ತೋರವು, ಮಂಡಿ ಕೇಶ ಕರಿದು, ನೇತ್ರ ದೊಡ್ಡವು, ಉನ್ನತ ಪರಿವಾರ ಉಳ್ಳಾಕೆ, ಮುನ್ನ ಮೂವರ ಸಂಗ ಉಂಟು, ಜಾತಕದಲ್ಲಿ ಶಂಕಿನಿ. ನೈಋತ್ಯದಲ್ಲಿ ನಿಂತು ಕೇಳಲು ಆ ಹೆಣ್ಣು ಉದನ್ನಂದು ಮರುಳೆ ಮಂಡೆ ಮುಖ, ಬಟ್ಟಗಲ್ಲ, ತೋರಾ, ಮೊದಲು ಹೆಣ್ಣು ಹಡಿವಳು, ಜಾತಕದಲ್ಲಿ ಚಿತ್ತ್ರಿನಿ. ವರುಣನಲ್ಲಿ ನಿಂತು ಕೇಳಲು ಮೈ ಎಣ್ಣೆಗೆಂಪು, ಎಡದ ತೊಡೆಯಲ್ಲಿ ಮಚ್ಚವುಂಟು, ಗಂಡನಮೇಲೆ ಪ್ರೀತಿ, ಮೊದಲು ಗಂಡುಮಕ್ಕಳ ಫಲ. ಜಾತಕದಲ್ಲಿ ಹಸ್ತನಿ. ವಾಯುವ್ಯದಲ್ಲಿ ನಿಂತು ಕೇಳಲು ತನು ಶಾಮವರ್ಣ, ಬಲದ ತೊಡೆಯಲ್ಲಿ ಬಿಳೆ ಮಚ್ಛವುಂಟು. ಗಂಡನ ಮೇಲೆ ಅರ್ಧನ ಪ್ರೀತಿ. ಐದು ಮಕ್ಕಳ ಫಲ. ಜಾತಕದಲ್ಲಿ ಸಂಚಲಾಕ್ಷಿ. ಕುಬೇರನಲ್ಲಿ ನಿಂತು ಕೇಳಲು ಮೈ ಗೆಂಪು, ಪತಿವ್ರತೆ, ಗಂಡನಮೇಲೆ ಪ್ರೀತಿ

ಯುಳ್ಳವಳು, ನಡುಬೆನ್ನ ಮೇಲೆ ಸುಳಿಯುಂಟು. ಮಸ್ತಕದಲ್ಲಿ ಮೂರು ರೇಖೆ ಉಂಟು. ಆಕೆ ಭಾಗ್ಯವಂತಿ. ಗುಣದಲ್ಲಿ ದೊಡ್ಡವಳು. ಜಾತಕದಲ್ಲಿ ಕುಮುಲಮುಖಿ. ಈಶಾನ್ಯದಲ್ಲಿ ನಿಂತು ಕೇಳಲು ತನು ಕರಿದು, ಹೊಟ್ಟೆಯ ಮೇಲೆ ಮಚ್ಚವುಂಟು. ಆಕಿಗೆ ಅಣಿಯಿಲ್ಲ, ಎಂಟು ಮಕ್ಕಳ ಫಲ. ಜಾತಕದಲ್ಲಿ ಚಿತ್ತಿನಿ.

## ಹೊರಸು ಹೆಣೆಯುವ ಫಲ

ಆದಿತ್ಯವಾರ ಹೆಣೆಯಲು ಧನಲಾಭ. ಸೋಮವಾರ ಸುಖ. ಮಂಗಳ ವಾರ ದುಃಖ. ಬುಧವಾರ ಹೆಣೆಯಲು ಪೀಡಾಕಾರವು. ಗುರುವಾರ ಹೆಣೆಯಲು ಪುತ್ರಲಾಭ. ಶುಕ್ರವಾರ ಹೆಣೆಯಲು ಪರಮ ಸುಖ. ಶನಿವಾರ ಹೆಣೆಯಲು ಮರಣವು.

## ಮಂಡೆ ತೊಳಸಿಕೊಂಬುವ ಶುಭದಿನ

ಆದಿತ್ಯವಾರ ತೊಳಸಲು ಧನಹಾನಿ. ಸೋಮವಾರ ತೊಳಸಲು ಲಾಭ. ಮಂಗಳವಾರ ತೊಳಸಲು ಆಯುಷ್ಯ ಕಡಿಮೆ. ಬುಧವಾರ ತೊಳಸಲು ಸಂಪತ್ತು. ಗುರುವಾರ ತೊಳಸಲು ಮಾನಹಾನಿ. ಶುಕ್ರವಾರ ತೊಳಸಲು ಶುಭ. ಶನಿವಾರ ತೊಳಸಲು ನಷ್ಟ.

## ದಿಕ್ಕಿನ ಮೇಲೆ ದೇವರ ಹೇಳುವ ಲಕ್ಷಣವು

ರಾಹುವಿನ ಮೇಲೆ ನಿಂತು ಕೇಳಿದರೆ ಹೆಣ್ಣದೇವರ ಹರಕೆ. ೧ ಸೂರ್ಯನ ಮೇಲೆ ನಿಂತು ಕೇಳಿದರೆ ಬ್ರಹ್ಮದೇವರ ಹರಕೆ. ೨ ಚಂದ್ರನ ಮೇಲೆ ನಿಂತು ಕೇಳಿದರೆ ಮಲ್ಲಿಕಾರ್ಜುನನ ಹರಕೆ. ೩ ಮಂಗಳನ ಮೇಲೆ ನಿಂತು ಕೇಳಿದರೆ ಪಿಶಾಚಿ. ೪ ಬುಧವಿನ ಮೇಲೆ ನಿಂತು ಕೇಳಿದರೆ ಜಕ್ಕಣಿ, ಜಲಧಿಯ ಹರಕೆ. ೫ ಗುರುವಿನ ಮೇಲೆ ನಿಂತು ಕೇಳಿದರೆ ಕುದರಿ ದೇವರ ಹರಕೆ. ೬ ಶುಕ್ರನ ಮೇಲೆ ನಿಂತು ಕೇಳಿದರೆ ಬಸವಣ್ಣನ ಹರಕೆ. ೭ ಶನೇಶ್ವರನ ಮೇಲೆ ನಿಂತು ಕೇಳಿದರೆ ವೀರಭದ್ರದೇವರ ಹರಕೆ ಎಂದು ಹೇಳುವದು.

# ಹೊಸ ಅರಿವೆಯನ್ನು ಹೊತ್ತ ಫಲ

ಆದಿತ್ಯವಾರ ದಿವಸ ಹೊಸ ಅರಬಿಯನ್ನು ಧರಿಸಿದರೆ ಇಲಿ ಕಡೆಯುತ್ತದೆ. ಸೋಮವಾರ ದಿವಸ ಧರಿಸಿದರೆ ಕಣ್ಣಿನಲ್ಲಿ ನೆನವದು. ಮಂಗಳವಾರ ಧರಿಸಿದರೆ ಸುಡುವದು. ಬುಧವಾರ ಧರಿಸಿದರೆ ಅರ್ಥಲಾಭವಾಗುವದು. ಗುರುವಾರ ಧರಿಸಿದರೆ ಲಾಭವಾಗುವದು. ಶುಕ್ರವಾರ ಧರಿಸಿದರೆ ಸ್ತ್ರೀ ಸಂಭೋಗ. ಶನಿವಾರ ಧರಿಸಿದರೆ ಕನಿಷ್ಟವು.

# ಘಾಳಿಯ ಫಲ

ಯುಗಾದಿ ಪಾಡ್ಯದ ದಿನ ಎರಕೊಂಡು ಮಡಿಯನುಟ್ಟುಕೊಂಡು ಸೂರ್ಯನ ಉದಯದಲ್ಲಿ ಕೆಂಡದಮೇಲೆ ಧೂಪವನ್ನು ಹಾಕಿ ನೋಡುವದು. ಇಂದ್ರನಘಾಳಿ ಬೀಸಲು ಸುಖ ತೋರುವದು. ಯಮನಘಾಳಿ ಬೀಸಲು ದುಃಖ ನೈಋತ್ಯದಘಾಳಿ ಬೀಸಲು ಸುಖವಾಗುವದು. ವಾಯುವ್ಯದಘಾಳಿ ಬೀಸಲು ಮಳೆ-ಬೆಳೆ ಕಂಡಲವುಂಡಲ. ಕುಬೇರನಘಾಳಿ ಬೀಸಲು ಲೇಸು. ಈಶಾನ್ಯದಘಾಳಿ ಬೀಸಲು ಫಲಕ್ಕೆ ಒಳ್ಳೇದಲ್ಲ, ಪಶುಗಳಿಗೆ ರೋಗ, ವೀಪರೀತ ಮರಣ.

# ಮನೆ ಕಟ್ಟುವ ಲಕ್ಷಣ

ಚೈತ್ರಮಾಸದಲ್ಲಿ ಮನೆಯನ್ನು ಕಟ್ಟಲು ವ್ಯಾಧಿ ಹುಟ್ಟುವದು. ವೈಶಾಖಮಾಸದಲ್ಲಿ ಕಟ್ಟಲು ಧನಲಾಭ. ಜ್ಯೇಷ್ಠಮಾಸದಲ್ಲಿ ಮನೆ ಕಟ್ಟಲು ಮಹಾ ಹೀನವು. ಆಷಾಢಮಾಸದಲ್ಲಿ ಮನೆ ಕಟ್ಟಲುತ್ಪತ್ಯ ಹುಟ್ಟುವದು. ಶ್ರಾವಣದಲ್ಲಿ ಮನೆ ಕಟ್ಟಲು ಸಂಪತ್ತು. ಭಾದ್ರಪದದಲ್ಲಿ ಮನೆ ಕಟ್ಟಲು ಸ್ತ್ರೀಯಳು ಸಾಯುವಳು. ಆಶ್ವೀಜಮಾಸದಲ್ಲಿ ಮನೆ ಕಟ್ಟಲು ಕಲಹ ಹುಟ್ಟುವದು. ಕಾರ್ತಿಕಮಾಸದಲ್ಲಿ ಮನೆ ಕಟ್ಟಲು ಭೋಗ, ಪುತ್ರಲಾಭ ವಾಗುವದು. ಮಾರ್ಗಶಿರಮಾಸದಲ್ಲಿ ಮನೆ ಕಟ್ಟಲು ಧನಲಾಭ. ಪುಷ್ಯ ಮಾಸದಲ್ಲಿ ಮನೆ ಕಟ್ಟಲು ಅಗ್ನಿಭಯ. ಮಾಘಮಾಸದಲ್ಲಿ ಮನೆ ಕಟ್ಟಲು ದರಿದ್ರ ತಪ್ಪದು. ಫಾಲ್ಗುಣಮಾಸದಲ್ಲಿ ಮನೆ ಕಟ್ಟಲು ಮರಣ. ಈ ಶುಭಾಶುಭವನ್ನು ತಿಳಿದುಕೊಂಡು ಹೊಸ ಮನೆಯನ್ನು ಕಟ್ಟತಕ್ಕದ್ದು.

# ಗಂಡ ಒಲಿಯುವದಕ್ಕೆ

ಎತ್ತಿನ ನಾಲಿಗೆಯನ್ನು ಆದಿತ್ಯವಾರ ದಿವಸ ತಂದು ತನ್ನ ಮೂತ್ರದಲ್ಲಿ ೭ ದಿವಸ ನೆನೆಯಿಟ್ಟು ೮ ನೇ ದಿವಸ ತೆಗೆದು ಸಣ್ಣಾಗಿ ಅರೆದು, ಆದರಲ್ಲಿ ಆರದಾಳವನ್ನು ಕೂಡಿಸಿ ಅರೆದು ತುಪ್ಪದಲ್ಲಿ ಕಲಿಸಿ ಹಚ್ಚಿದರೆ ಪುರುಷ ಒಲಿಯುವನು.

# ಹೆಂಡತಿ ಒಲಿಯುವದಕ್ಕೆ

ಲಿಂಗದೊಂಡಿಯ ಬೀಜ, ಗಾಜಿಯ ಜೀಜ, ಮಳ್ಳಮೂತಂಗಿಯ ಬೀಜ, ಕರೇ ಮುಷ್ಟಗುಣಿಕೆಯ ಬೀಜ ಇವೆಲ್ಲವನ್ನು ಕೂಡಿಸಿ ಎಣ್ಣೆಯನ್ನು ತಗೆದು ತನ್ನ ಇಂದ್ರಿಯಲ್ಲಿ, ಇಲ್ಲವೆ ಮೂತ್ರದಲ್ಲಿ ಆ ಎಣ್ಣೆಯನ್ನು ಕಲಿಸಿ ತಲೆಗೆ ಹಚ್ಚಿ ಎರೆಯಲು ಸಾಯುವವರೆಗೂ ಒಲಿವಳು.

# ಕುಸ್ತಿ ಒಗೆಯುವದಕ್ಕೆ

ವಜ್ರನೀಲಿ, ವಟ್ಸ್ವಟ್ಟಿ, ವಡೆಯನಬೇರು ಈ ಮೂರನ್ನು ಆದಿತ್ಯವಾರ ಅಮವಾಸಿಯ ದಿವಸ ಪೂಜಿಸಿ ತಂದು ಸರವಿಮಾಡಿ ತೋಳಿನಲ್ಲಿ ಹಾಕಿಕೊಂಡು ಕುಸ್ತಿ ಆಡಲು ಕುಸ್ತಿ ಗೆಲೆಯುವದು.

# ಟಗರಿನ ಕಾಳಗಕ್ಕೆ

ಆದಿತ್ಯವಾರ ದಿವಸ ಶೇಗುಡಚಿಯಬೇರು ತಂದು ನರಮೂತ್ರದಲ್ಲಿ ಅರೆದು ಟಗರಿನ ಕೋಡಿಗೂ, ಮುಖಕ್ಕೂ ಚನ್ನಾಗಿ ಸವರಿ ಕಾದಿಸಲು ಟಗರು ಗೆಲಿಯುವದು.

# ಹಿಂಡುವ ದನ ಕರವನ್ನು ಕರಕೊಳ್ಳದಿದ್ದರೆ

ತೆಲಿವರಗನ ತೊಪ್ಪಲವನ್ನು ತಂದು ಬೆಲ್ಲ, ಮೆಣಸು, ಕಲ್ಲುಪ್ಪು ಹಾಕಿ ಹಾಲೊಳಗೆ ಅರೆದು ನಾಲಿಗ್ಗೆ ಹಚ್ಚಬೇಕು. ಕರವನ್ನು ಕರಕೊಳ್ಳುವದು.

# ಎತ್ತು ಸೊಬರಾ ಹಾಕಗೊಡದಿದ್ದರೆ

ತೆಲಿವರಗನ ತೊಪ್ಪಲವನ್ನು ತಂದು ಕಾಲಮಡಿಯೊಳಗೆ ಅರೆದು ಸೊಬರಾ ಹಾಕಗೊಡದ ಎತ್ತಿನ ಹೊಟ್ಟೆಗೆ ಪೂಸಲು ಸೊಬರಾ ಹಾಕ ಗೊಡುವದು.

# ಬೆಳ್ಳಿ ಮಾಡುವದು

ಮುಶಿಯಲ್ಲಿ ತವರನನ್ನು ಕರಗಿಸಿ ಪಾದರಸ ೧ ಗುಂಜಿ ತೂಕ ಹಾಕಿ ಮೇಲೆ ಆದಿತ್ಯಭಕ್ತನ ರಸವ ಹಿಂಡಲು ಶುಭ್ರವಕ್ಕುಂ.

ಎರಡು ಸೇರು ಕಿರಕಸಾಲಿಯ ಸಮೂಲವನ್ನು ಜಜ್ಜಿ ರಸವ ತಗೆದು ಆ ರಸದಲ್ಲಿ ಒಂದು ತೊಲಿ ಶಂಖಪಾಷಾಣವನ್ನು ದಾರಾ ಕಟ್ಟಿ ನಡುವೆ ನಿಲ್ಲುವಂತೆ ತೂಗು ಕಟ್ಟಿ ಆ ರಸವು ಆರುವತನಕ ಕುದಿಸಿ ಬಳಿಕ ಒಂದು ತೊಲಿ ತವರವನ್ನು ಕರಗಿಸಿ ಅದರಲ್ಲಿ ಈ ಶುದ್ಧವಾದ ಶಂಖಪಾಷಾಣವನ್ನು ಒಂದು ಮಾಸಿ ತೂಕ ಒಂದು ಕುದಿ ಕುದಿಸಿ ಕುಪ್ಪಮೇಲೆ ಹೆಂಡಿಯಕಟ್ಟಿ ಸುರುವಬೇಕು, ಮುಕ್ಕರಿಯಾಗುವದು.

# ಸ್ವರಕ್ಕೆ

ಗುಳ್ಳದ ಹಣ್ಣಿನ ಬೀಜವನ್ನು ಸಣ್ಣಾಗಿ ಅರೆದು ಕರಿ ಆಕಳ ತುಪ್ಪದಲ್ಲಿ ಕಲಸಿ ತಕ್ಕೊಳ್ಳಲು ಸ್ವರ ಬರುವದು.

# ನೆರೆ ಕರಿದಾಗುವದಕ್ಕೆ

ಸೀಸವನ್ನೂ ಹೊಸ ಸುಣ್ಣವನ್ನೂ ಅರೆದು ಹಚ್ಚಲು ಬಿಳಿ ಕೂದಲು ಕರಿದಾಗುವವು.

# ಕುದುರಿ ಮೈ ಹೆಚ್ಚುವದಕ್ಕೆ

ಅಳ್ಳಿಕಾಯನ್ನು ಆಕಳಮೂತ್ರದಲ್ಲಿ ನೆನೆಯಿಕ್ಕಿ ಒಳಗಿನ ಬೀಜವನ್ನು ತಗೆದು ತೋಟಿಯನ್ನು ಹಾಲೊಳಗೆ ಕುದಿಸಿ ಬೆಲ್ಲವನ್ನು ಕಲಸಿ ಕೊಡಲು ಮೈ ಹೆಚ್ಚುವದು.

## ವೀರ್ಯ ವರ್ಧನಕ್ಕೆ

ಜಾಜಿಕಾಯಿ ೨ ಗ. ಮಿಸುನಿ ಅಪು ೧|| ಗ. ಇಂಗಲೀಕ ·||· ಗ. ಮೂರನ್ನೂ ಜೇನತುಪ್ಪದಲ್ಲಿ ಮರ್ಧಿಸಿ ವೆುಣಸಿನಕಾಳ ಪ್ರಮಾಣ ಮಾತ್ರೆ ಮಾಡಿ ಜೇನತುಪ್ಪದಲ್ಲಿ ತಕ್ಕೊಳ್ಳುವದು. ಪಥ್ಯ– ಮಧುರಾಹಾರ ಊಟ ಮಾಡುವದು, ೨೧ ದಿವಸಕ್ಕೆ ಗಂಡಸುತನ ಬರುವದು.

## ಮಕ್ಕಳಾಗುವದಕ್ಕೆ

ಮುತ್ತಲಬೀಜವನ್ನು ಸುಟ್ಟು ಹಳೇ ನೀರಿನಲ್ಲಿ ಅರೆದು ಕುಡಿಸಲು ಬಂಜೆಗೆ ಮಕ್ಕಳಾಗುವವು.

ಬ್ರಹ್ಮದಂಡಿಯ ಸಮೂಲವನ್ನು ತಂದು ಕುಟ್ಟಿ ಮುದ್ದಿಮಾಡಿ ಯೋನಿಯೊಳಗೆ ಕಟ್ಟಲು ಬೀಜ ತಿನ್ನುವ ಹುಳಾ ಸಾಯುವದು.

ಕರಿಯಾ ಸಮೂಲವನ್ನು ತಂದು ರಸವನ್ನು ತಗೆದು ತುಪ್ಪದಲ್ಲಿ ಕೊಡಲು ಪುತ್ರಸಂತಾನವಕ್ಕುಂ

## ಹಡಿಯಲಾರದವರಿಗೆ

ಉಳ್ಳಬೀಜ, ಶುಂಠಿ, ಜೇನತುಪ್ಪದಲ್ಲಿಬೆರಸಿ ನೀರಿಲಿ ಕುಡಿಯೆ ಬೆನ್ನಿಗೆ ಹತ್ತಿದ ಕೂಸು ಬಿಡುವದು.

## ಮೊಲೆ ಹಾಲಿಗೆ

ಜ್ಯೇಷ್ಟಮಧು, ಸಕ್ಕರಿ ಈ ಎರಡನ್ನು ಹಸಿಯ ಹಾಲಿನಲ್ಲಿ ಕೂಡಿಸಿ ರಾಸಮಾಡಿ ಕುಡಿಯಲು ಹಾಲು ಹಿರಿದಕ್ಕುಂ.



# ಯಂತ್ರಗಳು



## ಯಂತ್ರಗಳನ್ನು ತಯಾರಿಸುವ ಕ್ರಮ

ಸಕಲ ಯಂತ್ರಗಳನ್ನು ಚಂದನ ಗಂಧೋದಕದಿಂದ ತೊಳಿದು ಕಣಗಿಲ ಹೂವುಗಳನ್ನು ಮಂತ್ರಿಸಿ ಯಂತ್ರದಮೇಲೆ ವಗೆಯುವದು. ಆರಳೆಯ ಕೋಲೆಯಿಂದ ಯಂತ್ರದಮೇಲೆ ನೀರು ಸಿಂಪಡಿಸುವದು. ಕರಿಕೆಯ ನೀರಿನಿಂದ ತೊಳೆಯುವದು.




ಈ ಯಂತ್ರ ಅಳುವ ಮಕ್ಕಳಿಗೆ ಕಟ್ಟುವದು.

| | | |
|---|---|---|
| ಶ್ರೀ | ಹ್ರ | ಶ್ರೀ |
| ಶ್ಲ | ಹ್ರ | ಶ್ರೀ |
| ೧೮ | ಬ | ೧೮ |

ಈ ಯಂತ್ರವ ನಡುಮನೆಯ ಕಂಬಕ್ಕೆ ಕಟ್ಟಲು ಸರ್ವ ಗ್ರಹ ಬಿಡುವದು.

| | | |
|---|---|---|
| ಕಿಂ | ಕಿಂ | ಕಿಂ |
| ಕುಂ | ಕುಂ | ಕುಂ |
| ಬಾ | ಬಾ | ಬಾ |

ಈ ಯಂತ್ರ ಬರದು ಕೊರಳಿಗೆ ಕಟ್ಟಲು ಗಂಡನ ವಲ್ಲದವಳು ವಲಿವಳು.

| |
|---|
| ದ್ರ——————§ |

ಈ ಯಂತ್ರ ಹಲ್ಲು ಕಡಿವದಕ್ಕೆ ಬರದು ಕಟ್ಟಲು ಬಿಡುವದು.

| | | |
|---|---|---|
| | ಹ್ರಾಂ | |
| ಹ್ರ | ಓಂ | ಹ್ರ |
| | ಹ್ರ | |

ಈ ಯಂತ್ರ ವಿಭೂತಿಯಲ್ಲಿ ಬರೆದು ಹಾಕಲು ಗ್ರಹ ನುಡಿವದು

| |
|---|
| ಜೊ ಜೊ ಜೊ ಜೊ ಜೊ |

ಈ ಯಂತ್ರವನ್ನು ಜ್ವರಕ್ಕೆ ಬರದು ಕಟ್ಟುವದು.

| |
|---|
| ಬ |

ಈ ಯಂತ್ರವನ್ನು ಶಿಶುವಿನ ಕಾರಿಕೆಗೆ ಕಟ್ಟುವದು.

| |
|---|
| ಕ್ರಿದೇತೇವಿ ಕೀಲಕ್ರದಿ |

ಈ ಯಂತ್ರವನ್ನು ಮುಟ್ಟ ದೋಷಕ್ಕೆ ಕಟ್ಟಲು ಮುಟ್ಟದೋಷ ಪರಿಹಾರವು.

| |
|---|
| ಹಾರ ಹಾ |

ಈ ಯಂತ್ರ ಮಲೆಹಾಲು ಇಲ್ಲವದರಿಗೆ ಕಟ್ಟುವದು.

| | | | |
|---|---|---|---|
| ಕ್ಷ | ಕ್ಷ | ಕ್ಷ | ಕ್ಷ |
| ದ್ರ | ದ್ರ | ದ್ರ | ದ್ರ |

ಈ ಯಂತ್ರ ಬರೆದು ಕಟ್ಟಿಕೊಳ್ಳಲು ಕರೆಯದವರು ಕರದಾರು.

| |
|---|
| ಕ್ಷೋದಿಕ್ಷೋದಿ<br>ಕ್ಷೋದಿಕ್ಷೋದಿ |

ಈ ಯಂತ್ರ ಬರೆದು ಬಡಮಕ್ಕಳಿಗೆ ಕಟ್ಟಲು ರಕ್ಷಿ ಸಿದ್ಧಿ ಆಗುವದು.

| | |
|---|---|
| ೨<br>೮<br>೮<br>೬ | ೭<br>೭<br>೧<br>೯ |

ಈ ಯಂತ್ರ ಹುಲಿಗೆ ಬಾಯಿ ಕಟ್ಟುವದು.

| |
|---|
| ಹ್ರಾಂ ಹ್ರಿಂ |

ಈ ಯಂತ್ರ ಬೆದರುವ ಮಕ್ಕಳಿಗೆ ಕಟ್ಟುವದು.

| |
|---|
| ಕೆ ದೆ ರ ಜ ಡೆ<br>ಹಿ ಆ ದ ನ<br>ದೆಚಿ ದದ್ರಜೆ |

ಈ ಯಂತ್ರ ಸರ್ವ ರೋಗಕ್ಕೆ ಕಟ್ಟುವದು.

| | | | |
|---|---|---|---|
| ೬೬ | ೧೭ | ೭ | ೨ |
| ೬ | ೭ | ೧೦ | ೬೯ |
| ೭೧ | ೬೨ | ೮೯ | ೯ |
| ೯ | ೫ | ೬೮ | ೧೯ |

ಈ ಯಂತ್ರ ದುರಿತ ಹರವು
ಕೈಯಲ್ಲಿರಲು ಸಾಲ ಹರವು.

| |
|---|
| ಕ್ಷಂ ರಕ್ಷ<br>ತಂ ತಂ ದಃಂ<br>ತಿತಕ್ಷತಿಕ<br>ದೇವದತ್ತ |

ಈ ಯಂತ್ರ ಮಕ್ಕಳು ಸಾಯು
ಅವರಿಗೆ ಕಟ್ಟಿದರೆ
ಮಕ್ಕಳು ಬದುಕುವವು.

| |
|---|
| ಕ್ಷಂ ಕ್ಷಂ ಶ್ರೀ ಕ್ಷಂ ಕ್ಷಂ |
| ಅಬದೆವದಹೆ |
| ಕ್ಷಂ ಕ್ಷಂ ಶ್ರೀ ಕ್ಷಂ ಕ್ಷಂ |

ಈ ಯಂತ್ರ ಮೃಗಜಾತಿಗೆ
ಬಾಯಿ ಕಟ್ಟುವದು.

| | | |
|---|---|---|
| ಹಾಂ | ಹಾಂ | ಹಾಂ |
| ಕ್ಷಿಂ | ಕ್ಷಿಂ | ಕ್ಷಿಂ |
| ಹಾಂ | ಹಾಂ | ಹಾಂ |

ಈ ಯಂತ್ರ ಛಳಿಜ್ವರಕ್ಕೆ
ತಗಡಿನಮೇಲೆ ಬರೆದು ಕಟ್ಟಲು
ಛಳಿಜ್ವರ ನಿಲ್ಲುವವು.



# ನಿಧಿ ನಿಕ್ಷೇಪಾದಿ ಅಂಜನ ಕ್ರಮವು



ಆದಿತ್ಯವಾರ ಮಾತಾಡದೇ ಹೋಗಿ ಸಹದೇವಿ ಸೊಪ್ಪು ತಂದು ಅದರ ರಸದಲ್ಲಿ ಪಚ್ಚ ಕರ್ಪೂರವನ್ನು ಮರ್ದಿಸಿ, ದೇವಗಣದವರ ಕಣ್ಣಿಗೆ ಹಚ್ಚಿ ನೋಡಲು ಭೂಮಿಯಲ್ಲಿದ್ದ ದ್ರವ್ಯ ಕಾಣುವದು ಮತ್ತು ಕರೀ ಕಾಡಿಗ್ಗ ರಗದ ಬೇರು ಎತ್ತಿನನಾಲಿಗೆಯ ಬೇರು ಬಾಳಿಯಬೇರು ಗೋರೋಜನ ಪಚ್ಚಕರ್ಪೂರ ಕುಂಕುಮ ಇವೆಲ್ಲವನ್ನು ಸ್ತ್ರೀಯರ ಮೊಲೆಯ ಹಾಲಿನಲ್ಲಿ ಮರ್ದಿಸಿ ದೇವಗಣದವರಿಗೆ ಕಣ್ಣಿಗೆ ಹಚ್ಚಲು ನೋಡಲು ಭೂಮಿಯಲ್ಲಿದ್ದ ದ್ರವ್ಯ ದೇವತಾದಿಗಳು ಕಾಣಿಸುವರು.

**ಮತ್ತೊಂದು ಉಪಾಯವೇನಂದರೆ—**

## ಬಿಳೇಗುಳದ ಕಲ್ಪವು

ಆದಿತ್ಯವಾರ ಆರಿದ್ರಾ ನಕ್ಷತ್ರದಲ್ಲಿ ಶುಚಿಭೂರ್ಷಿತನಾಗಿ ಅಷ್ಟವಿಧಾರ್ಚನೆಯ ಮಾಡಿ ಬಿಳೇಗುಳದಬೇರು ಮೆಟ್ಟಿ ನೋಡಲು ನಕ್ಷತ್ರಗಳು ಕಾಣುವವು. ಒಂದು ಮುಡಿಯನುಟ್ಟು ಮೇಲೆ ಕರಿಯಕಂಬಳಿಯ ಹಾಕಿ ಮೆಟ್ಟಿ ನೋಡಲು ಊರ್ಧ್ವ ನಕ್ಷತ್ರಗಳು ಕಾಣುವವು. ಆ ಬೇರಿನ ರಸವ ಒಂದು ಕಣ್ಣಿನ ಹಂಚಿಗೆ ಹಚ್ಚಿ ಆಡಿನ ತುಪ್ಪದಲ್ಲಿ ಕಾಡಹತ್ತಿಯ ಬತ್ತಿಯ ಮಾಡಿ ಕಪ್ಪು ಹಿಡಿದು ಕಾಲು ಮುಂದಾಗಿ ಹುಟ್ಟಿದವನಿಗೆ ದೇವಗಣದವನಾಗಲಿ ಲಕ್ಷಣವುಳ್ಳವನಾಗಲಿ ಹಚ್ಚಿದರೆ ಭೂಮಿಯೊಳಗಿನ ದ್ರವ್ಯ ಕಾಣಲಕ್ಕು ಇದು ಸರ್ವಾಂಜನವು ತಪ್ಪದು ಸಿದ್ಧಾಂತವು.

# ನಿಧಿ ನಿಕ್ಷೇಪ ಜಲುತರು ಪಾಷಾಣ ಕಾಣಿಸುವ ದಕ್ಕೂ ಭೂತ-ಪ್ರೇತ-ಪಿಶಾಚಿ ಕಾಣಿಸುವದಕ್ಕೂ ಅದೃಶ್ಯಕ್ಕೂ ದಿವ್ಯಾಂಜನವು

ಆದಿತ್ಯವಾರ ಸತ್ತ ಬಾಣಂತಿಯ ಕಪಾಲವ ತಂದು ಕಪ್ಪು ಹಿಡಿಯುವ ಕ್ರಮವು ಮನುಷ್ಯರ ರುಂಡದಸ್ತಿಯನ್ನು ಡೋವಿಯೊಳಗೆ ತುಂಬಿ ಆ ಡೋವಿಗೆಗೆ ನೆಲದಾಳಿಕಲ್ಪ ಈಶ್ವರಿಕಲ್ಪಮುಸವಂಟಿಗೆಯಮೇಲೆ ಬೆಳೆದ ಕಾಡಿ ಗ್ಗರಗದಕಲ್ಪ ಈಮೂರು ಕಲ್ಪವನ್ನು ಆಡೋವಿಗೆಗೆ ಹಚ್ಚಬೇಕು. ಕಂಚಾಲದ ತೈಲದಿಂದ ಕರೆ ಹತ್ತಿಯಬತ್ತಿಯನಿಟ್ಟು ದೀಪವ ಮುಟ್ಟಿಸುವದು ಅಸ್ತಿ ಗಡಿಗೆಯೊಳಗಿಟ್ಟು ಆ ಗಡಿಗೆ ಗೋಡೆಯೊಳಗಿಟ್ಟು ಮೇಲೆ ಡೋವಿಗೆಯೊಳಗೆ ನೀರು ತುಂಬಿ ಮುಚ್ಚುವದು. ಆ ಕಪ್ಪು ಹಿಡಿದು ತಂದು ಆಕಳ ಅಥವಾ ಕುರಿಯ ಬೆಂಣೆಯಲ್ಲಿ ಕಲಿಸಿ ಕೊಂಬಿನ ಭರಣಿಯಲ್ಲಿ ತುಂಬಿ ಪೂಜೆಯ ಮಾಡಿ ಕಾಲು ಮುಂದಾಗಿ ಹುಟ್ಟಿದವರ ಕೊಮಾರ ಬಸುರಾದವರ ದೇವ ಗಣದವರ ಹಸ್ತಕ್ಕೆ ಹುಬ್ಬಿಗೆ ಹಚ್ಚಿ ನೋಡಲು ದ್ರವ್ಯ ಕಾಣಲಕ್ಕು ಭೂತ, ಪ್ರೇತ ಕಾಣಲಕ್ಕು. ತಾನೇ ಹಚ್ಚಿಕೊಂಡರೆ ಅದೃಶ್ಯವು ಆರೂ ತನ್ನ ಕಾಣಲರಿಯರು. ಇದು ದಿವ್ಯಾಂಜನವು.

# ನಿಧಿನಿಕ್ಷೇಪ ಶೋಧ ಮಾಡುವ ಕ್ರಮವು

ಹಾರಕಾ ಸಾಸವಿ ಸಣಬಿನಬೀಜ ಇವನ್ನು ಸಮಾನಂಗೊಂಡು ಆಡಿನ ಹಾಲಲ್ಲಿ ಅರದು ನಿಧಿನಿಕ್ಷೇಪ ಉಂಟೆಂಬ ಠಾವಿನಲ್ಲಿ ರಾತ್ರಿ ಆ ನೆಲವನ್ನು ಸಾರಿಸಿ ಉದಯಕ್ಕೆ ನೋಡಲು ಮಣಗಿದರೆ ಉಂಟು ಸಾರಿಸಿದ್ದು ಹಾಗೇ ಇದ್ದರೆ ಇಲ್ಲವೆಂದು ತಿಳಿಯಬೇಕು.

ಅಂಜನವು ಪಾದರಸ ಗಂಧಕ ಕರೇಮದ್ದುಗುಣಿಕೆಯ ಬೀಜ ಇವನ್ನು ಚೂರ್ಣಮಾಡಿ ಜೇನತುಪ್ಪದಲ್ಲಿ ಮರ್ದಿಸಿ ಕಣ್ಣಿಗೆ ಹಚ್ಚಿಕೊಳ್ಳಲು ಸ್ವರ್ಗ ಮರ್ತ್ಯ, ಪಾತಾಳ, ಕಾಣಲಕ್ಕು.

# ಕಣ್ಣುಕಟ್ಟು ಆಗುವ ಕ್ರಮವು

ಅರಿಷಣ, ಅರದಾಳ, ಕುಂಕುಮ, ಗೋರೋಜನ, ಕರಿ ಆಕಳತುಪ್ಪ ಇವನ್ನು ತೊಂಡಿ ರಸದಲ್ಲಿ ಅರದು ತಿಲಕವಿಡಲು ಕಣ್ಣುಕಟ್ಟು ಆಗುವದು. ಮತ್ತು ಗೋರೋಜನ ಕರಿ ಆಕಳತುಪ್ಪ ತೊಂಡಿರಸದಲ್ಲಿ ಅರದು ತಿಲಕ ವಿಡಲು ಕಣ್ಣುಕಟ್ಟು.

# ಹಲಸಿನ ಅಂಜನ ಕ್ರಮವು

ಹಲಸಿನ ಗಿಡದ ಮೂಡಲು ಹರಿದ ಬೇರು ತಂದು ಕಣ್ಣು ಬಿದ ಮಣ್ಣಿನ ಹಂಚಿನಲ್ಲಿ ರಸವನ್ನು ಹಿಂಡಿ ಕರೇ ಹತ್ತಿಯ ಬತ್ತಿಯ ಮಾಡಿ ಆ ರಸದಿಂದ ಮೂರು ಭಾವನೆಯು ಕೊಟ್ಟು ವಣಗಿಸಿ ಎಳ್ಳಯಂಣಿಯಲ್ಲಿ ಹಾಕಿ ಮುಸಲರ ಗೋರಿಯ ಮೇಲೆ ಕಾಡಿಗೆಯು ಹಿಡಿದು ಅದಕ್ಕೆ ಕರೇಕೋಳಿ ಚೂರಿ ಹಾಕಿ ಅದರ ರಕ್ತವನ್ನು ಆರ್ಪಿತವ ಮಾಡಿ ಬಳಿಕ ಆ ಕಾಡಿಗೆ ಯನ್ನು ಕಣ್ಣಿಗೆ ಹಚ್ಚಿದರೆ ಮನೆಯೊಳಗಿನ ಗ್ರಹಗಳೆಲ್ಲವೂ ಹೇಳಲಿಕ್ಕೆ ಬರುತ್ತವೆ ಇಲ್ಲವೆ ವೈದಿಕನು ಹಚ್ಚಿಕೊಂಡರೆ ತಾನೇ ಹೇಳುವನು.

# ಸರ್ವಾಂಜನ ಕ್ರಮವು

ಬಿಳೇ ಕೊಗ್ಗಿಯ ಬೇರನ್ನು ಮಧುಕರ್ಪುರದಿಂದ ತೇದು ಕಣ್ಣಿಗೆ ಹಚ್ಚಲು ಸರ್ವಾಂಜನವು. ಮತ್ತು ಕರೇ ಕಾಕಿಯಬೇರು ಅದರ ಬೀಜ ಕರಿ ಮದ್ದಗುಣಿಕೆಯ ಬೇರು ಇವನ್ನು ಅರದು ಕರೇಹತ್ತಿಯ ಬತ್ತಿಯಲ್ಲಿ ಹುದಗಿಸಿ ಹೊಸೆದು ಎಳ್ಳಯಂಣೆಯಿಂದ ಕಾಡಿಗೆ ಹಿಡಿದು ಕಣ್ಣಿಗೆ ಹಚ್ಚಲು ಸರ್ವಾಂಜನವು. ಬಿಳೇ ದಾಸಾಳದಬೇರು, ಬಿಳೇ ನೆಗ್ಗಲಿಯಬೇರು, ಮಧು ಕರ್ಪುರದಲ್ಲಿ ತೇದು ಕಣ್ಣಿಗೆ ಹಚ್ಚಲು ಸರ್ವಾಂಜನವು.

# ಬಾಲಾಂಜನ ಕ್ರಮವು

ಶಿಂದ್ರಿಗಿಬೀಜ, ಉಪ್ಪಿಯಬೇರು, ಮಧುಕರ್ಪುರದಿಂದ ತೇದು ಕಣ್ಣಿಗೆ ಹಚ್ಚಲು ಬಾಲಾಂಜನವು.

# ಭೂತಂಜನ ಕ್ರಮವು

ಕಜವಾರದ ಬೀಜದ ಪುಡಿಯಲ್ಲಿ ಎಳ್ಳೆಯಣ್ಣೆ ಹಾಕಿ ಕರೇ ಹತ್ತಿಯ ಬತ್ತಿ ಮಾಡಿ ಇದರಲ್ಲಿ ಆ ಪುಡಿ ಹುದಗಿಸಿ ದೀವಿಗೆ ಹಚ್ಚಿ ಕಾಡಿಗೆ ಹಿಡಿದು ಕಣ್ಣಿಗೆ ಹಚ್ಚಲು ಭೂತಾಂಜನವು

# ಬಟ್ಟಂಜನ ಕ್ರಮವು

ಕರ್ಪುರ, ತೊಂಡಿಯಬೇರು, ಸಿದ್ಧಿದಿನದಲ್ಲಿ ತಂದು ತೇದು ಮೂರು ಕಣ್ಣಿನ ಹಂಚಿಗೆ ಹಚ್ಚಿ ಕರೇಹತ್ತಿಯ ಬತ್ತಿಯ ಮಾಡಿಟ್ಟು ಯಳ್ಳೆಯಣ್ಣೆ ಗಾಣ ತಿರುವುವಾಗ ತಂದು ಹಾಕಿ ಮೂರು ಹಾದಿಯ ಕಲ್ಲು ತಂದು ದೇವತೆಯ ಗುಡಿಯಲ್ಲಿ ವಲಿಯ ಹೂಡಿ ಆ ಹಂಚು ಇಟ್ಟು ದೀವಿಗೆ ಹಚ್ಚಿ ಕಾಡಿಗೆ ಹಿಡಿದು ಕಣ್ಣಿಗೆ ವ ಬೆರಳಿಗೆ ಹಚ್ಚುವದು ಕಾಯಿ, ಹಣ್ಣು, ಧೂಪದಿಂದ ಪೂಜೆಯ ಮಾಡಿ ಹಚ್ಚುವದು ಶಿದ್ಧಿಯಾಗುವದು.

# ನಿಧಿನಿಕ್ಷೇಪ ಕಾಣುವ ಅಂಜನ ಕ್ರಮವು

ಬಿಳೀ ತೊಪ್ಪಲಬೇರು, ಕರೇಮದ್ದಗುಣಕಿಯಬೇರು, ಅದರ ತೊಪ್ಪಲ ಅಂಕಲಿಬೇರು, ಅದರ ತೊಪ್ಪಲ, ವಿಷ್ಣುಕಾಂತಿಯ ಬೇರು, ಅದರತೊಪ್ಪಲ ಎತ್ತಿನ ನಾಲಿಗೆಯ ಬೇರು, ಅದರ ತೊಪ್ಪಲ, ಕರೇ ಹತ್ತಿಯಬೇರು ಅದರ ತೊಪ್ಪಲ ಇವುಗಳ ರಸವ ತೆಗೆದು ಮೂರು ಕಂಣಿನ ಹಂಚಿಗೆ ಮೂರು ಬಾರೆ ಭಾವನೆ ಕೊಟ್ಟು ಕರೇಹತ್ತಿಯ ಬತ್ತಿ ಮಾಡಿ ಎಳ್ಳೆಣ್ಣೆ ಹಾಕಿ ದೀಪ ಹಚ್ಚಿ ಈಶ್ವರನ ಗುಡಿಯಲ್ಲಿ ಕಾಡಿಗೆ ಹಿಡಿಯಬೇಕು. ಅದಕ್ಕೆ ಕಾಯಿ, ಹಣ್ಣು, ಕರ್ಪುರ, ಧೂಪ ದೀಪದಿಂದ ಪೂಜೆ ಮಾಡಿ ಬಳಿಕ ಆ ಅಂಜನವ ತೆಗೆದುಕೊಂಡು ಕಾಲು ಮುಂದಾಗಿ ಹುಟ್ಟಿದವನಿಗೆ ಅಥವಾ ದೇವಗಣದವರಿಗೆ ಕಂಣಿಗೆ ಹಚ್ಚಲು ನಿಧಿನಿಕ್ಷೇಪವೆಲ್ಲವೂ ಕಾಣಿಸುವದು.

# ವಿಷ್ಣು ಕ್ರಾಂತಿ ಅಂಜನ ಕ್ರಮವು

ವಿಷ್ಣು ಕ್ರಾಂತಿ ಸಹದೇವಿ ಎತ್ತಿನ ನಾಲಿಗೆ ಬಿಳೀ ಗೋಕರ್ಣ ಕರೇ ಉಕ್ಕಿ ಈ ಗಿಡಗಳು ಇದ್ದ ಠಾವಿಗೆ ಮೂರು ಕಣ್ಣಿನ ಹಂಚು ತಗೊಂಡು

ಹೋಗಿ ಆ ಗಿಡಗಳ ಭಾವನೆ ಕೊಟ್ಟು ಈಶ್ವರನ ಗುಡಿಯಲ್ಲಿ ಕರೇ ಹತ್ತಿಯು ಬತ್ತಿ ಕರೇ ಆಕಳ ತುಪ್ಪದಿಂದ ಆ ಹಂಚಿಗೆ ಕಾಡಿಗೆ ಹಿಡಿದು ಪಂಚಖಾಯುಸ ಕಾಯಿ ಕರ್ಪುರದಿಂದ ಪೂಜಾ ಮಾಡಿ ಕಾಲು ಮುಂದಾಗಿ ಹುಟ್ಟಿದವರಿಗೆ ಅಥವಾ ದೇವಗಣದವರಿಗೆ ಕಣ್ಣಿಗೆ ಹಚ್ಚುವದು. ಇದಕ್ಕೆ ಮಂತ್ರವು ಯಾವದಿಕ್ಕಿನಲ್ಲಿ ನೋಡು ವದು ಆ ದಿಕ್ಕಿಗೆ ಮಂತ್ರಿಸುವದು. ಕೃತ್ತಿಕಾ ಮಘಾ ನಕ್ಷತ್ರದಲ್ಲಿ ಭದ್ರವರ್ಣ ಮಹಾಂಕಾಳಿ ಕಾಳಿಯಾ ಶಾದರುಕಷ್ಟ ಅಂಜನವ ಸಿದ್ಧಿಗೆ ನಡಿಸುವೆ ನಿಧಾನಕ ನೋಡುವೆ ಅಷ್ಟ ನಡಿಸುವೆ ನಡಸ ದಿದ್ದರೆ ನಿನಗೆ ನನ್ನಾಣೆ ಗುರುಪಾದದಾಣೆ ಓಂ ಜಂಬಾಳು ಗುರು ಪ್ರಸಾದ ಹೂಂಪಟ್ ಸ್ವಹಾ । ಎಂದು ೨೧ ಬಾರೆ ಮಂತ್ರಿಸಬೇಕು.

## ಬಿಳೇ ಕರ್ಣಿಕೆಯು ಅಂಜನಕ್ರಮವು

ಶುಭಮುಹೂರ್ತದಲ್ಲಿ ಬಿಳೇ ಕರ್ಣಿಕೆಯು ತೊಪ್ಪಲವ ತಂದು ರಸವ ತೆಗೆದು ಮೂರುಕಣ್ಣಿನ ಹಂಚಿಗೆ ಹಚ್ಚಿ ಕರೇ ಆಕಳ ತುಪ್ಪ ದಲ್ಲಿ ಕರೇಹತ್ತಿಯು ಬತ್ತಿಯುನಿಟ್ಟು ಶುಭಮುಹೂರ್ತದಲ್ಲಿ ಕಾಡಿಗೆ ಹಿಡಿದು ಪೂಜಾ ಮಾಡಿ ಹಸುಮಕ್ಕಳ ಕೈಗೆ ಹಚ್ಚಿ ನೋಡಿದರೆ ಇಟ್ಟಂಥಾದ್ದನ್ನು ಹೇಳುವದು.

## ಬಿಳೇ ಈಶ್ವರಿ ಅಂಜನಕ್ರಮವು

ಬಿಳೇ ಈಶ್ವರಿಬೇರು ವಿಷ್ಣುಕಾಂತಿ ಸಮೂಲವ ತಂದು ಕುಂ ಬಾರ ಆವಿಗೆಯಲ್ಲಿ ಮೂರು ಕಣ್ಣು ಮೇಲಾಗಿ ಬಿದ್ದಿರುವ ಹಂಚು ತಂದು ಆ ಹಂಚಿಗೆ ೭ ಸಾರೆ ಭಾವನೆಯು ಕೊಟ್ಟು ಸೂರ್ಯಪುಟ ದಿಂದ ವಣಗಿಸಿ ಅಚ್ಚೇರು ಕರೇಆಕಳ ತುಪ್ಪದಲ್ಲಿ ಕರೇ ಹತ್ತಿಯು ಬತ್ತಿಯುನಿಟ್ಟು ನೆಲವ ಸಾರಿಸಿ ಸಿದ್ಧಿ ದಿನದಲ್ಲಿ ಕಾಡಿಗೆ ಹಿಡಿದು ನೈವೇದ್ಯ ಕಾಯಿ ಕರ್ಪುರ ಧೂಪ ದೀಪ ತಾಂಬೂಲ ದಕ್ಷಿಣೆಯಿಂದ ಪೂಜಾ ಮಾಡಿ ಆ ಕಾಡಿಗೆ ಕಣ್ಣಿಗೆ ಹಚ್ಚಿ ನೋಡುವದು.

# ತಂತ್ರಗಳು

## ಆನೆಯ ತಂತ್ರವು

ಆನೆಯ ದಂತವನ್ನು ತಂದು ಅಂಗುಷ್ಟದ ಒಂದು ಗಣಿಕೆಯ ಪ್ರಮಾಣದಲ್ಲಿ ಫಾಲ್ಗುಣಮಾಸ ಹಸ್ತಾ ನಕ್ಷತ್ರದಲ್ಲಿ ಅರುಣೋದಯದಲ್ಲಿ ಅಂಕುಶ ಅಭಯಕರ ಹಸ್ತದ ವಿನಾಯಕ ಮೂರ್ತಿಯ ಮಾಡಿ ಚಂದ್ರದಿಂದ ಸರ್ವಾಂಗ ಲೇಪನ ಮಾಡಿ ಧೂಪ, ದೀಪದಿಂದ ಸಮಾರಾಧನೆಯ ಮಾಡಿ ಮತ್ತು ಪ್ರಾಣಪ್ರತಿಷ್ಠೆಯ ಮಾಡಿ ಘಘನಪತಿಯಾಯನಮಃ ಎಂಬ ಮಂತ್ರದಿಂದ ನೆನೆದು ಪೂಜಿಸಲು ಆ ನಾಮುಕನು ಆ ಸುಖವನ್ನು ಹೇಳುತ್ತ ಬರುವನು.

## ಮೊಸಳೆಯ ತಂತ್ರವು

ಮೊಸಳೆಯ ಪಿತ್ತವನ್ನು ಸಾಧಕನಾದಾತನು ತನ್ನ ಕಣ್ಣಿಗೆ ಹಚ್ಚಿಕೊಳ್ಳಲು ಉದಕದಲ್ಲಿರುವ ಸರ್ವವಸ್ತು ಕಾಣಿಸುವವು.

## ಬಿಳೇ ಚಸಕನ ತಂತ್ರವು

ಹಂಗನದ ಹಕ್ಕಿಯೆಂತಲೂ ಶಕುನದ ಹಕ್ಕಿ ಅಥವಾ ಹಾಲು ಹಕ್ಕಿಯೆಂತಲೂ ಗುರುಬಾಲ ಪ್ರಭೋಧಿಕೆಯಲ್ಲಿ ಲೇಖವದೆ ಬಿಳೇ ಚಸಕನ ಪಿತ್ತವನ್ನು ತಂದು ಅದರ ಅಸ್ತಿಯ ಕೂಡಿಸಿ ಕಲಕ ಮಾಡಿ ತಿಲಕವಿಡಲು ದಿನಾ ರಾತ್ರಿ ಅದೃಷ್ಯ ಕಾರಣವು.

ಅದರ ಅಸ್ತಿಯನ್ನು ನೆಲದೊಳಗಿರಿಸಿ ೧ ತಿಂಗಳ ಮೇಲೆ ತೆಗೆದು ಮಧುವಿನಲ್ಲಿ ತೈದು ಕಣ್ಣಿಗೆ ಹಚ್ಚಿಕೊಳ್ಳಲು ಪಾತಾಳದ ವೃಷ್ಟಿಯ ನೆಲವನ್ನು ಕಾಣಬಹುದು. ಇದು ಸತ್ಯವು.

ಬಿಳೇ ಚಸಕನ (ಚಾಷ) ಎಲುವಂ ತಂದು ಹೆಣ ಸುಟ್ಟ ಕೆಂಡ ವನ್ನು ಅರೆದು ಆ ಅಸ್ಥಿಯು ಸಹ ಮುಟ್ಟಿಸಿದಾಕ್ಷಣಕ್ಕೆ ಸಕಲ ಬೀಗ ಗಳು ಕಳಚಿ ಬೀಳುವವು.

## ರಾಜಹಂಸನ ತಂತ್ರವು

ರಾಜಹಂಸನ ಎಲುಬನ್ನೂ ಪಿತ್ತವನ್ನೂ ಬೆಲವಂತರ ರಸ ದಿಂದ ಮರ್ದಿಸಿ ಕಣ್ಣಿಗೆ ಹಚ್ಚಲು ಸರ್ವಾಂಜನವಹುದು.

## ಕರೇ ಬೆಕ್ಕಿನ ತಂತ್ರವು

ಕರೇ ಬೆಕ್ಕಿನಲ್ಲಿ ಅದೃಶ್ಯ ಎಲಬು ಇರುತ್ತದೆ. ಅದರ ಪರೀಕ್ಷೆ ಯನ್ನು ಹೇಳುವೆನು. ಅದೇನಂದರೆ— ಆ ಬೆಕ್ಕನ್ನು ತಂದು ಹೆಡಿ ಗೆಯು ಮುಚ್ಚಿ ತಾನು ಅದರ ಮೇಲೆ ಕುಳಿತು ಕನ್ನಡಿಯು ನೋಡ ಲಾಗಿ ತನ್ನನ್ನು ಕಾಣದೆ ಹೋಗುವನು ಇದೇ ಪರೀಕ್ಷೆಯು.

ಆ ಬೆಕ್ಕನ್ನು ತಂದು ಹಳ್ಳದೊಳಗೆ ಹೂಳಿ ಅದು ಕೊಳೆತ ನಂತರ ಆ ಎಲುಬುಗಳನ್ನು ತೈದು ಗಂಧವನ್ನು ತಿಲಕವಿಟ್ಟು ಕನ್ನಡಿ ಯೊಳಗೆ ನೋಡಿಕೊಳ್ಳಲು ತನ್ನ ರೂಪವು ಕಾಣಬಾರದು. ಹೀಗೆ ಆ ಎಲಬುಗಳೆಲ್ಲವನ್ನು ತೈದು ತೈದು ತಿಲಕವಿಟ್ಟು ಪರೀಕ್ಷಿಸಿ ನೋಡಿ ಯಾವ ಎಲುಬಿನ ಗಂಧದಿಂದ ಪ್ರತ್ಯಕ್ಷ ಪರೀಕ್ಷೆ ಖರೇಯಾಗುವದೊ ಆ ಎಲುಬಿನ ಗಂಧದ ತಿಲಕವನ್ನಿಟ್ಟು ಕನ್ನಡಿಯಲ್ಲಿ ತನ್ನ ರೂಪವನ್ನು ಕಾಣದೇ ಹೋದರೆ ಅದೆ ಅದೃಶ್ಯಕ್ಕೆ ಕಾರಣವು.

## ನೀರೊಳಗಿನ ಶೀರನಾಯಿಯು ತಂತ್ರ

ಶೀರನಾಯಿಯು ಕಂಣು ತಂದು ಮತ್ತು ಅದರ ಪಿತ್ತ ಸಹ ವಾಗಿ ಪಚ್ಚಕರ್ಪುರದಲ್ಲಿ ಕೊಳಿ ಇಟ್ಟು ಅರೆದು ಕಂಣಿಗೆ ಹಚ್ಚಿ

ಕೊಳ್ಳಲು ನೀರೊಳಗಿನ ನಿಧಾನಂಗಳು ಕಾಣಿಸುವವು ಇದು ಸತ್ಯವು.

## ಗುಬ್ಬಿಯು ತಂತ್ರ

ಗುಬ್ಬಿಯು ತಲೆಯೊಳು ವೈರಿಯು ಉಂಗರಗೂದಲವನಿಟ್ಟು ಹೊಲಿದು ನೀರೊಳಗೆ ಇಟ್ಟುಕೊಂಡಿರಲು ಶತೃವಿನ ಸಂಗ ಸಂಕೋಚವಾಗುವದು. ಅದರ ಮಾಂಸವನ್ನು ಎಲುಬನ್ನು ಬೇರೆ ಬೇರೆ ಮರ್ದಿಸಿ ಎಲುಬಿನ ಚೂರ್ಣವನ್ನು ಸುಣ್ಣದಲ್ಲಿ ಇಕ್ಕುವದು. ಮಾಂಸವನ್ನು ಅಟ್ಟು ಇಕ್ಕುವದು ಮರಣಾಂತಕವಶ್ಯವು. ಅದರ ಮಾಂಸವನ್ನು ಆತ್ಮಬೀಜದಿಂದ ಮರ್ದಿಸಿ ಅಟ್ಟು ಇಕ್ಕಲು ಅವಳು ಕಾಮಜ್ವರ ತಾಪದಿಂದ ತಾನೇ ಇದ್ದಲ್ಲಿಗೆ ಬರುವಳು.

ಹೆಣ್ಣುಗುಬ್ಬಿಯು ಎಡಭಾಗ ಆತ್ಮಜಲದಿಂದ ಮರ್ದಿಸಿ ಮೊದಲಿನ ಹಾಗೆ ಇಕ್ಕಲು ಮರಣಾಂತಕವಶ್ಯವು.

ಗಂಡುಗುಬ್ಬಿಯು ಬಲದ ಭಾಗವನ್ನು ಆತ್ಮಜಲದಿಂದ ಎರಡು ಸಾರೆ ಮರ್ದಿಸಿ ಇದನ್ನು ಅನ್ನಪಾಕದಲ್ಲಿ ಇಕ್ಕಲು ಮರಣಾಂತಕವಶ್ಯವು.

## ಕುದುರೆಯು ತಂತ್ರ

ಆದಿತ್ಯವಾರ ಅಶ್ವಿನಿ ನಕ್ಷತ್ರದಲ್ಲಿ ಕುದುರೆಯು ಅಸ್ಥಿಯನ್ನು ಏಳು ಅಂಗುಲ ಪ್ರಮಾಣಿನಲ್ಲಿ ಸಲಾಕಿಯನ್ನು ಮಾಡಿ ಹೆಣ ಸುಟ್ಟ ಕಿಚ್ಚಿನಲ್ಲಿ ಉನ್ಮತ್ತದ ಕಟ್ಟಿಗೆಯು ಸುಟ್ಟು ಅದರ ಬೂದಿಯನ್ನು ಸಲಾಕಿಗೆ ತೊಡೆದು ಶತೃಗಳ ಮನೆಯಲ್ಲಿ ಹೂಳಲು ಸ್ಥಾನಭ್ರಷ್ಟನಾಗಿ ಹೋಗುವನು.

# ಮುಂಬುಲಿಗನ ಹಕ್ಕಿಯ ತಂತ್ರ

ಮುಂಬುಲಿಗನ ಹಕ್ಕಿಯ ಕಂಣು ತಂದು ಮರ್ದಿಸಿ ಕಂಣಿಗೆ ಹಚ್ಚಿಕೊಳ್ಳಲು ಅದೃಶ್ಯಕಾರಣವು.

ಅದರ ಅಸ್ತಿಯನ್ನು ಮಣಿಯ ಮಾಡಿ ತಾಮ್ರದಲ್ಲಾಗಲಿ ಚಿನ್ನದಲ್ಲಾಗಲಿ ಹುದಿಗಿಸಿ ಬಲದಲ್ಲಿ ಕಟ್ಟಿಕೊಳ್ಳಲು ಹೋಹರಣಾಗ್ರದಲ್ಲಿ ಅತಿ ಜಯವಕ್ಕು. ಸರ್ಪ ಮುಟ್ಟಲರಿಯದು ಗ್ರಹಗಳು ಸೋಂಕಲರಿಯವು. ಆ ಮಣಿ ಇದ್ದರೆ ಸಮಸ್ತ ಸಿದ್ಧಿ ಆಗುವವು.

# ಮಲದ ತಂತ್ರ

ಮಲದ ಪಿತ್ತದೊಳಗೆ ಮೆಣಸು ನೆನೆಯಿಕ್ಕಿ ಕತ್ತೆಯ ಮೂತ್ರದಲ್ಲಿ ಮರ್ದಿಸಿ ನಾಸಿಯಗೆಯ್ಯಲು ಸರ್ವಗ್ರಹನಾಶವು ಅವರ ಮಾಂಸವನ್ನು ಬಾಲಕರಿಗೆ ಇಕ್ಕಲು ಸರ್ವರೋಗ ಪರಿಹಾರವು.

# ಕರೇನಾಯಿಯ ತಂತ್ರ

ಕರೇ ನಾಯಿಯ ಬಲದ ಎಲಬಿನ ಮೇಲೆ ಬಾರದ ಹೆಂಣಿನ ಹೆಸರು ಬರೆದು ಹೆಣ ಸುಡುವಾಗ ಆ ಬೆಂಕಿಗೆ ಹಿಡಿದು ಕಾಸಲು ಬೆನ್ನು ಹತ್ತಿ ಬರುವಳು.

ಅದರ ಪಿತ್ತದೊಳಗೆ ಪಾದರಸವನ್ನು ಇಕ್ಕಿ ನೆರಳಲ್ಲಿ ಒಣಗಿಸಿ ಚೂರ್ಣವ ಮಾಡಿ ಸುಂಣದಲ್ಲಿ ಕಲಸಿ ದಾವ ಹೆಂಣಿಗಾದರೂ ಇಕ್ಕಲು ಅವಳು ತಾನಿದ್ದಲ್ಲಿಗೆ ಬರುವಳು. ಅದರ ಪಾದದ ಎಲುಬನ್ನು ಹೆಣನ ಸುಟ್ಟ ಕೊಳ್ಳಿಯನ್ನು ಕೂಡಿಸಿ ವೈರಿಯ ಮನೆಯಲ್ಲಿ ಹೂಳಲು ಉಚಾಟಣವು. ಅದರ ಹಾಲಲ್ಲಿ ಅದರ ಎಲಬಂ ಮರ್ದಿಸಿ ತನ್ನ ಇಂದ್ರಿಯಲ್ಲಿ ಕಲಸಿ ಸುಂಣದಲ್ಲಿ ಇಕ್ಕಲು ಅತ್ಯಂತ ಮೋಹಿಸುವಳು.

# ಕರೇ ಬೆಕ್ಕಿನ ತಂತ್ರ

ಕರೇ ಬೆಕ್ಕಿನ ಕಾಲನ್ನು ತ್ರಿಲೋಹದಿಂದ ಮರ್ದಿಸಿ ಬಾಯಲ್ಲಿ ಇರಿಸಲು ಅದೃಶ್ಯ ಕಾರಣವು

## ಪುನಗು ಬೆಕ್ಕಿನ ತಂತ್ರ

ಸುಗಂಧ ಬೆಕ್ಕಿನ ಎಲಬನ್ನು ತ್ರಿಪಾಳಿ ರಸದಿಂದ ಮರ್ದಿಸಿ ಪೂಸಲು ಹೆಗ್ಗಣ ಇಲಿ ಮೊದಲಾದ ಸಮಸ್ತ ವಿಷಗಳು ಹೋಗುವವು. ಅದರ ಅಸ್ತಿಯನ್ನು ತನ್ನ ಇಂದ್ರಿಯಲ್ಲಿ ಮರ್ದಿಸಿ ಅಡಿಕೆಯ ಚೂರಿಗೆ ಲೇಪಿಸಿ ಪಟಮಳದಲ್ಲಿ ಸ್ತ್ರೀಯರಿಗೆ ಕೊಡಲು ಆಶ್ಚರ್ಯವಪ್ಪ ಮೋಹವಾಗುವದು.

## ಇಲಿಯ ತಂತ್ರ

ಇಲಿಯ ಅಸ್ತಿಯನ್ನು ತಂದು ಕೃತ್ತಿಕಾ ನಕ್ಷತ್ರದಲ್ಲಿ ವೈರಿಯ ಮನೆಯಲ್ಲಿ ಇರಿಸಲು ಅತಿ ಪ್ರವಾಹದಿಂದ ನಾಶವಾಗುವರು.

## ಹುಲಿಯ ತಂತ್ರ

ಹುಲಿಯ ಎದೆಯ ಎಲಬನ್ನು ತಂದು ತನ್ನ ಮೂತ್ರದಲ್ಲಿ ತೈದು ಸುಂಣದಲ್ಲಿ ಇಕ್ಕಲು ಮರಣಾಂತಕವಶ್ಯವು.

## ಕರಡಿಯ ತಂತ್ರ

ಹೆಂಣು ಕರಡಿಯಾದರೆ ಎಡದ ಅಸ್ತಿ, ಗಂಡು ಕರಡಿಯಾದರೆ ಬಲದ ಅಸ್ತಿ ಚೂರ್ಣವನ್ನು ಮಾಡಿ ತನ್ನ ಮೂತ್ರದಲ್ಲಿ ಮರ್ದಿಸಿ ಅಡಿಕೆಗೆ ಹಚ್ಚಿ ವಣಗಿಸಿ ಸ್ತ್ರೀಗೆ ಇಕ್ಕಲು ಮರಣಾಂತಕವಶ್ಯವು. ಕರಡಿಯ ಲಿಂಗವನ್ನು ತನ್ನ ಇಂದ್ರಿಯಲ್ಲಿ ಮರ್ದಿಸಿ ಸ್ತ್ರೀಯರಿಗೆ ಇಕ್ಕಲು ಮರಣಾಂತಿಕವಶ್ಯವು.

## ನರಿಯ ತಂತ್ರ

ನರಿಯ ಅಸ್ತಿಯನ್ನು ಆದಿತ್ಯವಾರದಲ್ಲಿ ತಂದು ಕೀಲವ ಮಾಡಿ ವೈರಿಯ ಮನೆಯಲ್ಲಿ ಇರಿಸಲು ಸ್ಥಾನಭ್ರಷ್ಟನಾಗುವನು ಇದು ಸತ್ಯವು.

## ಓತಿಗಳ ತಂತ್ರ

ಗಂಡು ಹೆಣ್ಣು ಓತಿಗಳು ಕೂಡಿದ್ದು ನೋಡಿ ಎರಡನ್ನೂ ಹಿಡಿದು

ತಂದು ಅಸ್ಥಿಯನ್ನು ಬೇರೆ ಬೇರೆ ಚೂರ್ಣ ಮಾಡಿ ಹೆಂಣಿಂದು ಹೆಣ್ಣಿಗೆ ಕೊಡಲು ವಶ್ಯ ಗಂಡಿಂದು ಗಂಡಿಗೆ ಕೊಡಲು ವಶ್ಯವು.

## ಕಾಗೆಯ ತಂತ್ರ

ಕಾಗೆಯ ಎರಡು ಗೂಡು ತಂದು ಸುಡುಗಾಡದ ಬೆಂಕಿಯಲ್ಲಿ ಸುಟ್ಟು ಆ ಬೂದಿಯನ್ನು ಬೇಕಾದವರ ತಲೆಯ ಮೇಲೆ ಇಕ್ಕಲು ಮನೆಯ ಬಿಟ್ಟು ಹೋಗುವರು.

## ತೊಗಲಬಾವಲಿ ತಂತ್ರ

ತೊಗಲ ಬಾವಲಿಯ ಕಂಣು ಮತ್ತು ಪಿತ್ತವನ್ನು ಪಾಕಾಳ ಮಧುವಿನಿಂದ ಮರ್ದಿಸಿ ಕಂಣಿಗೆ ಹಚ್ಚಲು ಭೂಲೋಕದೊಳಗಿನ ನಿಧಾನ ಕಾಣುವದು ನಿಶ್ಚಯವು ತಪ್ಪಲರಿಯದು.

## ಹದ್ದಿನ ತಂತ್ರ

ಹದ್ದಿನ ಎಲುಬನ್ನು ಸುಡಗಾಡದ ಬೂದಿಯನ್ನು ಕೂಡಿಸಿ ವೈರಿಯ ಮನೆಯಲ್ಲಿ ಹೂಳಲು ೧ ತಿಂಗಳಿಗೆ ಉಚಾಟಣವು.

## ಅಶ್ವದ ತಂತ್ರ

ಮುದಿ ತೇಜಿಯ ಕೊಳಗವನ್ನು ತಂದು ರುದ್ರಭೂಮಿಯ ಅರಬಿಯ ತಂದು ಕೊಳಗದೊಳಗೆ ನಾಮವಂ ಬರೆದು ಆ ಅರಬಿಯಿಂದ ಮುಚ್ಚಿ ವೈರಿಯ ಮನೆಯಲ್ಲಿ ಇರಿಸಲು ಉಚಾಟಣವು.

## ನವಲಿನ ತಂತ್ರ

ನವಲಿನ ತಲೆಯ ತಂದು ಅದರ ಎಲುಬನ್ನು ತೆಗೆದು ಅದರ ಮೇಲೆ ವೈರಿಯ ನಾಮವನ್ನು ಬರೆದು ಅವನ ಮನೆಯಲ್ಲಿ ಇರಿಸಲು ಅವನು ದೇಶ ಭ್ರಷ್ಟನಾಗಿ ಹೋಗುವನು.

## ರಣಾಗ್ರದಲ್ಲಿ ಹೊಡೆದ ತಲೆಯ ತಂತ್ರ

ರಣಾಗ್ರದಲ್ಲಿ ಹೊಡೆದ ತಲೆಯು ತಂದು ಅದರ ಹುದುಡಿನಿಂದ ತಲೆಯ ಓಡಿನಲ್ಲಿ ಕಪ್ಪು ಹಿಡಿದು ಆ ಕಪ್ಪನ್ನು ತಿಲಕವಿಟ್ಟು ತಲೆಯನ್ನು ಸುಟ್ಟ ಬೂದಿಯನ್ನು ಮೈಗೆ ಪೂಸಿಕೊಂಡು ರಣಾಗ್ರದಲ್ಲಿ ಹೋಗಲು ಆ ರಣಾಗ್ರದೊಳಗೆ ಇದ್ದವರು ಫಲಾಯನವಾಗಿ ಮುಂದು ಹೋಗುವರು.

## ನೀರೊಳಗಿನ ಶೀರನಾಯಿಯ ತಂತ್ರ

ನೀರ ನಾಯಿಯ ಎಲುಬನ್ನು ತಂದು ಅದರ ಮೇಲೆ ವೈರಿಯ ನಾಮವನ್ನು ಬರೆದು ಅವನ ಮನೆಯಲ್ಲಿ ಇರಿಸಲು ಅವನು ನೀರೊಳಗೆ ಬಿದ್ದು ಮುಳುಗಿ ಉಬ್ಬಸ ಬಿಡುತಿಹನು. ಅದರ ಎಲುಬನ್ನು ತಂದು ಸುಡುಗಾಡದಲ್ಲಿ ಸುಟ್ಟು ಬೂದಿಯು ಮಾಡಿ ತನ್ನ ವೈರಿಯ ಮೇಲೆ ತಳಿದರ ಅವನು ಯಾವಲ್ಲಿದ್ದರೂ ಉಚಾಟಣವು

## ಕತ್ತೆಯ ತಂತ್ರ

ಕತ್ತೆಯ ತೆಳಗಿನ ದವಡಿಯ: ಎಲಬನ್ನು ತಂದು ನಾಲ್ಕು ಅಂಗುಲ ಪ್ರಮಾಣದಲ್ಲಿ ಮಾಡಿ ಅದರ ಮೇಲೆ ಶತೃವಿನ ನಾಮವನ್ನು ಬರೆದು ಅದಕ್ಕೆ ಮಂತ್ರವು— ಓಂ ನಮೋ ಗಾರ್ಧಪಗುರು ಹ್ರೀಂ ಹ್ರೀಂ ಸ್ವಹಾ॥ ಎಂದು ೧೦೮ ಸಾರೆ ಮಂತ್ರಿಸಿ ಅವನ ಮನೆಯಲ್ಲಿ ಇಕ್ಕಲು ವೈರಿಗಳು ಕೆಟ್ಟು ಹೋಗುವರು.

ವಶೀಕರಣವೆಂದರೆ— ಗಂಡ-ಹೆಂಡರು ಯಾವಾಗಲೂ ಪ್ರೀತಿಯಿಂದ ಒಬ್ಬರಿಗೊಬ್ಬರು ಅನುಕೂಲವಾಗಿರುವಂತೆ ಮಾಡಿಕೊಳ್ಳುವದೇ ವಶೀಕರಣವೆನ್ನುತ್ತಾರೆ.

ವೈರಿ ನಾಶತ್ವ ಅಂದರೆ— ನಿಷ್ಕಾರಣವಾಗಿ ವಿರೋಧವನ್ನು ಮಾಡತಕ್ಕವರ ವೈರಭಾವವನ್ನು ನಾಶಮಾಡಿ ಅವರೊಡನೆ ಪ್ರೀತಿಯಿಂದ ಇರುವಂತೆ ಮಾಡಿಕೊಳ್ಳುವದಕ್ಕೆ ವೈರಿ ನಾಶತ್ವ, ಉಚ್ಚಾಟನ, ಭ್ರಷ್ಟತ್ವವೆಂದು ಅನ್ನುತ್ತಾರೆ.

---

# ಮಂತ್ರಗಳು

## ಮಂತ್ರ ಶಿದ್ಧಿಯ ಕ್ರಮ

ಮಂತ್ರಗಳನ್ನು ಶಿದ್ಧಿ ಮಾಡಿಕೊಳ್ಳಬೇಕಾದರೆ ಹಳ್ಳ-ಹೊಳೆ ಪೊಂದಲಾದ ನೀರಿನ ಪ್ರವಾಹದಲ್ಲಿ ಕುತ್ತಿಗೆಯುಮಟ ನೀರಲ್ಲಿ ನಿಂತು ಕೊಂಡು ೧೧೮ ಸಾರೆ ಜಪಿಸಬೇಕು. ಅಂದರೆ ತಾನು ಜಪಿಸಿದ ಮಂತ್ರವು ಸಿದ್ಧಿಯಾಗುತ್ತದೆ. ಆ ಸಿದ್ಧವಾದ ಮಂತ್ರವನ್ನು ಯಾವ ಕಾರ್ಯಕ್ಕಾದರೂ ಉಪಯೋಗಿಸಿಕೊಳ್ಳಬೇಕು.

## ಬನ್ನಿ ಮಹಾಂಕಾಳಿ ಮಂತ್ರ ಗ್ರಹ ನುಡಿಸುವದು

ಶ್ರೀಗುರು ಬಸವಲಿಂಗಾಯನಮ : ಓಂ ಅಹೆ ಬನ್ನಿಮಹಾಂ ಕಾಳಿ ಅಹೊನಿಃಕಳಂಕ ನಿರ್ಧೂಳಿ ಮಾನ ಜಕುಲಃ ಜಜರ್ಝುಲಿಕಿ ಪ್ರಜಾಪತಿ ಪಿನಾಕಿ ಪ್ರಿಯಾಃ ವಿಶ್ವೇಶ್ವರನಸ್ತುತಿಗೆಃ ಪಿಶಾಚಿಗಳಿಗೆ ಮಾರ್ತಂಡೆ ಹಿಂಡುಭೂತದಪಡೆಗೆಪ್ರಚಂಡೆ: ಶಿಂಹನಸೀಮೆಗೆಸಿಲ್ಕಿದ ಉದಚಿ ಆಸುರಮಾರ್ಜಲವಾ ಉರುಹಿದ ಸಂಹಲಿ ಜಗವಂಜಿನಿಸುವೆ ಶಿವನಪಡೆಗೆ ಕೃತಾರ್ಥೆಕೃಪಾನಿಧಿಂ ಕ್ರುಹಟ್ಟೆ ಕುಲದಲ್ಲಿಸದಕ್ಷೆ: ಪಿಧಿಕಾರ್ಯಾಯು ಮುಕುಂದೂಯಾಃ ಜನ್ಮಾಯಾಃ ಶ್ರೀಅಹೊ ಬನ್ನಿ ಮಹಾಂಕಾಳಿ ಅದೆನು ನಿನ್ನ ಪ್ರತಾಪಮಾ ನಿನ್ನದು ಹಿಮೆಯೊ ಸನ್ನೊಳೊ ಲುಳುಕಿತ್ತಾನೊ ಅಂದೆನುಚಿಶು ನಿನಗ ಶಿವನಾಣೆ ಹೇಳು ಹೇಳು|| ನೀಯುಂದು ಯೆಂಗಕ್ಕ ಬಂಧು ದೂಹಕರಾಗಿ ನರರ್ಗಳ ಕೀಳು ಕಾಯೆಃ ಬಿಚ್ಚಿಸಿ ಬೆದರಿಸಿ ಕುರಿಕೋಳಿ ಹಂಸಡಿ ಹಕ್ಕಿಗಳಃ ಶಿಂಬಶಾಪವನರಿಯೆ ಈಹನರಿತು ಹಿಂದಕ್ಕೆ ನಿಮ್ಮಗ ಪ್ರಳಯುಕಾಲ

ಬಂದುದು ನರಿದಿದುದನಗಿಯೆ ಈ ಹಂಗಕ್ಕೆ ನೀ ಬಾಷೆ ಹೊಕ್ಕಲ್ಲಿ ಹೊಕ್ಕು ಪಿಡಿದು ಯೆಳತಾಹೆ ಚಿತ್ರನಿಧಿಯೆ ಮಾಡಿ ಕೊಯಿಸವೆ ಬಸಿದ ಶೂಲಕ್ಕೆ ಹಾಕಿಸುವೆ ಇಂತಿಯ ಉಮ್ಮೋದರು ದೂರದಿರ ನಿನಗ ಶಿವನಾಣಿ ನಾನಾಡಿದ ಮಾತಲ್ಲಾ ನಿನ್ನ ಮಾಡಿಯು ಚೆನ್ನ ಶ್ರೀ ವೀರಭದ್ರನು ಕ್ರಿಯಂದು ಕ್ರಿಯಂಬು ಹರಿಸದು ಹೆದೆಶಾವು ಕೂತಾಡು ಮಾತಾಡೆ ಮರುಳದೆ ಸತಿದು ಆಹೊ ಬಂಧನೆ ಸಚಿ ಜಂಪಟುಸ್ವಹಾ ॥

# ಚೌಡಿ ಚಾಮುಂಡೇಶ್ವರಿ ಮಂತ್ರ

ಶ್ರೀ ಓಂ ನಮೊ ಭಗವತೆ ಚಾಮುಂಡಿ ಚವುಡೇಶ್ವರಿ ಶಕ್ತಿ ಮಾತ್ರಕ್ಷಣ ಕಾಲರುದ್ರಿ ಬೈರುವಿ ಭೂತಬೇತಾಳ ಪರಿಮರ್ದಿ ರುದ್ರ ಯುಮಿ ಮರುಳತಾಂಡೊ ತ್ರಿಭುವನ ಸಕಳವಿದ್ಯಾ ಸರಸ್ವತಿ ವಿದ್ಯಾ ಯೋಗಿ ಗಣೆಶ್ವರಿ ಮನಹರ ಬೈರುವಾನಿ ಜೆಂತ್ರಾರುಣ ಮಾರಿಮಹಾ ಮಾರಿ ಯಮದೂತರಿ ಯಕ್ಷರಾಕ್ಷಸ ಮುಸಶನಿ ಗ್ರಮುನಿ ನಾಡನಾಥ ಭೂತಃ ಯಾತಾಳಿ ಬ್ರಹ್ಮರಾಕ್ಷಸ ದೂಳಿತ ತಮ್ಮಂದೊ ಬಿಚ್ಚು ಬಿದರ ಜ್ವರತಾನಾತಶೂಲಿ ಪರಿಹಾರಂದೆನಿ ನಂಕಾಳಿ ರೂತಗ್ರಹ ಬಾಲಗ್ರಹ ಮಾಂಕಾಳಿ ರಣಗ್ರಹ ಹೆಂಣುಗ್ರಹ ಬಾಲಗ್ರಹ ಆಗ್ರಹ ಮಾಂಕಾಳಿ ಕಿಂಡಿಕಿಂಡಿ ಬಿಂಡಿಬಿಂಡಿ ಓಂ ಪಟುಸ್ವ: ॥

# ಸಮಸ್ತ ಗ್ರಹ ಉಚ್ಚಾಟನದ ಮಂತ್ರ

ಶ್ರೀ ಓಂ ನಮೊ ಭಗವತೆ ಉಟ್ಟ್ರ ಕಂಕಾಳಿ ಅಗ್ನಿ ಪರಿಚೆ ಮುಗ್ನಿ ಪರಿಚೆ ಮಹಾಪರಿಂಚೆಶರ ವೀರಭದ್ರಾಪರಿಂಚೆಚಾಮುಂಡಿಪರಿಂಚೆ ಹನುಮಂತತೊಲಿ ಲಿಂಚೆ ಪೂಪೂ ವೀರಭದ್ರಾ ನಾನೆ ಈ ಮಂತ್ರ ದಿಂದ ಸಮಸ್ತು ಗ್ರಹ ಉಚ್ಚಾಟಣ ॥

# ಹನಮಂತನ ಮಂತ್ರ

ಶ್ರೀ ನಿಕ್ಷಿತು ಸಲ್ಲಿಸಲ್ಲಿಬಲುಚಿರಾ ಲಂಕಾದಾಳಿಲವಣಸಿಂದುಃ ನಿಗಟಂಗನೆಯಾ ಪೂತ್ರ ವಾಯುಕುಮಾರ ಶ್ರೀವೀರ ಹನುಮಂತ ಬಂದಂಬಂದಂ ಕಟ್ಟು ಕಟ್ಟು ಶ್ರೀವೀರ ಹನುಮಂತ ಬಂದಂಬಂದಂ ಕಟ್ಟು ಕಟ್ಟು ಶ್ರೀ ವೀರ ಹನುಮಂತ ಬಂದಂ ಬಂದಂ ಬಡಿಬಡಿ ಶ್ರೀ ವೀರ ಹನುಮಂತ ಬಂದಂ ಬಂದಂ ನೂಕು ನೂಕು ಶ್ರೀ ವೀರಹನುಮಂತ ಬಂದಬಂದಂ ಆವೇಶಆವೇಶ ಶೀಘ್ರ ಶೀಘ್ರ ವನರಾಚ ಬಂದ ಬಂದಂ ಕುಬಿಕುಬಿ ಬಿ ಬಿ ವನರಾಚ ರಾಚ ಬಂದಬಂದ ಕುಲಿಲಿಲಿ ವನರಾಚ ರಾಚ ಬಂದಬಂದ ಆವೇಶಆವೇಶ ಶೀಘ್ರ ಶೀಘ್ರವಂ ರೇವನಣಂ ಫುಟಸ್ವಹಃ ॥

# ಸಿದ್ದೇಶ್ವರನ ನಿರೂಪ

ಶ್ರೀ ಓಂ ರೇವಣಸಿದ್ದೇಶ್ವರನ ನಿರೂಪ ॥ ಅಗ್ನಿವಿತಿ ನಿಗ್ನಿವಿತಿ ಬ್ರಂಗಾರಿ ತ್ರಿಸುರಾರಿ ಗಂದಂದುಕ್ಕೆ ಯೋಹೆ ಬ್ರಹ್ಮಾಣ ನಿಣೂರೂಪಿಣಿ ಮಹೇಶ್ವರಿ ಯಂಬ ಮಂತ್ರದಿಂ ರಾಕ್ಷಸರಂ ಕಟ್ಟುವೆ ಕಾಳರಾತ್ರಿಯುಂ ಕಟ್ಟುವೆ ಭೈರುವನಂ ಕಟ್ಟುವೆ ಯಪ್ಪತ್ತೇಳು ಮರುಳುತಾಂನ ಕುಟ್ಟು ಕಟ್ಟುವೆ ಶಾಕಿನಿಯುಂ ಕಟ್ಟುವೆ ಡಾಕಿನಿಯುಂ ಕಟ್ಟುವೆ ಪ್ರತಿ ಶಂಖಿಣಿಯುಂ ಕಟ್ಟುವೆ ಇಂತಿ ಈ ವಿಭೂತಿಯು ಈ ಮಂತ್ರದಿಂ ಮಂತ್ರಿಸಿಯಿಡಲು ರಾಜವೈಶ್ಯ ಜನವೈಶ್ಯ ಸ್ತ್ರೀ ವೈಶ್ಯ ಅನೇಕ ಸ್ತ್ರೀತಂಗಳು ದೆಶೆದೆಶೆಗೆ ಮಾಡಿ ಹೋಗದಿದ್ದರೆ ರೇವಣ ಸಿದ್ದೇಶ್ವರ ದೇವರ ಶಿದ್ಧಾಂತಕ್ಕೆ ಭಂಗ ಶ್ವಾನನಕ ಪಾಲದಲ್ಲಿ ಸುರೆಯುಪಾನವ ನೆನಿಸಿದ ಪಾತಕಕ್ಕೆ ಹೋಗುವೆ ಓಂ ಪಟುಸ್ವಹಾಃ ॥

# ಮೈಗೆ ವಿಭೂತಿ ಹಚ್ಚುವ ಮಂತ್ರ

ಶ್ರೀ ಅಂಗಾಲಿಗೆ ಅಗ್ನಿಯ ಕಾವಲು ಹೊಟ್ಟೆಗೆ ಜಟ್ಟಿಗನಕಾವಲು ಬೆನ್ನಿಗೆ ಬೇತಾಳನ ಕಾವಲು ಯಡಬ ಜಕ್ಕೆ ಈಶ್ವರನ ಕಾವಲು ಕೊರಳಿಗೆ ಕರಕಂಠನ ಕಾವಲು ಬಾಯಿಗೆ ಭೈರವನ ಕಾವಲು ಹಲ್ಲಿಗೆ ಹನುಮನ ಕಾವಲು ಮೂಗಿಗೆ ಮುನ್ನೂರುಕೋಟಿ ದೈವದ ಕಾವಲು ಅಟ್ಟಿಕೊಂಬುವನಿಗೆ ಮುಟ್ಟಿ ಛಾಯೆಂತ್ರಿಯೆಂಬ ಅಂಬಿನಕೋಲು ತಾನಿವಕೆ ವಿಭೂತಿ ಪಟ್ಟಿಪರಿಹರ ಮಜಂ ಬಾಳುಗುರು ಬಾಳು ॥ ಗುರುಪ್ರಸಾದೆ ॥

# ಆವೇಶದ ಮಂತ್ರ

ಶ್ರೀ ಓಂ ಬಾಲಗ್ರಹಂ ಬಾಷೆ ರುಷಿ ಭೂತಗ್ರಹಂ ಬಾಯಿಷಿಃ ಪ್ರೇತ ಗ್ರಹಂಬಾಹೆಯೆಹಿ ಇಂದ್ರ ಗ್ರಹಂ ಬಾಯೆಹಿ ಅಗ್ನಿಗ್ರಹಂ ಬಾಯೆಹಿ ಯಮಗ್ರಹಂ ಬಾಯೆ ಹಿ ನೈರುತ್ಯ ಗ್ರಹಂ ಬಾಯೆಹಿ ವರುಣ ಗ್ರಹಂ ಬಾಯೆಹಿ ವಾಯುವ್ಯ ಗ್ರಹಂ ಬಾಯೆಹಿ ಕುಬೇರ ಗ್ರಹಂಬಾಯೆಹಿ ಈಶಾನ್ಯ ಗ್ರಹಂ ಬಾಯೆಹಿ ಪಾತಾಳ ಗ್ರಹಂ ಬಾಯೆಹಿ ನಾಗ ಗ್ರಹಂ ಬಾಯೆಹಿ ಜನರಡೊಗ್ರಹಂಬಾಯೆಹಿ ಅಂತರಿಕ್ಷ ಗ್ರಹಂ ಬಾಯೆಹಿ ಆಕಾಶ ಗ್ರಹಂ ಬಾಯೆಹಿ ಅಂತ್ಯಮಾನ ಗ್ರಹಂ ಬಾಯೆಹಿ ಅಂತ್ಯಬ್ರಹ್ಮ ಗ್ರಹಂ ಬಾಯೆಹಿ ಬ್ರಹ್ಮರಾಕ್ಷಸ ಗ್ರಹಂ ಬಾಯೆಹಿ ಜಟಾಧರಿಗ್ರಹಂಬಂಯೆಹಿ ಮಕುಟವರ್ಧನ ಗ್ರಹಂಬಾಯೆಹಿ ಪ್ರಿತ್ರಗ್ರಹಂಬಾಯೆಹಿ ಪಿಶಾಚ ಗ್ರಹಂಬಾಯೆಹಿ ಕುಸುಮ ಗ್ರಹಂಬಾಯೆಹಿ ಅಪಸ್ಮಾರ ಗ್ರಹಂಬಾಯೆಹಿ ಸ್ವಸ್ತಿ ಗ್ರಹಂಬಾಯೆಹಿ ಸನ್ನಗ್ರಹಂಬಾಯೆಹಿ ಕಿನ್ನರಗ್ರಹಂಬಾಯೆಹಿ ಕಿನ್ಪೂರಗ್ರಹಂ ಬಾಯೆಹಿ ಪಕ್ಷಿಗ್ರಹಂ ಬಾಯೆಹಿ ಯಕ್ಷಗ್ರಹಂಬಾಯೆಹಿಸ್ವಾಹಾ॥

## ಚೇಳಿನ ಮಂತ್ರ

ಓಂ ಊರಿಗೆ ಉಕ್ರಾಣಿ ಮಾರಿಯಬಿಟ್ಟ್ವು ಮಾರಿಯಾಕಿಂದು ಪೆಟ್ಟಬುಟ್ಟ ಪೆಟ್ಟಲೋನದಾಲಿಗುಂತಿಲು ಗಂಟ್ಲಮಿನ ಮಿನು ಪಂಟ್ಲು ಪಟಪಟ ಅಂತು ಕತಪ್ಪಿತೆ ಗುಂಟಕರಯ್ಯಾ ಭಾಸ್ಕರಯ್ಯಾ ಕೆಮ್ಮರಿಂಟು ಸಾಕಲಂಟಭೇಟಿಚಿ ತೋದಿಗು ಬಾಂಥೋದು

ಬ್ರಹ್ಮನ ಮೇಲೇರಿ ವಿಷ್ಣುವಿನ ಮೇಲಿಳಿದು ಆವ ಚೇಳಾದರಾಗಲಿ ಕನ್ಯೆ ಚೇಳಾಗಲಿ, ಕರಿಚೇಳಾಗಲಿ, ಕೆಂಪುಚೇಳಾಗಲಿ ವಡವು ಚೇಳಾಗಲಿ ಯೇಳುಮಣಿ ಚೇಳಾಗಲಿ ಬೇಗ ಇಳಿ ಇಳಿಯದಿದ್ದರೆ ಗರುಡ ಮಹಾಂಕಾಳಿಯಾಣೆ ನವಕೋಟಿ ಸಿದ್ಧರಾಣೆ ಓಂ ಗುರುಪ್ರಸಾದ॥

## ಕುಂದಿನ ಮಂತ್ರ

ಊರಿಂದ ಮೂಡಲು ಯೋನಕಂಡೆ ಕೆಮ್ಮಣ್ಣ ಮರಡಿಕಂಡೆ ಕೆಮ್ಮಣ್ಣ ಮರಡಿಮೇಲೆ ಕೆಂಗಣ್ಣ ಯರಳಿ ಕಂಡೆ ಕೆಂಗಣ್ಣ ಯರಳಿಗೆ ಕೆಂಗಾರಿ ಕೋಲಿ ಕೋಲಿಲೆ ಪೊಗದೆ ಕುಂದಬಾವು ಅರ್ಧಿಯಳೆನಾಗರ ಈಕಟ್ಟು ಮೀರಿದರೆ ವೀರಹನಮಂತನ ಪಾದದಾಣೆ ಓ ಜಂಬಾಳು ಗುರುಬಾಳು ಗುರುಪ್ರಸಾದ॥

## ಹೊಟ್ಟೆಬ್ಯಾನಿ ಮಂತ್ರ

ಕಂದಲ್ಲಿಕ್ಕೆ ಕದನಮಾಡಲಿಕ್ಕೆ ಮಳಲವಗಾಡಿಯಾರ್ರಟ್ಟರೆಂದರೆ ಕೊಂತೆವ್ವೆ ಅಟ್ಟಳು ಯಾರು ಉಂಡರೆಂದರೆ ಭೀಮಣ್ಣ ಉಂಡಾ ಅರ್ಜುನ ಮಗಳನಾಗಿ ರೇವಣಸಿದ್ಧನಾ ಗುರುಪ್ರಸಾದಯೆಂದು ಮಂತ್ರಿಸುವದು.

## ಪ್ರಸೂತಿಗೆ ಮಂತ್ರ

ಓಂ ಹ್ರಿಂ ಬ್ರಹ್ಮಣಪರಸ್ವಹಾ॥ ಎಂದು ೨೮ ಬಾರಿ ಯೆಣ್ಣೆಯಮಂತ್ರಿಸಿ ಕೊಡುವದು. ಪ್ರಸೂತಿಗೆ ಮಂತ್ರವು—ವಂಚಳಾರೆ ಚಾಮುಂಡಿಸ್ವಹಾ ॥ ಎಂದು ತುಪ್ಪವನು ಮಂತ್ರಿಸಿ ಕೊಡುವದು.

# ಗಾಳಿ ಮಂತ್ರ

ಸೂವಂಗಕಿಳಂಗ ಆಯುಂಗ ಯೊಸುನಾಥ ಇಟ್ಟಂಥ ಮರುಳಾಟದ ಬುದ್ಧಿಯು ಇಡಲಿಕ್ಕಾಗಿ ಮೂವತ್ತೆಂಟು ಮಂದಿ ವೀರರು ಬಿಚ್ಚಿ ಬೀಳಲಿ ಕಂಡ್ಯಾ ಬೀಳದಿದ್ದರೆ ವೀರಹನಮಂತನಾಣೆ ಓಂ ಜೆಂಬಾಳು ಗುರುಶಿದ್ಧನ ಶ್ರೀಪಾದದಾಣೆ ಗಾಳಿಮಂತ್ರ— ಓಂ ನಮೋ ಕರಿವೀರಭದ್ರಾಯ ಉಗ್ರಮಂತ್ರ ಮೂರ್ತಿ ನಿಜಸ್ವರೂಪಾಯ ಓಂ ಅರಿಅರಿತಿ ವಿತಿವಿ ಆವೇಶ ಆವೇಶ ಆಕಂಪ ಆಕಂಪ ಶೀಘ್ರಶೀಘ್ರ ಓಂ ಫಟಸ್ವಹಾ ॥ ಯೆಂದು ೧೦೮ ಸಾರೆ ಮಂತ್ರಿಸುವದು.

# ಕಸದ ಮಂತ್ರ

ತೊಂಬಾವು ತುಂಬೀವು ತುಂಬ ಶಸ್ತ್ರಬಾವು ತೊಂಬತ್ತಾರು ಬಾವು ಕಲ್ಲಕರಗನ ಬಾವು ಹುಲ್ಲಸುತ್ತಿನಬಾವು ಇಂದ್ರದೇರಿಗಿ ಚಂದ್ರದೆರಿಗಿ ಸುಟ್ಟ ಸುಡಗಾಡದೇರಿಗಿ ಓಂ ಜಂಬಾಳು ಗುರುಪ್ರಸಾದ ಇದು ಕಸಕ್ಕೂ ಉಸಲು ಸಿಕ್ಕದ್ದಕ್ಕೂ ಅರದೆಲಿಗೂ ಬರುವದು.

# ಮಲುಡಿ ಕೊಳಗಿನ ಹುಳದ ಮಂತ್ರ

ಕೋಳಕುರುವಿನ ರೋಗ ಮುಖತತತತ ಕುರುಸ್ವಹಾ ಯೆಂದು ೧೧ ಬಾರೆ ಮಂತ್ರಿಸುವದು.

# ಮಲಿತೊಡಕಿನ ಮಂತ್ರ

ಶೀತಿ ಶ್ರೀರಾಮರು ಬೇರ ತರಲಿಕ್ಕೆ ಹೋಗಿ ಬಂದವರಾದಾರು ಬಾರದವರಾದಾರು ರಕ್ತ ಹೆಚ್ಚಿ ಮುಡದಾರ ಹೆಚ್ಚಿ ಮಲಿಗೊತ್ತಿ ಓಂ ಜಂಬಾಳು ಗುರುಪ್ರಸಾದ ಹೀಗೆಂದು ಮೂರು ಬಾರೆ ಮಂತ್ರಿಸುವದು.

# ಜ್ವರದ ಮಂತ್ರ

ಓಂ ನಮೋ ಭಗವತೆ ಭೂತಜ್ವರಂಬಿಡಾ ಕ್ಷಯುಜ್ವರಂಬಿಡಾ ಕ್ಷಯು

ಜ್ವರಂಬಿಡಾ ಶೂಲಜ್ವರಂಬಿಡಾ ನಾಗಜ್ವರಂಬಿಡಾ ಸ್ಫೋಟಜ್ವರಂಬಿಡಾ ಪೋಗು ಪೋಗು ಸ್ವಹಾ ॥

## ಬಾಯಿಕಟ್ಟಿನ ಮಂತ್ರ

ಓಂ ಮುಗಿ ರಿಸಮುಗಿ ಜಡಮುಗಿ ನಸುವಿಲ್ಲದೆ ಯನಗೆ ಮುನಿವ ಮನುಷ್ಯರ ಬಾಯಂ ಕಟ್ಟುವೆ ಯಡನುಡಿ ಮುನ್ನೂರುಹೆಗ್ಗಡಿಯ ಬಾಯಂ ಕಟ್ಟುವೆ ಕಠಿಯನುಡಿವ ಮಂತ್ರಿಯ ಬಾಯಕಟ್ಟುವೆ ಅರಸಿನ ಬಾಯಂ ಕಟ್ಟುವೆ ಕೊಂಡೆರ ಬಾಯಂ ಕಟ್ಟುವೆ ಮುನಿವನ ಬಾಯಂ ನಾನೋಡಿ ಕಟ್ಟುವೆ ಗೊಳಗೊಳಕಿ ಮುಳ್ಳನುರ್ದು ಬಾಯ ಕಟ್ಟುವೆ ಸಿಕ್ಕಿದ ಹಾಂಗೆ ಕಟ್ಟುವೆ ಯಡಬಲದಲಿದ್ದಂಥ ಪ್ರಧಾನರು ಮುಚ್ಚಿದ ಬಾಯ ತೆರೆದರೆ ಇಪ್ಪತ್ತೇಳು ಕೋಟಿ ಸಿದ್ಧರಾಣೆ ಮೂವತ್ತಮೂರು ಕೋಟಿ ದೇವರ್ಕಳಾಣೆ ಸಿದ್ಧರು ಕೊಟ್ಟ ಶಿದ್ಧ ಮಂತ್ರವು ಯನಗೆ ಶಿದ್ಧಿಯೊಗದಿವಾಲ ಗುರುಪ್ರಸಾದ ಈ ಮಂತ್ರದಿಂದ ೫ ಹರಳು ೧೦೮ ಬಾರೆ ಮಂತ್ರಿಸಿ ಅರಬಿಯ ಶರಗಿಗೆ ಕಟ್ಟಿ ಕೊಂಡು ಹೋಗಲು ಸರ್ವರ ಬಾಯಿ ಯೇಳದು.

## ಹಾವಿನ ಬಾಯಿ ತಡಿ ಮಂತ್ರ

ಕಿಚರು ಕಿಚಾರು ನಿರರುಹೇಸಿತ ಗುರುಪ್ರಸಾದ.

## ಮನಿಯೊಳಗಣ ಹಾವಿಗೆ ಮಂತ್ರ

ಆಸ್ತಿಕ ಮುನಿರಾಜಂತೆ ನಮಃ ಸ್ಮೂರಿಯಾತ್ ॥ ಯೆಂದು ೧೧ ಬಾರೆ ಅಕ್ಕಿಕಾಳಿಗೆ ಮಂತ್ರಿಸಿ ಮನೆಯ ಮೂರು ಮೂಲಿಗೆ ಅಕ್ಕಿಕಾಳು ಹಾಕಿ ಒಂದು ಮೂಲಿ ಬಿಡುವದು.

## ಹುಲಿಬಾಯಿ ಕಟ್ಟಿನ ಮಂತ್ರ

ಓಂ ನಮೋ ಭಗವತೆ ವಟತಟವೆಂಬೋದ ಕಟ್ಟುವೆ, ದೀಪದಂಥ ಕಣ್ಣ ಕಟ್ಟುವೆ, ಕೆಂಡದಂಥ ನಾಲಿಗೆಯ ಕಟ್ಟುವೆ, ಸುರಗಿಯಂಥ ಮೀಸಿಯ ಕಟ್ಟುವೆ, ಕೊಳಗದಂಥ ಬಾಯಕಟ್ಟುವೆ, ನೆಲ್ಲಕ್ಕಿಯಂಥ ಹಲ್ಲುಕಟ್ಟುವೆ

ಯಿಕ್ಕಳದಂಥ ದವಡಿಯು ಕಟ್ಟುವೆ, ನೋಲೆ ಕವಾಳವ ಕಟ್ಟುವೆ, ಡೊಳ್ಳಿ ನಂಥ ನಡವ ಕಟ್ಟುವೆ, ವನಕಿಯಂಥ ನಾಲ್ಕು ಅಂಗಾಲು ಕಟ್ಟುವೆ, ತಮ್ಮ ಟದಂಥ ನುಡಿವ ಬಾಲವ ಕಟ್ಟುವೆ ಹೆಬ್ಬುಲಿಯು ಕಟ್ಟುವೆ, ಕಿಂಬುಲಿಯು ಕಟ್ಟುವೆ, ಯೋಳ್ನೂರ ಯಪ್ಪತ್ತು ಹುಲಿಯ ಬಾಯಂ ಕಟ್ಟುವೆ, ಅಡೆಛಡೆ ಇದನು ಮಿೂರಿ ಬಂದರೆ ಈ ಭೂಮಿಯಾಣೆ ಕರ್ಣ ಹೇಳುವಂಥ ಮಹಾ ವೀರರಾಣೆ, ಕೊಲ್ಲಾಪುರದ ವೀರಹನುಮಂತನಾಣೆ, ಕೊಲ್ಲಾಪುರದ ಬನ್ನಿ ಮಹಾಂಕಾಳಿಯಾಣೆ, ಜ್ವಂಘಲಂದಕ್ಷಿ ವ್ಯೈಹಿದಕ್ಷೆ ಅತ್ಯಾಕರಾಕ್ಷ ಸಕಂಹರಂ ಹ್ರಿಂ ಹ್ರುಂ ಹ್ರೆಂ ಹ್ರೊಂ ಹ್ರೌಂ ಪಟುಸ್ವಹಾ ||

# ಉಂಣಿ ಹೋಗುವದಕ್ಕೆ ಮಂತ್ರ

ಜಯಂ ಭಗವತಿ ಚಂಡಮಾರಿ ಬೇರಂಚಂಡಾಳಿಸ್ವಹಾಃ ಈ ಮಂತ್ರ ದಿಂದ ಆವಿಗೆಯ ಮೂರು ಬಾರಿ ಪ್ರದಕ್ಷಣವ ಹಾಕಿ ಅದರೊಳಗಿನ ಬೂದಿ ಯ ತಂದು ಅದಕ್ಕೆ ಓಂ ನಮೋ ಭಗವತಿ ಚಂಡಮಾರಿಜಿಜಿಲ್ಲಿ ಚಂಡಾಳಿ ಸ್ವಹಾಃ ಈ ಮಂತ್ರದಿಂದ ೧೦೮ ಬಾರಿ ಮಂತ್ರಿಸಿ ಆ ಬೂದಿಯು ತಳಿಯಲು ಉಂಣಿ ಹೋಗುವವು.

# ಹಡೆಯುವಾಗ್ಗೆ ಬೇನೆ ಕಟ್ಟಿದ್ದಕ್ಕೆ ಮಂತ್ರ

ಕಾಸಿನ ಕಣಿಮಾಡಿ ಹಾಸಿನ ಮಣಿಮಾಡಿ ಕುಕನೂರವಾಕುಡ್ಡಿ ಮಡ್ಡಿ ಹತ್ತುವತ್ತಿಗೆ ಕೂಸುಮುಂದ ಮಾಸಹಿಂದ ಬೀಳಬೇಕಪ್ಪಾ ಓಂ ಜಂಬಾಳು ಊರಮುಂದೆ ಇರುವ ಧೀರ ಲೆಂಕಿಯ ಹನಮಾ ನನ್ನ ಇಳುವಲ್ಲಪ್ಪಾ ನಿನ್ನ ಇಳುವು ಚುಳಚಿ ಈರಪ್ಪಾ ನಿನ್ನಪಾದಕ್ಕೆ ಸಾಷ್ಟಾಂಗವಪ್ಪಾ ಚೂಚೂಚೂ||

# ಚೇಳಿನ ಮಂತ್ರ

ಕಾಲಾಭೀಮಕಂಕರವಲಾ ಸೋನೇಕಾಡಂಕರೂಪೇಕಾಪಾಣಿ ಆವ ಮೋರು ಜಾವಮೋರು ಹಣಮಂತಬೀರ ಯತಾಲಬೀರ ಇಛುಕಿಬಾಚ್ಯಾಛು ಮಂತ್ರ ಯೆಂದು ಮೂರುಬಾರೆ ಮಂತ್ರಿಸಿ ಬೂದಿಹಚ್ಚುವದು.

## ದಿನಗಳು ಹೋದದ್ದಕ್ಕೂ ಹುಲಿಕರಡಿ ಮೊದಲಾದ ಮೃಗಗಳ ಬಾಯಿಕಟ್ಟಿಗೂ ಮಂತ್ರ

ಕಾರ್ತವೀರ್ಯಾರ್ಜುನೋನಾಮ ರಾಜಾಬಾಹು ಸಹಸ್ರವಾನ್ ಶಸ್ಯಾತ್ ಸ್ಮರಣಮಾತ್ರೇಣ ಗತೇನಷ್ಟಂಚಲಭ್ಯತೆ ಯೆಂದು ಮಂತ್ರಿಸುವದು.. ಮೊದಲು ಭೂದೇವಿಗೆ ಇಂಥಾಬಂಣದ ಯತ್ತು ಆಕಳು ಇಲ್ಲವೆ ಯುವ್ಮ್ರಯೆಂದು ಹೇಳಿಕೊಂಡು ಮೂರು ಹರಳಿಗೆ ಮಂತ್ರಿಸಿ ಕೈಯೊಳಗೆ ಹಿಡಕೊಂಡು ಹೋದರೆ ಹುಲಿ ಮೊದಲಾದ ಕ್ರೂರ ಜಂತುಗಳ ಬಾಯಿ ಕಟ್ಟುವದು. ದಿನಗಳು ಬಂದನಂತರ ಭೂದೇವಿಗೆ ಹೇಳಿಕೊಂಡು ಈ ಮಂತ್ರದ ಕಟ್ಟನ್ನು ಹಿಡಿಸುಯೆಂದು ಭೂಮಿಗೆ ಆ ಮೂರು ಹರಳು ವಗೆದು ಬಾಯಿಕಟ್ಟು ಬಿಡಿಸುವದು.

## ವಿಭ್ರಮೆ ಮಂತ್ರ

ಓಂ ವಿಭ್ರಮಾ ವಿಭ್ರಮರೂಪಿಣೆ ವಿಭ್ರವಂಕುರುವೈಫ್ರೆ ಹಿಹೆ ಭಗವತಿ ಸ್ವಹಾ॥ ಈ ಮಂತ್ರದಿಂದೆ ಯರಡುಲಕ್ಷ ಜಪಿಸೆ ರುದ್ರ ಭೂಮಿಯಲ್ಲಿ ಕುಳಿತು ಗುಗ್ಗಳ ಮತ್ತು ತುಪ್ಪ ಕೂಡಿ ಇಪ್ಪತ್ತುಸಾವಿರ ಹವನವಂ ಮಾಡಿದರೆ ದೇವಿ ಶಿದ್ಧಿಯಾಗಿ ದಿನಾ ೫೦ ಮಂದಿ ಭೋಜನವ ಕೊಡುವಳು.

## ಹಂಸಿಯ ಮಂತ್ರ

ಓಂ ಹಂಸಿಹಂಸಜಾತಿ ಮನುಭವಸ್ವಹಾ ॥ ತನ್ನ ಮನಿಯೊಳು ಕುಳಿತು ವಂದುಲಕ್ಷ ಮಂತ್ರವ ಜಪಿಸಿ ಕಮಲದ ಹೂವು ತುಪ್ಪ ಕೂಡಿ ಹತ್ತುಸಾವಿರ ಹವನವಂ ಮಾಡಿದರೆ ದೇವಿ ಸಿದ್ಧಿಯಾಗಿ ಪ್ರತ್ಯಕ್ಷನಾಗಿ ಬಂದು ಅಂಜನವ ಕೊಡುವಳು. ತಾನು ಅಂಜನವ

ಮಾಡಿದರೆ ನಿಧಿಯು ಕಾಣಲಕ್ಕು. ತೆಗಿದು ಭೋಗಿಸುವದು ಅವ ವಿಘ್ನವೂ ಇಲ್ಲವು.

## ವಟವಿಕ್ಷಣಿಯ ಮಂತ್ರ

ಓಂ ಶ್ರೀಂಖ್ಲಿಂ ವಟವಿಕ್ಷಣಿ ಯಕ್ಷಕುಳ ಪ್ರಸೂವತಿ ವಟ ವಿಕ್ಷಣಿವ್ಯೆ ಫ್ರಹ್ರಿಂ ಸ್ವಹಾಃ || ಮೂರು ಹಾದಿ ಕೂಡಿದ ಬಳಿಯಲ್ಲಿ ಆಲದಮರದಡಿಯು ಕುಳಿತು ಮೂರುಲಕ್ಷ ಮಂತ್ರವ ಜಪಿಸಿದರೆ ದೇವಿ ಸಿದ್ಧಿಯಾಗಿ ರಸ ಅಂದರೆ ಕಳಂಕು ರಸಾಯನವೆಂದರೆ ದೇಹಸಿದ್ಧಿ ದಿವ್ಯಂಜನವಳಿಯು ಆಭರಣ ವಸ್ತ್ರವ ಸಂತೋಷವಾಗಿ ಈ ಮಂತ್ರಕ್ಕೆ ಅಷ್ಟಸಿದ್ಧಿಯು ಕೊಡುವಳು.

## ವಿಶಾಲ ಮಂತ್ರ

ಓಂ ವಿಶಾಲಿ ಹ್ರಾಂಹ್ರಿಂಕ್ಲಿಂ ಸ್ವಹಾಃ|| ಹುಣಸಿಯ ಮರದಡಿಯು ಕುಳಿತು ವಂದುಲಕ್ಷ ಮಂತ್ರವ ಜಪಿಸೆ ಶಾವಂತಿಗಿ ಹೂವಿನ ರಸವನ್ನು ತುಪ್ಪ ಸಹ ಕೂಡಿ ಹತ್ತುಸಾವಿರ ಹವನವ ಮಾಡಿದರೆ ಹೇಹಸಿದ್ಧಿಯಾದ ದಿವ್ಯ ರಸವನ್ನು ಕೊಡುವಳು.

## ಮೆಬಳ ಮಂತ್ರ

ಓಂ ಹ್ರುಂ ಮದನಮೆಕಳಮೆ ಖಳೆ ಸ್ವಹಾಃ || ಇಪ್ಪಿಯ ಮರದಡಿಯು ಕುಳಿತು ನಾಲ್ಕು ಲಕ್ಷ ಮಂತ್ರ ೧೪೪ ದಿನದೊಳಗೆ ಜಪಿಸ್ಸಿದರೆ ದೇವಿ ಸಂತೃಪ್ಟಿಯಾಗಿ ಅಂಜನವ ಕೊಡುವಳು. ಆ ಅಂಜನವ ಮಾಡಿದರೆ ತನಗೆ ಬೇಡಿದ್ದು ಕೊಡುವಳು.

## ಸುಲೋಚನಿಯ ಮಂತ್ರ

ಓಂ ಖ್ಲಿಂಖ್ಲಿಂ, ಸಿದ್ದಿ ದೇಹಿ ಸ್ವಹಾಃ|| ನದಿ ತಟದಲ್ಲಿ ಕುಳಿತು

ಮೂರು ಲಕ್ಷ ಮಂತ್ರ ಜಪಿಸಿದ ಮೇಲೆ ತುಪ್ಪದಿಂದ ಮೂರುಸಾವಿರ ಹವನವಂ ಮಾಡಿದರೆ ದೇವಿ ಸಿದ್ಧಿಯಾಗಿ ಹಾವಿಗೆಯ ಮೆಟ್ಟಿಕೊಂಡು ಸರ್ವತಾಗಮನ ಮಾಡಿದ ಠಾವಿಗೆ ತತ್ ಕ್ಷಣದಲ್ಲಿ ಹೋಗುವನು. ತತ್ ಕ್ಷಣದಲ್ಲಿ ಬರುವನು. ಇದೀಗ ಅಂತರಗಮನದ ಹಾವಿಗೆ.

## ಸುಶೋಭನ ಮಂತ್ರ

ಓಂ ಅಶೋಕಸರಾವಕಾರಕರೆಜತಿನೆಶೋಭನೆ ಶ್ರೀಂ ಕ್ಲಿಂ ಸ್ವಹಾಃ || ಕೆಂಪಿನ ಜಪಮಾಲಿ ಕೆಂಪಿನ ಹೊದಿಕಿಯ ತೊಟ್ಟು ೧೪ ದಿನ ಮಂತ್ರವನು ನುಡಿದರೆ ಲೋಕಕ್ಕೆ ಬಹಳ ಶೋಭನವಾಗಿರುವನು.

## ನಖಕೇಸಿ ಮಂತ್ರ

ಓಂ ಹ್ರಿಂ ನಖಕೇಶಿಕನಖವತಿ ಸ್ವಹಾ || ತನ್ನ ಮನಿಯೊಳು ವಂದೊತ್ತಿದ್ದು ೨೧ ದಿನ ಜಿತೇಂದ್ರಿಯಾಗಿ ಜಪಿಸಿದರೆ ಅರ್ಧರಾತ್ರಿಯಲ್ಲಿ ಕಾಮ ದೇವಿ ಪ್ರಸನ್ನತೆಯಾಗಿ ಇಚ್ಛೆ ಅದದ್ದು ತಂದು ಕೊಡುವಳು. ಇದರ ಹೆಸರು ಸ್ತಂಭನ ಜೇಷ್ಠಾಂಗವು.

## ಧನಪ್ರಾಪ್ತಿ ಮಂತ್ರ

ಅಶ್ವತ್ಥವೃಕ್ಷ (ಅರಳಿಗಿಡ) ಸಮಾರೂಢೋ ಜಪೆದೇಕಾಗ್ರಮಾನಸಃ || ಧನಂ ದಾತಯಕ್ಷಣೀಂಚ ಧನಂಪ್ರಾಪ್ನೋತಿಮಾನವಃ ಮಂತ್ರ|| ಓಂ ಐಂ ಕ್ಲಿಂ ಶ್ರೀಂ ಧನಂ ಕುರುಕುರುಸ್ವಹಾ|| ಅಯುತ ಜಪಶಿದ್ಧಿ ಹತ್ತುಸಾವಿರ ಜಪದಿಂದ ಸಿದ್ಧಿಯು.

## ಲಕ್ಷ್ಮೀ ಸ್ಥಿರವಾಗಿರುವದಕ್ಕೆ ಮಂತ್ರ

ವಟವೃಕ್ಷ (ಅಲದಮರ) ಸಮಾರೂಢೋ ಜಪೆದೇಕಾಗ್ರಮಾ

ನಸ: ಮಹಲಕ್ಷ್ಮಿಯಃಕ್ಷಣೇಂಚಸ್ಥಿರಾಂ ಲಕ್ಷ್ಮಿ ಪ್ರಪದ್ಯತೆ ಮಂತ್ರ॥ ಓಂ ಹ್ರಿಂ ಕ್ಲಿಂ ಮಹಾಲಕ್ಷ್ಮಿಯೈನಮ: ಆಯುತ ಜಪಸಿದ್ಧಿ.

## ಸರ್ವಕಾರ್ಯ ಸಿದ್ಧಿ ಮಂತ್ರ

ಅರ್ಕಮೂಲೋ (ಯಕ್ಕಿಗಿಡ) ಸಮಾರೂಢೋ ಜಪೆದೇಕಾಗ್ರಮಾನಸಃ ಯಕ್ಷಣೇಂಚ ಜಯಂ ನಾಮ ಸರ್ವಕಾರ್ಯಕರಂಜಯಾ ಮಂತ್ರ॥ ಓಂ ಜಯಂ ಕುರುಕುರು ಸ್ವಹಾಃ ಆಯುತ ಜಪ.

## ಅಶುಭ ನಿವಾರಣ ಮಂತ್ರ

ಧಾತ್ರಿ (ನೆಲ್ಲಿ) ಮೂಲೋ ಸಮಾರೂಢೋ ಜಪೆದೇಕಾಗ್ರಮಾನಸಃ ಅಶುಭಂಭಯ ಯಕ್ಷಿಣ್ಯೋ ಅಶುಭಂಕ್ಷಯಃಕಾರಿಣಿ॥ ಮಂತ್ರ ಓಂ ಐಂ ಕ್ಲಿಂ ನಮಃ ಆಯುತ ಜಪಸಿದ್ಧಿ:॥

## ಸರ್ವಕಾರ್ಯ ಸಿದ್ಧಿ ಮಂತ್ರ

ಕುಶಮೂಲ (ದರ್ಭೆ) ಸಮಾರೂಢೋ ಜಪೆದೇಕಾಗ್ರಮಾನಸ: ಸರ್ವ ಕಾರ್ಯಾಣಿ ಶಿದ್ಧ್ಯಂತಿ ಸಾನ್ಯಥಾಶಂಕರೋದಿತಂ. ಮಂತ್ರ॥ ಓಂ ವಾಙ್ಮಯಾನಿನಮ: ಅಯುತ ಜಪಸಿದ್ಧಿ:

## ವಾಚ್ಯಾ ಸಿದ್ದಿ ಮಂತ್ರ

ಅಪಾಮಾರ್ಗ (ಉತ್ರಾಣಿ) ಸಮಾರೂಢೋ ಜಪೆದೇಕಾಗ್ರಮಾನಸ: ವಾಚಾಸಿದ್ಧಿ ಭವೆತ್ಸತ್ಯಂ ನಾನ್ಯಥಾ ಶಂಕರೋದಿತಂ. ಮಂತ್ರ॥ ಓಂ ಶ್ರೀಂ ಭಾರತ್ಯೈನಮ: ಆಯುತ ಜಪಸಿದ್ಧಿಃ

---

# ಹಾವಿನ ತಡೆಯ ಮಂತ್ರ

ಓಂ ನಮೋ ಭಗವತಿ ಗರುಡನಾಥಾಯನಮಃ ಖಗರಾಜಾಯನಮಃ ಅಹಂ ಕ್ಷಂ ರಂ ಗಂ ಹ್ರಂ ಹ್ರಿಂ ಹ್ರಾಂ ಫಟುಸ್ವಹಾ॥ ಈ ಮಂತ್ರದಿಂದ ಮಳಲು ಮಂತ್ರಿಸಿ ಚೆಲ್ಲಲು ಹಾವು ತಡೆಯ ನಿಲ್ಲುವದು

ಓಂ ನಮೋ ಗರುಡಾಯ ಧನುಧನು ತ್ರಿಸಾಯತ್ರಿಸಾಯ ಶಟುಶಟು ಸ್ವಹಾ॥ ಈ ಮಂತ್ರದಿಂದ ತಡಿಯು ಬಿಡುವದು.

# ಪ್ರಾಣ ಪ್ರತಿಷ್ಠಾ ಮಂತ್ರ

ಓಂ ಪ್ರಾಣ ಪ್ರತಿಷ್ಠಿ ಮಂತ್ರಸ್ಯ ಬ್ರಹ್ಮವಿಷ್ಣು ರುದ್ರೋ ದೇವತಾ ರಗ್ವೇದ ಯುಜುರ್ವೇದ ಸಾಮವೇದ ಅಥರ್ವಣವೇದ ಅನುಷ್ಟುಪು ಛಂದ ಲಲಲಲ ಪ್ರಣಯೆ ಹಂ ಫಟುಸ್ವಹಾ॥

ಈ ಮಂತ್ರದಿಂದ ೧೦೮ ಸಾರೆ ಪಠಿಸಲು ಪ್ರಾಣ ಪ್ರತಿಷ್ಠಿ ಆಗುವದು.

# ಮಂತ್ರ ಪಠಣ ಕ್ರಮ

ಮಂತ್ರ ಪಠಣ ಮಾಡುವದು ಮೂರು ಪ್ರಕಾರವಾಗಿರುತ್ತದೆ. ಅವು ಯಾವವೆಂದರೆ (೧) ವಾಚಕ ಜಪವು, (೨) ಉಪಾಂಶ ಜಪವು, (೩) ಮಾನಸಿಕ ಜಪವು ಹೀಗೆ ಭೇದಾಭೇದವುಂಟು. ಇವುಗಳ ಫಲವು ಮಾತ್ರ ಬೇರೆಬೇರೆಯಾಗಿರುತ್ತವೆ. ವಾಚಕ ಜಪದಿಂದ ಅಭಿಚಾರ ಕೃತ್ಯಗಳಾಗುವವು ಉಪಾಂಶ ಜಪದಿಂದ ಶಾಂತಿ, ಕರ್ಮಾದಿಗಳಾಗುವವು. ಮಾನಸಿಕ ಜಪದಿಂದ ತನಗೆ ಮೋಕ್ಷ ದೊರೆಯುವದು. ಇದರಲ್ಲಿ ತನಗೆ ಯಾವದು ಬೇಕೋ ಆ ಜಪವನ್ನು ಪಠಿಸುವ ರೀತಿಯು. ಪರರಿಗೆ ಕೇಳುವಂತೆ ಪಠಿಸುವದೇ ವಾಚಕ ಜಪವೆನಿಸುವದು. ತನಗೆ ಕೇಳಿಸುವಂತೆ ಪಠಿಸುವದೇ ಉಪಾಂಶ ಜಪವೆನಿಸುವದು. ತನ್ನ ಮನಸ್ಸಿನಲ್ಲಿಯೇ ಪಠಿಸುವದು ಮಾನಸಿಕ ಜಪವೆನಿಸುವದು. ಇದರಲ್ಲಿ ತನಗೆ ಬೇಕಾದದ್ದನ್ನು ಮಾಡಿಕೊಳ್ಳಬಹುದು.

# ಪ್ಲೇಗ ರೋಗ ನಿವಾರಣೆ

## ಅಥವಾ

# ಮಹಾಮಾರಿಕಾಖ್ಯಾನವು

## ಪ್ರಕಟನೆ

ಈ ಜಗತ್ಸೃಷ್ಟಿಯಲ್ಲಿ ಬ್ರಹ್ಮದೇವರು ಪ್ರಾಣಿಗಳ ಕರ್ಮಾನುಸಾರವಾಗಿ, ಅಕಾಲಮೃತ್ಯುವೆಂದೂ ಕಾಲಮೃತ್ಯುವೆಂದೂ ಎರಡು ತರದ ಮರಣವನ್ನು ನಿರ್ಮಿಸಿರುವನೆಂಬುದಕ್ಕೆ ಜೋತಿಷ್ಯಾದಿಶಾಸ್ತ್ರಗಳ ಆಧಾರವುಂಟು. ಅವುಗಳಲ್ಲಿ ಅಕಾಲಮೃತ್ಯು ಪ್ರಯತ್ನದಿಂದ ದೂರಾಗುವದು. ಕಾಲಮೃತ್ಯುವನ್ನು ಮಾತ್ರ ಅನುಭವಿಸಲಿಕ್ಕೇಬೇಕು.

ಇದಕ್ಕೆ ದೃಷ್ಟಾಂತ:— ದೀಪವು ಎಣ್ಣೆ ಬತ್ತಿಗಳಿಂದ ಪೂರಿತವಾಗಿದ್ದರೂ ಗಾಳಿಯ ಹೊಡತಕ್ಕೆ ನೊಂದುವದು. ಅದಕ್ಕೆ ಸುತ್ತಲೂ ಮರೆಗಟ್ಟಿದರೆ ದೀಪವು ನಿಲ್ಲುವದು. ಎಣ್ಣೆ ಬತ್ತಿಗಳು ತೀರಿದರೆ ಮಾತ್ರ ದೀಪದ ಬೆಳಕು ಎಲ್ಲಿರುವದು! ಇದರಂತೆಯೇ! ಇದೇ 'ಮಹಾಮಾರಿಕಾಖ್ಯಾನಾದಿ' ಶಾಸ್ತ್ರಾಧಾರಗಳನ್ನು ಶೋಧಿಸಿ, ಈ ಅಕಾಲಮರಣ (ಪ್ಲೇಗರೋಗಾದಿಗಳ) ದೆಸೆಯಿಂದ ಜನರ ಹಿತಾರ್ಥವಾಗಿ, ನಮ್ಮ ಸರಕಾರದವರು ಮಾಡಿದ ಈಗ ಮಾಡುವ, ಮಹಾ ಸಾಹಸೋಪಕಾರವನ್ನು ನಾವು ಎಷ್ಟು ವರ್ಣಿಸಿದರೂ ತೀರದು.

# ಮಹಾಮಾರಿಕಾಖ್ಯಾನ ಪ್ರಾರಂಭ

## ದೇವ್ಯೋವಾಚ:

ಶ್ಲೋಕ॥ ಮಹಾದೇವಿ ನಮಸ್ತುಭ್ಯಂ । ಮೃತ್ಯುರೂಪಿ ಭವಾಮ್ಯಹಂ ॥
ಇತ್ಯುಕ್ತ್ವಾ ತತ್ಸಮಾಸೇನ । ಶ್ರೋತುಮಿಚ್ಛಾಮಿ ತದ್ವದ: ॥

ಟೀಕು॥ ಭೋ! ಮಹಾದೇವಿಯೇ! ನಿನಗೆ ನಮಸ್ಕಾರವು. ನಾನು ಮೃತ್ಯು ರೂಪಿಣಿಯಾಗುತ್ತೇನೆಂದು ಹೇಳಿದಿಯಷ್ಟೆ, ಅದನ್ನೇ ವಿಸ್ತಾರದಿಂದ ಕೇಳಬೇಕೆಂಬ ಇಚ್ಛೆಯು ನಮಗೆ ಇರುತ್ತದೆ. ಅದನ್ನು ಹೇಳಬೇಕು ॥೧॥

## ದೇವ್ಯೋವಾಚ॥

ಶ್ಲೋಕ॥ ಪುರಾಬ್ರಹ್ಮಾತುಮಾಂಸ್ಸೃಷ್ಟ್ವಾ । ಸಮಾಹುಯಾದ್ಬ್ರವೀದ್ವಚಃ॥
ಶೃಣುಮೆವಚನಂ ಪುತ್ರಿ । ಕುರುಷ್ವಾಥಚ ಸಾದರಂ ॥

ಟೀಕು॥ ಮೊದಲು ಬ್ರಹ್ಮನು ನನ್ನನ್ನು ಹುಟ್ಟಿಸಿ ಕರೆದು ನನ್ನೊಡನೆ ಸರಿಯಾಗಿ ಮಾತಾಡಿದನು. ಹೇ ಮಗಳೇ! ನನ್ನ ಮಾತನ್ನು ಕೇಳು ಮತ್ತು ಪ್ರೀತಿಯಿಂದ ಮಾಡುವಂಥಾಕೆಯಾಗು. ॥ ೨ ॥

ಶ್ಲೋಕ ॥ ಕಲೌಜನ ದುರಾಚಾರ । ರಾಜಾನಶ್ಚ ತಥಾವಿಧಾಃ ॥
ಆಲೋಗತ್ವಾ ಭುವಂ ದೇವಿ । ಮೃತ್ಯುರೂಪಾ ಭವಾಶುಚಾ ॥

ಟೀಕು॥ ಕಲಿಯುಗದಲ್ಲಿ ಜನರು ದುಷ್ಟ ಆಚರಣೆಯುಳ್ಳವರಾಗುತ್ತಾರೆ. ಅಧಿಕಾರಸ್ಥರಾದರೂ ಹಾಗೇ ಆಗುತ್ತಾರೆ ಅದರಿಂದ ಎಲೋ ದೇವಿಯೋ! ಭೂಮಿಯನ್ನು ಕುರಿತು ಹೋಗಿ, ಕೂಡಲೇ ಮೃತ್ಯುರೂಪಳಾಗು ॥ ೩ ॥

ಶ್ಲೋಕ॥ ಪರದ್ರವ್ಯಾಪಹರ್ತಾರಃ । ಪರಸ್ತ್ರೀ ನಿರತಾಸದಾ ॥
ಪರಪೀಡಾ ಪರಾನಿತ್ಯಂ । ಸುಜಾನಸ್ತು ಕಲೌಯುಗೆ ॥

ಟೀಕು॥ ಎರಡನೆಯವರ ದ್ರವ್ಯವನ್ನು ಅಪಹರಣ ಮಾಡತಕ್ಕವರೂ ಎರಡನೆಯವರ ಸ್ತ್ರೀಯರಲ್ಲಿ ಆಸಕ್ತವುಳ್ಳವರೂ ದರ ದಿವಸದಲ್ಲಿ ಎರಡನೇಯವರಿಗೆ ಉಪದ್ರ ಮಾಡತಕ್ಕವರೂ ಹೀಗೆ ಕಲಿಯುಗದಲ್ಲಿ ಅಧಿಕಾರಸ್ಥರು ಆಗುತ್ತಾರೆ

ಶ್ಲೋಕ॥ ದೇವಸ್ವ ಹರಣಾಸಕ್ತಾ । ಬ್ರಹ್ಮಸ್ವ ನಿರತಾಸ್ಸದಾ ॥
ತೇಷಾಂದೋಷ ವಶಾತ್ವಂತು । ಜನಾನ್ ಸಂಹರ ನಿತ್ಯಶಃ ॥

ಟೀಕು॥ ದೇವರ ದ್ರವ್ಯವನ್ನು ಹರಣ ಮಾಡುವ ವಿಷಯದಲ್ಲಿಯೂ ಬ್ರಾಹ್ಮಣರ ದ್ರವ್ಯವನ್ನು ಯಾವಾಗಲೂ ಆಶಿಸುವದರಲ್ಲಿಯೂ ಉದ್ಯುಕ್ತರಾಗುತ್ತಾರೆ. ಅವರುಗಳ ದೋಷದ ದೆಶೆಯಿಂದ ನೀನು ಜನರುಗಳನ್ನು ಪ್ರತಿದಿವಸದಲ್ಲಿಯೂ ಸಂಹಾರಮಾಡು ॥೫॥

ಶ್ಲೋಕ॥ ಬ್ರಹ್ಮಣೈವಂ ಸಮಾದಿಷ್ಟಾ । ಸೇಂದ್ರಾದ್ಯೈಃ ಸುರಸತ್ತಮೈಃ॥
ಭುವಂ ಸಮಾಗತಾತತ್ರ । ಜನಾನ್ವೀಕ್ಷ್ಯಚ ಪಾಪಿನಃ ॥

ಟೀಕು॥ ಬ್ರಹ್ಮದೇವರಿಂದ ಹೀಗೆ ಆಜ್ಞೆಯನ್ನು ಹಡೆದು, ದೇವತೆಗಳಲ್ಲಿ ಶ್ರೇಷ್ಠರಾದಂಥ ಇಂದ್ರನೆ ಮೊದಲಾದ ದೇವತೆಗಳಿಂದಲೂ ಅಪ್ಪಣೆ ಪಡೆದುಕೊಂಡು, ಅಲ್ಲಿಂದ ಭೂಲೋಕಕ್ಕೆ ಬಂದು, ಪಾಪಿಷ್ಟರಾದಂಥ ಜನರುಗಳನ್ನು ನೋಡಿ ॥ ೬ ॥

ಶ್ಲೋಕ॥ರಾಜದೋಷಾನ್ ಪುರಸ್ಕೃತ್ಯಂ। ಗ್ರಾಮೆಗ್ರಾಮೇ ವಸಾಮ್ಯಹಂ॥
ತತ್ರಾಪಿ ಪಾಪಿನೋ ಹತ್ವಾ । ಪುನಗ್ರಾಮಾಂತರೆ ವ್ರಜೇ॥

ಟೀಕು ॥ ಅಧಿಕಾರಸ್ಥರ ದೋಷಗಳನ್ನು ಮುಂದುಮಾಡಿಕೊಂಡು, ದರವಂದು ಊರುಗಳಲ್ಲಿ ನಾನು ವಾಸಮಾಡುತ್ತೇನೆ ಅಲ್ಲಾಯ್ಯದರೂ ಪಾಪಿಗಳನ್ನು ಕೊಂದು ಮತ್ತೆ ಎರಡನೇ ಊರಿಗೆ ಹೋಗುತ್ತೇನೆ. ॥ ೭ ॥

ಶ್ಲೋಕ॥ ಏವಂದೇಶಾನ್ನಟಿತ್ವಾಹಂ । ಸರ್ವಾನ್‌ಸಂಹೃತ್ಯವೈ ಜನಾನ್॥
ಪುನರ್ಗಚ್ಛಾಮಿ ಸದನಂ ಬ್ರಹ್ಮಣಃ ಪರಮೇಷ್ಠಿನಃ

ಟೀಕು॥ ಹೀಗೆ ನಾನು ದೇಶಗಳನ್ನು ತಿರುಗಿ ಎಲ್ಲ ಜನರುಗಳನ್ನು ನಾಶಮಾಡಿ, ಅಲ್ಲಿಂದ ಮತ್ತೆ ಬ್ರಹ್ಮದೇವರ ಮನೆಗೆ ಹೋಗುತ್ತೇನೆ. ॥೮॥

ಶ್ಲೋಕ॥ ಏವಂಮದಾಗಮಂಜ್ಞಾತ್ವಾ । ಬುದ್ಧಿಮಾನ್ ಪುಣ್ಯಕರ್ಮವೇತ್॥
ವಿಚಾರಶಾಸ್ತ್ರತೋ ನಿತ್ಯಂ । ಜಾಗರೂಕೋ ಭವೇದಲಂ ॥

ಟೀಕು॥ ಈ ಪ್ರಕಾರ ನಾನು ಬಂದದ್ದನ್ನು ತಿಳಿದುಕೊಂಡು, ಬುದ್ಧಿವಂತನಾದ ಮನುಷ್ಯನು ಪುಣ್ಯಕೆಲಸವನ್ನು ಮಾಡಬೇಕು. ಪ್ರತಿದಿವಸವೂ

ಶಾಸ್ತ್ರದಿಂದ ವಿಚಾರಮಾಡಿ, ಎಚ್ಚರದಿಂದಿರಬೇಕು. ॥ ೯ ।

**ಇಲ್ಲಿ ದೇವಿಯು ತಾನು ಬಂದ**
**ಸೂಚನೆಯನ್ನೂ. ಆ ಕಾಲಕ್ಕೆ ಮಾಡುವ ಕ್ರಮವನ್ನೂ**
**ತಿಳಿಸುತ್ತಾಳೆ.**

ಶ್ಲೋಕ॥ ಪತಂತಿ ಮೂಷಕಾಯತ್ರ ।
ನೃತ್ಯಂತಿ ಚರಮಂತಿಚ ॥
ತದ್ಗೃಹಂತ್ತತ್ಕ್ಷಣಾತ್ತ್ಯಕ್ತ್ವಾ ।
ಸಕುಟುಂಬೋವನಂ ವಿಶೇತ್ ॥

ಟೀಕು॥ ಯಾವ ಸ್ಥಳದಲ್ಲಿ ಇಲಿಗಳು ಬೀಳುತ್ತವೆಯೋ! ಹಾಗೂ ಕುಣಿದಾಡಿ ಸಾಯುತ್ತವೆಯೋ! ಆ ಮನೆಯನ್ನು ಅದೇ ಕ್ಷಣದಲ್ಲಿಯೇ ಬಿಟ್ಟು ಕುಟುಂಬ ಜನರು ಸಹವಾಗಿ ಅರಣ್ಯಕ್ಕೆ ಹೋಗಬೇಕು ॥ ೧೦ ॥

ಶ್ಲೋಕ॥ ತತ್ರಶಾಂತಿಪ್ರಕುರ್ವೀತ ।
ಮಹಾದೇವ್ಯಾ ಸಮೀರಿತಂ ॥
ಜಪಿತ್ವಾಚ ಮಹಾಮಂತ್ರಂ ।
ಪಠಿತ್ವಾಸ್ತೋತ್ರ ಮುತ್ತಮಂ ॥

ಟೀಕು॥ ಮಹಾದೇವಿಯಿಂದ ಹೇಳಿದಂಥ ಶಾಂತಿಯನ್ನು ಅಲ್ಲಿಯೇ ಮಾಡಬೇಕು. ಮಹಾಮಂತ್ರವನ್ನು ಜಪಮಾಡಿ, ಉತ್ತಮವಾದ ಸ್ತೋತ್ರವನ್ನು ಅಂದುಕೊಳ್ಳಬೇಕು. ॥ ೧೧॥

## ॥ ಮಹಾಮಂತ್ರ ॥

ಓಂ ನಮೋ ಭಗವತಿ ಮಹಾಮಾರಿಕೆ ಮೃತ್ಯುರೂಪಿಣಿ ಸಕುಟುಂಬಂ ಮಾಂರಕ್ಷಂಸ್ವಹಾ॥

ಈ ಮಂತ್ರದಿಂದ ಹೋಮವನ್ನು ಮಾಡಬೇಕು.

ಶ್ಲೋಕ|| ವನೇಜಲಾಶಯಂಗತ್ವಾ |
ಊರ್ಧ್ವಬಾಹು ರಧೋಮುಖಃ ||
ವೀರಾಸನೇ ಚೋಪವಿಶ್ಯ |
ಜಪೇನ್ಮಂತ್ರಂ ಸಹಸ್ರಶಃ ||

ಟೀಕು|| ಅರಣ್ಯದಲ್ಲಿ ನೀರು ಇದ್ದಲ್ಲಿಗೆ ಹೋಗಿ, ಎರಡೂ ಕೈಗಳನ್ನು ಮೇಲಕ್ಕೆತ್ತಿ ಕೆಳಗೆ ಮೋರೆಯುಮಾಡಿ, ಮುಂಡೆಗಾಲು ಹೂಡಿ ಕುಳಿತು ಈ ಮಂತ್ರವನ್ನು ಸಾವಿರಬಾರೆ ಜಪಿಸಬೇಕು.||೧೨

ಶ್ಲೋಕ|| ಸಂಸ್ಥಾಪ್ಯ ಪ್ರತಿಮಾಂಭಕ್ತ್ಯಾ |
ಧೂಪದೀಪೋಪಹಾರಕೈಃ ||
ಸಂಪೂಜ್ಯ ವಿಧಿವತ್ ಪಶ್ಚಾತ್ |
ಜುಹೂಯಾತ್ ಸಪ್ತಮಂತ್ರತಃ ||

ಟೀಕು|| ಭಕ್ತಿಯಿಂದ ದೇವಿ ಪ್ರತಿಮೆಯನ್ನು ಕೂಡ್ರಿಸಿ, ಧೂಪ, ದೀಪ, ನೈವೇದ್ಯಾದಿಗಳಿಂದ ವಿಧಿಯೋಕ್ತ ಚನ್ನಾಗಿ ಪೂಜಿಸಿ ಬಳಿಕ ಏಳು ಮಂತ್ರಗಳಿಂದ ಹೋಮ ಮಾಡಬೇಕು. || ೧೩ ||

ಶ್ಲೋಕ|| ಹರಿದ್ರಾಚೂರ್ಣ ಸಂಮಿಶ್ರಂ |
ಚಿತ್ರಾನ್ನೈರಾಜ್ಯ ಸಂಯುತ್ತೈಃ||
ಸಮಿದ್ಭಿಃ ಖಾದಿರೈರ್ಭಕ್ತ್ಯಾ |
ಬ್ರಾಹ್ಮಣೈಶ್ಚ ಸಮನ್ವಿತಃ ||

ಟೀಕು|| ಅರಿಸಿಣ ಪುಡಿಯಿಂದ ಕೂಡಿದ ಚಿತ್ರಾನ್ನದಿಂದಲೂ ತುಪ್ಪದಿಂದ ಕೂಡಿದಂಥ ಖದಿರ (ಉತ್ರಾಣಿ) ಕಾಷ್ಟಸಮಿಧಗಳಿಂದಲೂ ಭಕ್ತಿಯಿಂದ (ತಮ್ಮ ಧರ್ಮಪ್ರಕಾರ) ಬ್ರಾಹ್ಮಣರನ್ನೊಡಗೂಡಿಕೊಂಡು || ೧೪ ||

ಶ್ಲೋಕ|| ಪತ್ನೀಪುತ್ರ ಸುಹೃತ್ಯೈಭ್ಯೋ |
ಜಿಹೂಯಾದನುವಾಸರಂ ||
ಹೋಮಾಂತೇಚ ಪಠೇನ್ನಿತ್ಯಂ |
ಸ್ತೋತ್ರ ಮೇತಜ್ಜಿತೇಂದ್ರಿಯಃ ||

ಟೀಕು|| ಹೆಂಡರು ಮಕ್ಕಳು ಗೆಳೆಯರುಗಳಿಂದ ಯುಕ್ತನಾಗಿ ದರ ದಿವಸದಲ್ಲಿ ಹೋಮ ಮಾಡಬೇಕು. ಹೋಮವು ಮುಗಿದ ಮೇಲೆ ಪ್ರತಿ ದಿವಸದಲ್ಲಿಯೂ ಇಂದ್ರಿಯ ನಿಗ್ರಹವುಳ್ಳವನಾಗಿ ಈ ಸ್ತೋತ್ರವನ್ನು ಪಠಿಸಬೇಕು. || ೧೫ ||

ಸ್ತೋತ್ರ|| ನಮೋದೇವಿ ಮಹಾದೇವಿ |
ಸರ್ವಲೋಕ ಭಯಂಕರಿ ||
ಸರ್ವದಾಸರ್ವತೋ ಮಹ್ಯಂ |
ಕೃಪಾಂಕುರು ಕೃಪಾಕರಿ ||

ಟೀಕು|| ಹೇ ದೇವಿಯೇ! ಮಹಾದೇವಿಯೇ! ಸರ್ವಲೋಕ ಭಯಂಕರಳಾದಂಥಾಕೆಯೇ! ನಿನಗೆ ನಮಸ್ಕಾರವು. ದಯಾಳುವಾದ ನೀನು, ನಮ್ಮೆಲ್ಲರಲ್ಲಿ ಯಾವಾಗಲೂ ಕೃಪೆಯನ್ನುಂಟುಮಾಡು.||೧೬||

ಶ್ಲೋಕ|| ಮೇರು ಕೈಲಾಸ ಶಿಖರೆ |
ಹಿಮಾದ್ರೌಗಂಧ ಮಾದನೆ ||
ನಿತ್ಯಂ ಪ್ರೀತ್ಯಾ ಕೃತಾವಾಸೆ |
ಮಧ್ಯಮಾಂಸ ಬಲಿಪ್ರಿಯೆ ||

ಟೀಕು || ಮೇರು ಪರ್ವತದಲ್ಲಿಯೂ, ಕೈಲಾಸ ಪರ್ವತದಲ್ಲಿಯೂ, ಹಿಮಾಚಲದಲ್ಲಿಯೂ, ಗಂಧಮಾದನದಲ್ಲಿಯೂ ಯಾವಾಗಲೂ ಪ್ರೀತಿಯಿಂದ ಇದ್ದಂಥಾಕೆಯೇ! ಮದ್ಯಮಾಂಸ ಬಲಿಯಿಂದ ಸಂತೋಷವಾಗತಕ್ಕಂಥಾಕೆಯೇ! || ೧೭ ||

ಶ್ಲೋಕ॥ ಮಹಾಸೈನ್ಯ ಸಮಾಯುಕ್ತೆ ।
ಸರ್ವಪ್ರಾಣಿ ವಿಹಿಂಸಿಕೆ ॥
ಸರ್ವಾಭಿಚಾರಿಕೆ ದೇವಿ ।
ಸರ್ವಂ ಸಕ್ಷಸ್ವ ಸರ್ವದಾ ॥

ಟೀಕು॥ ದೊಡ್ಡ ಸೈನ್ಯದಿಂದ ಕೂಡಿ ಇದ್ದಂಥಾಕೆಯೋ! ಎಲ್ಲ ಪ್ರಾಣಿಗಳನ್ನು ಕೊಲ್ಲತಕ್ಕಂಥಾಕೆಯೋ! ಮಾಟ, ಶೂನ್ಯ, ಮರಣ, ಹೋಮ ಮೊದಲಾದ ಕೃತ್ಯಗಳಿಗೆ ಕಾರಣವಾದಂಥಾಕೆಯೋ! ಹೇ ದೇವಿಯೇ! ಎಲ್ಲರನ್ನೂ ಸರ್ವದಾ ರಕ್ಷಿಸು. ॥ ೧೮ ॥

ಶ್ಲೋಕ॥ ಯತ್ರಕುತ್ರಸ್ಥಳೆವಾಪಿ ।
ಯಸ್ಮಿನ್ ಕಸ್ಮಿನ್ ಯದಾತದಾ ॥
ರಕ್ಷಮಾಂ ರಕ್ಷಮಾಂ ದೇವಿ ।
ಸಪುತ್ರ ಪಶು ಭೃತ್ಯಕಂ ॥

ಟೀಕು॥ ಯಾವ ಜಾಗಾದಲ್ಲಿಯಾನಲಿ, ಯಾವ ದೇಶದಲ್ಲಿಯಾಗಲಿ, ಮತ್ತು ಯಾವ ಕಾಲದಲ್ಲಿಯಾಗಲಿ ಎಲೈ ದೇವಿಯೇ! ಮಕ್ಕಳು, ಪಶು, ಭೃತ್ಯರುಗಳಿಂದ ಸಹಿತವಾದಂಥ ನನ್ನನ್ನು ಸಂರಕ್ಷಣೆ ಮಾಡು! ॥ ೧೯ ॥

ಶ್ಲೋಕ॥ ಮಾಂಗಲ್ಯಂ ಮಂಗಲೆದೇವಿ ।
ಮಹಾ ಮಂಗಲದಾಯಿನಿ ॥
ಲೋಕಾನಾಮಾಶ್ರಯೇ ಸರ್ವ ।
ಮಂಗಲೆ ಮಂಗಲಪ್ರಿಯೆ ॥

ಟೀಕು॥ ಮಲ್ಲಿಗೆಯಂತೆ ಸುಗಂಧಾಂಗವುಳ್ಳ ಕೃಷ್ಣಾಗರು ಸದೃಶವಾದಂಥಾಕೆಯೇ! ಶುಭಸ್ವರೂಪಳೇ, ಮಹಾದೇವಿಯೇ,

ಶ್ರೇಷ್ಠವಾದ ಶುಭವನ್ನು ಕೊಡುವಂಥಾಕೆಯೇ! ಲೋಕಗಳೆಲ್ಲಕ್ಕೂ ಆಶ್ರಯ ಮಾದಂಥಾಕೆಯೇ! ಸರ್ವಮಂಗಳೆಯೇ ಶುಭಪ್ರದಪ್ರೀಯಳೇ ॥ ೨೦ ॥

ಶ್ಲೋಕ॥ ಇತಿಸ್ತುತ್ವಾ ಮಹಾದೇವಿಂ ।
ಭಕ್ತಿಭಾವೇನ ಸಂಯುತಃ ॥
ಭುಂಜೀತಸ್ವಜನೈರ್ಯುಕ್ತೋ ।
ದೇವಿಂ ತಾಂ ಮನಸಾಸ್ಮರನ್ ॥

ಟೀಕು॥ ಈ ಪ್ರಕಾರ ಭಕ್ತಿಭಾವವುಳ್ಳವನಾಗಿ ಮಹಾದೇವಿಯನ್ನು ಸ್ತೋತ್ರ ಮಾಡಿ, ತನ್ನ ಬಂಧು ಜನರಿಂದೊಡಗೂಡಿ, ಆಮಹಾದೇವಿಯನ್ನು ಮನಸ್ಸಿನಿಂದ ಸ್ಮರಣೆ ಮಾಡುವವನಾಗಿ, ಭೋಜನವನ್ನು ಮಾಡಬೇಕು॥೨೧

## ಇಲ್ಲಿ ರೋಗವು ದೂರಾದ ಸೂಚನೆಯೂ ಮತ್ತು ಮನೆಗೆ ಬರುವ ರೀತಿಯೂ ಹೇಳಲ್ಪಡುವದು.

ಶ್ಲೋಕ॥ ಯದಾಸಗೃಹ ಚೈತ್ಯೇಷು ।
ಧ್ವಾಂಕ್ಷರಾವೋ ಭವಿಷ್ಯತಿ ॥
ಕಾಕಶಾಂತಿಂ ಪ್ರಕುರ್ವೀತ ।
ಗೃಹಗಂತು ಮುಪಕ್ರಮೆ ॥

ಟೀಕು॥ ಯಾವಾಗ್ಯೆ ಮನೆಯ ಮೇಲ್ಭಾಗದಲ್ಲಿ ಕಾಗೆಯ ಶಬ್ದವು ಆಗುತ್ತದೆಯೋ ಆಗ್ಯೆ ಮನೆಯು ಪರಿಶುದ್ಧವಾಗಿರುವದೆಂದು ತಿಳಿದು ಕಾಗೆಯ ದೆಶೆಯಿಂದ ಶಾಂತಿಮಾಡಿ, ಮನೆಗೆ ಹೋಗುವದರ ಸಲುವಾಗಿ ಆರಂಭ ಮಾಡಬೇಕು. ॥ ೨೨ ॥

ಶ್ಲೋಕ॥ ಸುಮುಹೂರ್ತೇ ಸುನಕ್ಷತ್ರೇ ।
ಚಾಲಂಕೃತ್ಯ ತತೋಗೃಹಂ ॥
ಬ್ರಾಹ್ಮಣೈರ್ಬಂಧು ಭಿಸ್ಸಾರ್ಧಂ ।
ಸಂವಿಶೇತ್ ಗೃಹಮಾತ್ಮನಾಃ ॥

ಟೀಕು॥ ಸುಮುಹೂರ್ತದಲ್ಲಿಯೂ, ಸುನಕ್ಷತ್ರದಲ್ಲಿಯೂ ಮನೆಯನ್ನು ಅಲಂಕಾರಮಾಡಿ ಬ್ರಾಹ್ಮಣರಿಂದಲೂ, ಭಾಂಧವರಿಂದಲೂ ಕೂಡಿಕೊಂಡು ತನ್ನ ಮನೆಯನ್ನು ಪ್ರವೇಶ ಮಾಡಬೇಕು. ॥ ೨೩ ॥

ಶ್ಲೋಕ॥ ಸ್ವಸ್ತಿವಾಚ ದ್ವಿಜೇಭ್ಯಶ್ಚ ।
ಶಾಂತಿ ಸೂಕ್ತೋಕ್ತಿ ಪೂರ್ವಕಂ ॥
ದಕ್ಷಿಣಾಂಚ ಹಿರಣ್ಯಾದಿ ।
ದದ್ಯಾಚ್ಚಾಭ್ಯಃ ವಿವರ್ಜಿತಃ ॥

ಟೀಕು॥ ಶಾಂತಿ ಸೂಕ್ತದಲ್ಲಿ ಹೇಳಿರುವಂಥ ಸ್ವಸ್ತಿವಚನವನ್ನು (ತಮ್ಮ ಧರ್ಮಪ್ರಕಾರ) ಬ್ರಾಹ್ಮಣರಿಂದ ಮಾಡಿಸಿಕೊಂಡು, ಸುವರ್ಣವೇ ಮೊದಲಾದಂಥ ದಕ್ಷಿಣೆಯನ್ನು ವಂಚನೆಯಿಲ್ಲದಲೇ ಕೊಡಬೇಕು. ॥ ೨೪ ॥

ಶ್ಲೋಕ॥ ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ।
ದೇವತಾಂ ಪ್ರಾರ್ಥಯೇದ್ಗೃಹೆ ॥
ಗಚ್ಛಗಚ್ಛ ಮಹಾದೇವಿ ।
ಸ್ವಸ್ಥಾನಂ ಮಂಗಲಂ ಕುರು ॥

ಟೀಕು॥ ತನ್ನ ಮನೆಯಲ್ಲಿ ಬ್ರಾಹ್ಮಣರನ್ನು ಭೋಜನ ಮಾಡಿಸಿ, ಅನಂತರದಲ್ಲಿ ಎಲೋ ಮಹಾದೇವಿಯೋ ನಿನ್ನ ಸ್ಥಾನವನ್ನು ಕುರಿತು ಹೋಗು. ನನಗೆ ಮಂಗಳವನ್ನು ಮಾಡು. ಎಂದು ಆ ಮಹಾದೇವಿಯನ್ನು ಪ್ರಾರ್ಥಿಸಬೇಕು. ॥ ೨೫ ॥

ಶ್ಲೋಕ॥ ಏವಂ ಕೃತ ವಿಧಾನೇನ ।
ಮಾರಿಕಾ ಶಾಂತಿರುತ್ತಮಾ ॥
ಜಾಯತೇನಾತ್ರ ಸಂದೇಹೊ ।
ಸತ್ಯಂ ಸತ್ಯಂ ಸಮೀರಿತಂ ॥

ಟೀಕು॥ ಹೀಗೆ ವಿಧಾನಪೂರ್ವಕವಾಗಿ ಮಾಡಿದರೆ, ಮಾರಿಕಾ (ಪ್ಲೇಗರೋಗ) ಶಾಂತಿಯು ಉತ್ತಮ ರೀತಿಯಿಂದಾಗುವದು. ಇದಕ್ಕೇನೂ ಸಂದೇಹವಿಲ್ಲ ಹೇಳಿದ್ದು ಖರೆಖರೆ ಇರುತ್ತದೆ. ॥ ೨೬ ॥

ಶ್ಲೋಕ॥ ಇತ್ಯೇತತ್ಕಥಿ ತಂದೇವ್ಯಾ ।
ದೇವಿಭ್ಯಾ ಮಾತ್ಮ ಸಂಭವಂ ॥

ಮಾಹಾತ್ಮ್ಯಂ ಪಠತೇಯಸ್ತು ।
ಸೋಽಪಿ ಮಾಂಗಲ್ಯ ಮಾಪ್ನುಯಾತ್ ॥

ಟೀಕು॥ ಈ ಪ್ರಕಾರ ದೇವಿಯು, ದೇವತೆಗಳಿಗೆ ತನ್ನ ಉತ್ಪತ್ತಿಯನ್ನು ಹೇಳುವಂಥಾಕೆಯಾದಳು. ಈ ದೇವಿ ಮಾಹಾತ್ಮೆಯನ್ನು ಯಾವನು ಪಠನ ಮಾಡುತ್ತಾನೋ ಅವನು ಮಾಂಗಲ್ಯವನ್ನು ಹೊಂದುತ್ತಾನೆ. ॥ ೨೭ ॥

ಶ್ಲೋಕ॥ ವಾತಪಿತ್ತಾದಿ ಜನಿತಃ ।
ಗ್ರಂಥೀಚ ವಿಷಮಜ್ವರಾಃ ॥
ದೂರದೇಶಾನ್ ಪಲಾಯಂತೆ ।
ಏತಸ್ತೋತ್ರಾಂಬುಪಾನತಃ ॥

ಟೀಕು॥ ವಾತ, ಪಿತ್ತ, ಶ್ಲೇಷ್ಮಾದಿಗಳಿಂದ ಹುಟ್ಟಿದಜ್ವರ, ಗಂಟು ಎದ್ದು ಉಂಟಾಗುವ (ಗ್ರಂಥಿಕ) ಜ್ವರ, ವಿಷಮಜ್ವರ ಮೊದಲಾದ ರೋಗೋಪದ್ರವಿದ್ದ ಸ್ಥಾನಾಂತರದಿಂದ ದೂರ ಹೋಗಿದ್ದು ದಿನಾಲೂ ಈ ದೇವೀ ಮಹಾತ್ಮೆಯ ಸ್ತೋತ್ರವೆಂಬ ನೀರನ್ನು ಯಾವನು ಕುಡಿಯುತ್ತಾನೋ! (ಮಹಾಮಾರಿಕಾ ಸ್ತೋತ್ರ ಮಾಡುತ್ತಾನೋ!) ಅವನು ಸುಖವನ್ನು ಹೊಂದುತ್ತಾನೆ. ॥ ೨೮ ॥

ಶ್ಲೋಕ॥ ಲಿಖಿತಂ ಪುಸ್ತಕಂ ಯಸ್ಯ ।
ಗೃಹೆತಿಷ್ಟಂತಿ ಸರ್ವದಾ ॥
ತಸ್ಯಮಾರಿ ಭಯಂನಾಸ್ತಿ ।
ಸತ್ಯಂ ಸತ್ಯಂ ಮಯೋದಿತಂ ॥

ಟೀಕು॥ ಈ ಮಾಹಾತ್ಮೆಯನ್ನು ಬರೆದ ಪುಸ್ತಕವು ಯಾವಾತನ ಮನೆಯಲ್ಲಿ ಸರ್ವದಾ ಇರುತ್ತದೆಯೋ ಆತನಿಗೆ ಮಾರಿಕಾ (ಪ್ಲೇಗರೋಗ) ಭಯವೇನೂ ಇಲ್ಲ ಇದು ಖರೆ ಎಂದು ನನ್ನಿಂದ ಹೇಳಲ್ಪಟ್ಟಿರುತ್ತದೆ ॥ ೨೯ ॥

ಶ್ಲೋಕ॥ ಪುಸ್ತಕಂ ಪೂಜಯೆದ್ಯಸ್ತು ।
ಶ್ರದ್ಧಯಾ ಪರಯಾಮುದಾ ॥

ಸೋಽಪಿ ಮಾಂಗಲ್ಯ ಮಾಪ್ನೋತಿ |
ಯಿಹಾ ಮುತ್ರಾಪರಾಂಗತಿ ||

ಟೀಕು|| ಕೇವಲ ಭಕ್ತಿಯಿಂದಲೂ ಸಂತೋಷದಿಂದಲೂ ಯಾವನು ಈ ಪುಸ್ತಕವನ್ನು ಪೂಜಿಸುತ್ತಾನೋ! ಅವನಾದರೂ ಮಂಗಳವನ್ನು ಹೊಂದುತ್ತಾನೆ. ಮತ್ತು ಇಹಲೋಕ ಪರಲೋಕದಲ್ಲಿ ಉತ್ತಮವಾದ ಸ್ಥಾನವನ್ನು ಹೊಂದುತ್ತಾನೆ. ॥ ೩೦ ||

ಶ್ಲೋಕ|| ಸರ್ವಂತ್ಯಕ್ತ್ವಾ ಸಾಧಯುಚ ।
ಯತ್ನೇನಾಪಿ ಧನ್ಯೈರಪಿ ||
ಶ್ರೋತವ್ಯಂ ಪರಯಾಭಕ್ತ್ಯಾ ।
ಸರ್ವ ಕಾಮ್ಯಾರ್ಥ ಸಿದ್ಧಯೇತ್ ||

ಟೀಕು|| ಯಾವತ್ತನ್ನು ಬಿಟ್ಟು, ಪ್ರಯತ್ನದಿಂದಲೂ ದ್ರವ್ಯದಿಂದಲೂ ಇದನ್ನು ಸಾಧನ ಮಾಡಬೇಕು. ಸರ್ವ ಕಾಮ್ಯಾರ್ಥಗಳು ಸಿದ್ಧಿಯಾಗುವದರ ಸಲುವಾಗಿ ಈ ದೇವೀ ಮಹಾತ್ಮೆಯನ್ನು ಶ್ರವಣ ಮಾಡಬೇಕು ||೩೧||

ಶ್ರೀ ಮಹಾಮಾರಕಾಖ್ಯಾನಂ ನಾಮುಸಪ್ತಮೋಽಧ್ಯಾಯಃ

---



# ದೀಪಾವಳಿ ಪೂಜಾ ಕ್ರಮವು

## ಶ್ರೀ ಮಹಾಲಕ್ಷ್ಮೀಪೂಜಾ

### ಪ್ರಕಟನೆ,

ಪೂರ್ವಕಾಲದಿಂದಲೂ ದರವರ್ಷ ನಡೆದು ಬಂದ ಆಶ್ವಿನ ಬಹುಳ ಅಮವಾಸೆಯದಿವಸ ವ್ಯಾಪಾರಸ್ಥರೆಲ್ಲರು ತಮಗೆ ಶುಭ ಲಾಭಾದಿಗೋಸ್ಕರವಾಗಿ ತಮ್ಮ ಅಂಗಡಿಯಲ್ಲಿ **'ಮಹಾಲಕ್ಷ್ಮೀ ಪೂಜೆಯನ್ನೂ'** ಕಾರ್ತಿಕ ಶುದ್ಧ ಪ್ರತಿಪದದಿವಸ **'ಗಣಪತಿ ಪೂಜೆಯನ್ನೂ, ಸರಸ್ವತಿ ಪೂಜೆಯನ್ನೂ,** ತಮಗೆ ತಿಳಿದಷ್ಟು ಮಾತ್ರದಿಂದಲೇ ಮಾಡುವರು. ಆದರೆ ವಿಧಿವತ್ತಾಧಾರದಿಂದ ಕ್ರಮೋಕ್ತವಾಗಿ ಪೂಜಿಸಿದರೆ ಮತ್ತಿಷ್ಟು ಹೆಚ್ಚಿಗೆ ಶುಭಲಾಭಾದಿಗಳು ಆಗುವವೆಂದು ಆಲೋಚಿಸಿ ತಕ್ಕಮಟ್ಟಿಗೆ ಎಲ್ಲರಿಗೂ ತಿಳಿಯುವಂತೆ ಬರೆದು ಪ್ರಸಿದ್ಧಪಡಿಸಿರುವೆವಷ್ಟೆ? ಸರ್ವರೂ ಇದನ್ನು ತೆಗೆದುಕೊಂಡು ಇದರಂತೆಯೇ ಸರಿಯಾಗಿ ಪೂಜಿಸಿ, ತಮ್ಮ ಶುಭಲಾಭಾದಿಗಳನ್ನು ಪಡೆಯುವರೆಂದು ಪೂರ್ಣ ನಂಬಿರುವೆವು.

### ಸಂಕಲ್ಪ.

ಶ್ರೀಮತ್ ಪ್ರವರ್ತಮಾನೆ ವ್ಯವಹಾರಿಕೆ ○ ನಾಮ ಸಂವತ್ಸರೆ ದಕ್ಷಿಣಾಯನೆ ಶರದೃತೌ ಆಶ್ವಿನಮಾಸೆ ಕೃಷ್ಣಪಕ್ಷೆ ಪೂರ್ಣಮಾವಾಸ್ಯಾಂ ● ವಾಸರೆ ಏವಂ ಗುಣಗಳು ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ಮಮಯಾವಜ್ಜೀವ ಸೌಮಂಗಲ್ಯ ಸಿದ್ಧ್ಯರ್ಥಂ

---

○ ಈ ಗುರ್ತು ಇರುವಲ್ಲಿ ಸಂವತ್ಸರದ ಹೆಸರು ಅನ್ನಬೇಕು.

● ಈ ಗುರ್ತು ಇರುವಲ್ಲಿ ವಾರದ ಹೆಸರು ಅನ್ನಬೇಕು.

ಪುತ್ರಪೌತ್ರಾದ್ಯಭಿಷ್ಟಪ್ರಾಪ್ತ್ಯೆ ಆಯುರಾರೋಗ್ಯ ಐಶ್ವರ್ಯಾಭಿವೃದ್ಧ್ಯರ್ಥಂ ಶ್ರೀಸ್ವರ್ಣಲಕ್ಷ್ಮೀ ಪ್ರೀತ್ಯರ್ಥಂಚ ಯಥಾ ಮಿಲಿತೋಪಚಾರೈಃ ಮಹಾಲಕ್ಷ್ಮೀ ಪೂಜಾಂಕರಿಷ್ಯೆ. ಹೀಗೆ ಸಂಕಲ್ಪವನ್ನು ಹೇಳಿ ಘಂಟಾನಾದ ಮಾಡಬೇಕು.

# ಶ್ರೀ ಮಹಾಲಕ್ಷ್ಮೀ ಪೂಜೆಯು.





## ದಶಾವರಣ ದೇವತಾಯಂತ್ರ.

| | | | |
|---|---|---|---|
| ಓಂಗೌರ್ಯಾ ಸಹ ರುದ್ರಾಯ ನಮಃ ೫ | ಓಂಸ್ವರಯಾ ಸಹ ವಿರಂಚಯೇ ನಮಃ ೪ | ಓಂಲಕ್ಷ್ಮ್ಯಾ ಸಹ ಹೃಷೀಕೇಶಾಯ ನಮಃ ೬ | |
| ಓಂ ಐಂ ಮಹಾಕಾಳ್ಯೈ ನಮಃ ೧ | ಓಂಹ್ರೀಂ ಮಹಾಲಕ್ಷ್ಮ್ಯೈ ನಮಃ ೨ | ಓಂಕ್ಲೀಂ ಮಹಾಸರಸ್ವತ್ಯೈ ನಮಃ ೩ | |
| ಓಂ ಅಷ್ಟಭುಜಾಯೈ ನಮಃ ೯ | ಓಂ ಅಷ್ಟಾದಶಭುಜಾಯೈ ನಮಃ ೭ | ಓಂದಶಾನನಾಯೈ ನಮಃ ೮ | |
| ಮಹಿಷಾಯ ನಮಃ ೧೦ | ಸಿಂಹಾಯ ನಮಃ ೧೧ | ಕಾಲಾಯ ನಮಃ ೧೨ | ಮೃತ್ಯವೇ ನಮಃ ೧೩ |

ಈ ಯಂತ್ರವನ್ನು ಭುಜಪತ್ರೆಯ ಮೇಲೆ ಕುಂಕುಮ ಕೇಶರಿಯಿಂದ ಬರೆದು ಇಲ್ಲವೆ ತಾಮ್ರದ ತಗಡಿನಮೇಲೆ ಬರೆದು ಪೂಜಾ ಮಾಡುವ ಸ್ಥಳದಲ್ಲಿ ಸ್ಥಾಪಿಸಿ "ಓಂಹ್ರೀಂ ಮಹಾಲಕ್ಷ್ಮ್ಯೈ ನಮಃ" ಎಂದು ಗಂಧ, ಅಕ್ಷತೆ ಪುಷ್ಪಾದಿಗಳಿಂದ ಪೂಜಿಸಿ ಈ ಯಂತ್ರದ

ಮೇಲೆ ದರವರ್ಷ 'ಮಹಾಲಕ್ಷ್ಮೀ ಮೂರ್ತಿಯನ್ನು' ಸ್ಥಾಪಿಸುವ ಪದ್ಧತಿಯಂತೆ ನೆಲೆಗೊಳಿಸಿ ಕೆಳಗೆ ಬರೆದಿರುವ ಮಂತ್ರೋಪಚಾರಾದಿಗಳಿಂದ ಪೂಜಿಸಬೇಕು.

## ಅಭಿಷೇಕ.

ಗಂಗಾ ಸರಸ್ವತೀ ರೇವಾ ಕಾವೇರಿ ನರ್ಮದಾ ಜಲೈಃ |
ಸ್ನಾಪಿತಾಸಿ ಮಯಾದೇವಿ ತಥಾ ಶಾಂತಿಂ ಕುರುಷ್ವಮೇ|| ಓಂ
ಹ್ರೀಂಮಹಾಲಕ್ಷ್ಮ್ಯೈನಮಃಶುದ್ಧೋದಕಸ್ನಾನಂಸಮರ್ಪಯಾಮಿ||

## ವಸ್ತ್ರಧಾರಣ

ಸರ್ವಭೂಷಾದಿಕೇ ಸೌಮ್ಯೇ ಲೋಕಲಜ್ಜಾನಿವಾರಿಣೀ |
ಮಯೋಪಪಾದಿತೇ ತುಭ್ಯಂ ವಾಸಸಿ ಪ್ರತಿಗೃಹ್ಯತಾಂ ||
ಓಂ ಹ್ರೀಂ ಮಹಾಲಕ್ಷ್ಮ್ಯೈನಮಃ ವಸ್ತ್ರಯುಗ್ಮಂ ಸಮರ್ಪಯಾಮಿ||

## ಕಂಚುಕಿ (ಕುಪ್ಪುಸ)

ನವರತ್ನಾದಿಭಿರ್ಬದ್ಧಾಂ ಸೌವರ್ಣೇನಚ ತಂತುಭಿಃ |
ನಿರ್ಮಿತಾಂ ಕಂಚುಕೀಂಭಕ್ತ್ಯಾಗೃಹಾಣ ಪರಮೇಶ್ವರಿ ||
ಓಂ ಹ್ರೀಂ ಮಹಾಲಕ್ಷ್ಮ್ಯೈನಮಃ|ಕಂಚುಕೀಂ ಸಮರ್ಪಯಾಮಿ||

## ಮಂಗಲಸೂತ್ರ (ತಾಳಿ)

ಮಾಂಗಲ್ಯಂ ತಂತುಮಣಿಭಿರ್ಮುಕ್ತಾಫಲ ವಿರಾಜಿತಂ |
ಕಂಠಸ್ಯ ಭೂಷಣಾರ್ಥಾಯ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ||
ಓಂ ಹ್ರೀಂ ಮಹಾಲಕ್ಷ್ಮ್ಯೈನಮಃ|ಕಂಠಸೂತ್ರಂಸಮರ್ಪಯಾಮಿ||

## ಪಟ್ಟಸೂತ್ರ (ಹಂಗನೂಲು)

ಪಟ್ಟಸೂತ್ರಂ ಭವಂದಿವ್ಯಂ ಸ್ವರ್ಣಪೂರ್ಣಾಕೃತಿಯುತಂ |
ಸೌಮಂಗಲ್ಯಾಭಿವೃದ್ಧ್ಯರ್ಥಂ ಕಂಠಸೂತ್ರಂ ದದಾಮಿತೇ ||
ಓಂ ಹ್ರೀಂ ಮಹಾಲಕ್ಷ್ಮ್ಯೈನಮಃ|ಪಟ್ಟಸೂತ್ರಂಸಮರ್ಪಯಾಮಿ||

## ಕಂಕಣ [ಕಾಜಿನ ಬಳಿ]

ಕಾಚಸ್ಯ ನಿರ್ಮಿತಂ ದಿವ್ಯಂ ಕಂಕಣಂಚ ಸುರೇಶ್ವರಿ |
ಹಸ್ತಾಲಂಕರಣಾರ್ಥಾಯ ಕಂಕಣಂ ಪ್ರತಿಗೃಹ್ಯತಾಂ ||
ಓಂ ಹ್ರೀಂ ಮಹಾಲಕ್ಷ್ಮೈ ನಮಃ|ಕಂಕಣಂ ಸಮರ್ಪಯಾಮಿ||

## ಆಭರಣ

ರತ್ನಮುಕ್ತಾ ಸುವರ್ಣಾದಿ ರಚಿತಾನಿ ಸುರೇಶ್ವರಿ |
ಭೂಷಣಾನಿ ಪ್ರದಾಸ್ಯಾಮಿ ಮಹಾದೇವಿ ನಮೋಽಸ್ತುತೇ ||
ಓಂಹ್ರೀಂಮಹಾಲಕ್ಷ್ಮೈನಮಃ|ನಾನಾಭರಣಾನಿಸಮರ್ಪಯಾಮಿ

## ವಿಭೂತಿಧಾರಣ

ಪಾಪಿಷ್ಟಾನಪಿ ಪಾಪಾನಾಂ ನರಕಂದುಃಖಮೇವಚ |
ಕಾಮಂ ಭಸ್ಮೀ ಕರೋಷಿತ್ವ ಭವಾನಿ ಭಸ್ಮಧಾರ್ಯತಾಂ ||
ಓಂ ಹ್ರೀಂ ಮಹಾಲಕ್ಷ್ಮೈ ನಮಃ | ಭಸ್ಮಂ ಸಮರ್ಪಯಾಮಿ||

## ಗಂಧಧಾರಣ

ಕರ್ಪೂರ ಕುಂಕುಮೈರ್ಯುಕ್ತಂ ಹರಿದ್ರಾದಿ ಸಮನ್ವಿತಂ |
ಕಸ್ತೂರ್ಯಾದಿ ಸಮಾಯುಕ್ತಂ ಚಂದನಂ ಪ್ರತಿಗೃಹ್ಯತಾಂ ||
ಓಂ ಹ್ರೀಂ ಮಹಾಕ್ಷ್ಮೈ ನಮಃ ಗಂಧಂ ಸಮರ್ಪಯಾಮಿ||

## ಪರಿಮಳ [ಸುಗಂಧದ್ರವ್ಯ

ನಾನಾ ಸುಗಂಧಿದ್ರವ್ಯಂ ಚೂರ್ಣೀಕೃತ್ಯಪ್ರಯತ್ನತಃ |
ದದಾಮಿತೇ ಮಹಾದೇವಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ||
ಓಂ ಹ್ರೀಂ ಮಹಾಲಕ್ಷ್ಮೈ ನಮಃ | ನಾನಾಪರಿಮಲ ದ್ರವ್ಯಾಣಿ
ಸಮರ್ಪಯಾಮಿ ||

# ಹರಿದ್ರಾ (ಅರಿಷಣ)

ಹರಿದ್ರಾಂಚ ಸುವರ್ಣಾಭಾಂ ಸರ್ವಸೌಭಾಗ್ಯದಾಯಿನೀಂ ।
ಸರ್ವಾಲಂಕಾರಮುಖ್ಯಾಂಹಿ ಸುಂದರೀ ಪ್ರತಿಗೃಹ್ಯತಾಂ ॥
ಓಂ ಹ್ರೀಂ ಮಹಾಲಕ್ಷ್ಮೈನಮಃ ಹರಿದ್ರಾಂ ಸಮರ್ಪಯಾಮಿ ॥

# ಕುಂಕುಮ

ಹರಿದ್ರಾ ಚೂರ್ಣಸಂಯುಕ್ತಂ ಕುಂಕುಮಂ ಕಾಮದಾಯಕಂ ।
ವಸ್ತ್ರಾಲಂಕರಣಂ ಸರ್ವಂ ಮಂಗಳೆ ಪ್ರತಿಗೃಹ್ಯತಾಂ ॥
ಓಂ ಹ್ರೀಂ ಮಹಾಲಕ್ಷ್ಮೈನಮಃ ಕುಂಕುಮಂ ಸಮರ್ಪಯಾಮಿ ॥

# ಕಜ್ಜಲ (ಕಾಡಿಗೆ)

ಕಜ್ಜಲಂ ಕಾಮಿಕಂ ರಮ್ಯಂ ಕಾಮಿನೀ ಕಾಮಸಂಭವಂ ।
ನೇತ್ರಯೋಃಭೂಷಣಾರ್ಥಾಯ ಕಲ್ಯಾಣಿ ಪ್ರತಿಗೃಹ್ಯತಾಂ ॥
ಓಂ ಹ್ರೀಂ ಮಹಾಲಕ್ಷ್ಮೈನಮಃ । ಕಜ್ಜಲಂ ಸಮರ್ಪಯಾಮಿ ॥

# ಸಿಂದೂರ (ಕುಂಕುಮ)○

ಉದಿತಾರುಣ ಸಂಕಾಶಂ ಜಪಾಕುಸುಮ ಸನ್ನಿಭಂ ।
ಸೀಮಂತ ಭೂಷಣಾರ್ಥಾಯ ಸಿಂದೂರಂ ಪ್ರತಿಗೃಹ್ಯತಾಂ ॥
ಓಂ ಹ್ರೀಂ ಮಹಾಲಕ್ಷ್ಮೈನಮಃ । ಸಿಂದೂರಂ ಸಮರ್ಪಯಾಮಿ ॥

# ಅಕ್ಷತಾಧಾರಣ

ಅಕ್ಷತಾಸ್ತಂಡುಲಾಃಶುಭ್ರಾಃ ಕುಂಕುಮೇನ ವಿರಾಜಿತಾಃ ।
ಮಯಾ ನಿವೇದಿತಾ ಭಕ್ತ್ಯಾ ಗೃಹಾಣ ಪರಮೇಶ್ವರಿ ॥
ಓಂ ಹ್ರೀಂ ಮಹಾಲಕ್ಷ್ಮೈನಮಃ ಅಕ್ಷತಾನ್ ಸಮರ್ಪಯಾಮಿ ॥

# ಪುಷ್ಪಧಾರಣ

ಜಾಜೀ ಪುನ್ನಾಗ ಮಂದಾರ ಕೇತಕಿ ಚಂಪಕಾನಿಚ ।
ಪುಷ್ಪಾಣಿ ತವ ಪೂಜಾರ್ಥಮರ್ಪಯಾಮಿ ಮಹಾಶುಭೆ ॥

---

○ ಈ ಕುಂಕುಮ ಬೈತಲೆಯಲ್ಲಿ ಧರಿಸಬೇಕು.

ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ । ಪುಷ್ಪಾಣಿ ಸಮರ್ಪಯಾಮಿ ॥

## ಪುಷ್ಪಮಾಲಾ (ದಂಡೆ)

ಕೇತಕೀಭಿಶ್ಚ ಕಲ್ಹಾರೈರ್ಮಾಲತೀ ಮಲ್ಲಿಕಾದಿಭಿಃ ।
ಮಯಾ ವಿರಚಿತಾಂ ಮಾಲಾಂ ಗೃಹಾಣ ಸರ್ವ ಮಂಗಲೆ ॥
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ । ಪುಷ್ಪಮಾಲಾ ಸಮರ್ಪಯಾಮಿ ॥

## ಪತ್ರಪುಷ್ಪ

ಸುಗಂಧೀನಿ ಸುಪುಷ್ಪಾಣಿ ಪತ್ರಾಣಾಂಚೈಕವಿಂಶತಿಃ ।
ಮಯಾ ಹೃತಾನಿ ಪೂಜಾರ್ಥಂ ಗ್ರಹಾಣ ಲೋಕನಾಯಕಿ ॥
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ । ನಾನಾವಿಧ ಪತ್ರಪುಷ್ಪಂ ಸಮರ್ಪಯಾಮಿ ॥

## ಧೂಪ

ದೇವದ್ರುಮರಸೋದ್ಭೂತಃ ಕಾಲಾಗರು ಸಮನ್ವಿತಃ ।
ಅಘ್ರೇಯಸ್ತಾಮಯಂ ಧೂಪೋ ಕಲ್ಯಾಣಿ ಘ್ರಾಣಹರ್ಷಣಃ ॥
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ । ಧೂಪಂ ಸಮರ್ಪಯಾಮಿ ॥

## ದೀಪ

ಸಾಜ್ಯಂತ್ರಿವರ್ತಿ ಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।
ಗೃಹಾಣ ಮಂಗಲಂ ದೀಪಂ ವರದೇ ಭಕ್ತವತ್ಸಲೆ ॥
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ । ದೀಪಂ ಸಮರ್ಪಯಾಮಿ ॥

## ಘಂಟಾನಾದ

ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ ।
ಕುರ್ವೆ ಘಂಟಾರವಂ ನಿತ್ಯಂ ಸರ್ವೋಪದ್ರವನಾಶನಂ ॥
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ । ಘಂಟಾನಾದಂ ಸಮರ್ಪಯಾಮಿ ॥

## ನೈವೇದ್ಯ

ನೈವೇದ್ಯಂ ಸಫಲಂಚೈವ ಭಕ್ಷಭೋಜ್ಯೈಶ್ಚಸಂಯುತಂ ।
ದಧ್ಯಾ ಘೃತೇನ ಸಂಯುಕ್ತಂ ಗೃಹಾಣ ಪರಮೇಶ್ವರಿ ॥

ಓಂ ಹ್ರೀಂ ಮಹಾಲಕ್ಷ್ಮ್ಯೈನಮಃ । ನೈವೇದ್ಯಂ ಸಮರ್ಪಯಾಮಿ ॥

# ಪಾನೀಯ (ನೀರು)

ಶುದ್ಧೋದಕಂ ಸಮಾನೀತಂ ಗಂಧ ಕರ್ಪೂರ ಸಂಯುತಂ ।
ದಿವ್ಯಪಾತ್ರಸ್ಥಿತಂ ದೇವಿ ಪಾನೀಯಂ ಪ್ರತಿಗೃಹ್ಯತಾಂ ॥
ಓಂ ಹ್ರೀಂ ಮಹಾಲಕ್ಷ್ಮ್ಯೈನಮಃ ಪಾನೀಯಂ ಸಮರ್ಪಯಾಮಿ ॥

# ಕರೋದ್ವರ್ತನ (ಕೈಗೆ ಗಂಧಲೇಪನ)

ಚಂದನಾಗರು ಕರ್ಪೂರ ಸುರಭಿಸ್ವಾದುಶೀತಲಂ ।
ಕರೋದ್ವರ್ತನಕಂದೇವಿ ಗೃಹ್ಯತಾಂ ಭಕ್ತವತ್ಸಲೆ ॥
ಓಂ ಹ್ರೀಂ ಮಹಾಲಕ್ಷ್ಮ್ಯೈನಮಃ । ಕರೋದ್ವರ್ತನಾರ್ಥೆ ಚಂದನಂ ಸಮರ್ಪಯಾಮಿ ।

# ತಾಂಬೂಲ

ಕರ್ಪೂರೈರ್ಲಾಲವಂಗಾದಿ ತಾಂಬೂಲೀ ದಲಸಂಯುತಂ ।
ಕ್ರಮುಕಾದಿ ಫಲೈರ್ಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ ॥
ಓಂ ಹ್ರೀಂ ಮಹಾಲಕ್ಷ್ಮ್ಯೈನಮಃ । ತಾಂಬೂಲಂಸಮರ್ಪಯಾಮಿ ॥

# ಫಲಾನಿಸಮರ್ಪಣ (ಉಡಿತುಂಬೋಣ)

ಇದಂ ಫಲಂ ಮಯಾದೇವಿ ಸ್ಥಾಪಿತಂ ಪುರತಸ್ತವ ।
ತೇನ ಮೇ ಸಫಲಾವಾಪ್ತಿ ರ್ಭವೇಜ್ಜನ್ಮನಿ ಜನ್ಮನಿ ॥
ನಾರಿಕೇಳಂ ಮಾತುಲಂಗಂ ಜಂಬೀರಂಚೇಕ್ಷುದಂಡಕಂ ।
ಕದಲೀ ಪನಸಾದೀನಿ ಫಲಾನಿ ಪ್ರತಿಗೃಹ್ಯತಾಂ ॥
ಓಂ ಹ್ರೀಂ ಮಹಾಲಕ್ಷ್ಮ್ಯೈನಮಃ ಪೂರ್ಣಫಲಾನಿಸಮರ್ಪಯಾಮಿ ॥

# ದಕ್ಷಣಿ

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತ ಪುಣ್ಯಫಲದಮತಶ್ಶಾಂತಿಂ ಪ್ರಯಚ್ಛಮೇ ॥
ಓಂ ಹ್ರಿಂ ಮಹಾಲಕ್ಷ್ಮ್ಯೈನಮಃ । ದಕ್ಷಿಣಾಂ ಸಮರ್ಪಯಾಮಿ ॥

## ನೀರಾಜನ (ತುಪ್ಪದದೀಪ)

ಘೃತವರ್ತಿ ಸಮಾಯುಕ್ತಂ ಘನಸಾರ ಸುದೀಪಿತಂ ।
ನೀರಾಜನಮಿದಂ ದೇವಿ ಗೃಹಾಣ ಸರ್ವಮಂಗಲೆ ॥
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ । ನೀರಾಜನದೀಪಂ ಸಮರ್ಪಯಾಮಿ ।

## ಕರ್ಪೂರದೀಪ

ಸ್ವಪ್ರಕಾಶ ಮಹಾದೇವಿ ಸರ್ವಾಘಷ್ಟಿಮಿರಾಪಹಃ ।
ಸಬಾಹ್ಯಾಭ್ಯಾಂತರಂ ಜೋತಿರ್ದೀಪೋಯಂ ಪ್ರತಿಗ್ರಹ್ಯತಾಂ ॥
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ । ಕರ್ಪೂರದೀಪಂ ಸಮರ್ಪಯಾಮಿ ॥

## ಮಂಗಲಾರತಿ

ಜಯದೇವಿ ಸಮಸ್ತೇಭ್ಯಂ ಜಯಭಕ್ತವರಪ್ರದೇ ।
ಜಯತರಣೀ ತೇಜಾಂಗಿ ಮಂಗಲೆ ಸರ್ವಮಂಗಲೆ ।
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ ಮಂಗಲಾರತಿ ಸಮರ್ಪಯಾಮಿ ॥

## ಪುಷ್ಪಾಂಜಲಿ

ಚಂಪಕೈಃ ಶತಪತ್ರೈಶ್ಚ ಕಲ್ಹಾರೈಃಕರವೀರಕೈಃ ।
ಪಾಟಲೈರ್ಬಕುಲೈರ್ಯುಕ್ತಂ ಗೃಹಾಣ ಕುಸುಮಾಂಜಲಿಂ ॥
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ । ಪುಷ್ಪಾಂಜಲಿಂ ಸಮರ್ಪಯಾಮಿ ॥

## ನಮಸ್ಕಾರ

ನತಾಸ್ಮಿ ತ್ರಿಜಗದ್ವಂದ್ಯೆ ನಮಸ್ತೇ ಲೋಕನಾಯಕಿ ।
ನಮಸ್ತೇ ವಿಶ್ವಜನನಿ ಮಹಾಲಕ್ಷ್ಮ್ಯೈ ನಮೋಸ್ತುತೇ ॥
ಓಂ ಹ್ರೀಂ ಮಹಾಲಕ್ಷ್ಮ್ಯೈ ನಮಃ। ನಮಸ್ಕಾರಾನ್ ಸಮರ್ಪಯಾಮಿ॥

ಈ ಪ್ರಕಾರ ಮೂವತ್ತೆರಡು ಮಂತ್ರೋಪಚಾರಗಳಿಂದ
ಮಹಾಲಕ್ಷ್ಮೀ ಪೂಜೆಯನ್ನು ಮಾಡಬೇಕು.

---

  

# ಗಣೇಶ ಪೂಜಾ

ಪೂಜಾ ಸ್ಥಾನದಲ್ಲಿ ಗಣೇಶ ಮೂರ್ತಿ (ಫೋಟೊ) ಸ್ಥಾಪಿಸಿ ಸಂಕಲ್ಪ ಹೇಳಿ ಶ್ರೀವರಸಿದ್ಧಿ ಗಣೇಶ ಮೂರ್ತಿಯನ್ನು ಪೂಜಿಸಬೇಕು.

## ಸಂಕಲ್ಪ

ಶ್ರೀ ಪ್ರವರ್ತಮಾನ ವ್ಯವಹಾರಿಕೆ○ ನಾಮಸಂವತ್ಸರೆ ದಕ್ಷಿಣಾಯನೆ ಶರದೃತೌ ಕಾರ್ತೀಕಮಾಸೆ ಶುಕ್ಲಪಕ್ಷೆ ಪ್ರತಿಪದತಿಥೌ● ವಾಸರೇ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ಅಸ್ಮಾಕಂ ಸಹಕುಟುಂಬಾನಾಂ ಸ್ತ್ರೀಪುತ್ರ ಪೌತ್ರ ಧನವಿದ್ಯಾ ಜಯಕೀರ್ತಿ ಆಯುರಾರೋಗ್ಯಾದ್ಯಭಿಷ್ಟ ಸಕಲೈಶ್ವರ್ಯಾಭಿವೃದ್ಧ್ಯರ್ಥಂ ಸಕಲ ಕಾರ್ಯೇಷು ನಿರ್ವಿಘ್ನತಾ ಸಿದ್ಧ್ಯರ್ಥಂ ಶ್ರೀವರಸಿದ್ಧಿನಾಯಕ ದೇವತಾ ಪ್ರೀತ್ಯರ್ಥಂ ಶ್ರೀ ಗಣೇಶಪೂಜಾಂ ಕರಿಷ್ಯೆ.

## ಅಭಿಷೇಕ

ನಾನಾತೀರ್ಥಾಹೃತಂ ಯತ್ನಾತ್ತೋಯಶುದ್ಧ ಮಯಾಕೃತಂ ।
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಸ್ವೀಕುರುಷ್ವ ದಯಾನಿಧೇ॥
ಶ್ರೀ ಸಿದ್ಧಿವಿನಾಯಕಾಯನಮಃ । ಶುದ್ಧೋದಕಸ್ನಾನಂ ಸಮರ್ಪಯಾಮಿ ॥

---

○ ಈ ಗುರ್ತು ಇರುವಲ್ಲಿ ಸಂವತ್ಸರದ ಹೆಸರು ಅನ್ನಬೇಕು.

● ಈ ಗುರ್ತು ಇರುವಲ್ಲಿ ವಾರದ ಹೆಸರು ಅನ್ನಬೇಕು.

## ವಸ್ತ್ರಂ

ರಕ್ತವಸ್ತ್ರಂಯುಗಂದೇವ ದೇವತಾರ್ಹಂ ಸುಮಂಗಲಂ ।
ಸರ್ವಪ್ರದ ಗೃಹಾಣೇದಂ ಲಂಬೋದರ ಹರಾತ್ಮಜ ॥
ಶ್ರೀ ಸಿದ್ಧಿವಿನಾಯಕಾಯನಮಃ। ವಸ್ತ್ರಯುಗ್ಮಂ ಸಮರ್ಪಯಾಮಿ॥

## ಯಜ್ಞೋಪವೀತಂ

ರಾಜತಂ ಬ್ರಹ್ಮಸೂತ್ರಂಚ ಕಾಂಚನಸ್ಯೋತ್ತರೀಯಕಂ ।
ವಿನಾಯಕ ನಮಸ್ತೇಂಸ್ತು ಗೃಹಾಣ ಸುರವಂದಿತ ॥
ಶ್ರೀಸಿದ್ಧಿವಿನಾಯಕಾಯನಮಃ।ಯಜ್ಞೋಪವೀತಂಸಮರ್ಪಯಾಮಿ।

## ವಿಭೂತಿ

ಪಾಪಿಷ್ಟನಪಿ ಪಾಪಾನಾಂ ನರಕಂದುಃಖಮೇವಚ ।
ಕಾಮಂಭಸ್ಮಿ ಕರೋಷಿತ್ವಂ ಗಣೇಶ ಭಸ್ಮಧಾರ್ಯತಾಂ ॥
ಶ್ರೀ ಸಿದ್ಧಿವಿನಾಯಕಾಯನಮಃ । ಭಸ್ಮಂ ಸಮರ್ಪಯಾಮಿ ॥

## ಗಂಧಂ

ಕಸ್ತೂರೀ ರೋಚನಾ ಚಂದ್ರ ಕುಂಕುಮೈಶ್ಚ ಸಮನ್ವಿತಂ ।
ವಿಲೇಪನಂ ಸುರಶ್ರೇಷ್ಠ ಚಂದನಂ ಪ್ರತಿಗೃಹ್ಯತಾಂ ॥
ಶ್ರೀ ಸಿದ್ಧಿವಿನಾಯಕಾಯನಮಃ । ಗಂಧಂ ಸಮರ್ಪಯಾಮಿ॥

## ಅಕ್ಷತಾಂ

ರಕ್ತಾಕ್ಷತಾಂಶ್ಚ ದೇವೇಶ ಗೃಹಾಣ ದ್ವಿರದಾನನ ।
ಲಲಾಟಪಟಲೇ ಚಂದ್ರಸ್ತಸ್ಯೋಪರಿ ವಿಧಾರ್ಯತಾಂ ॥
ಶ್ರೀಸಿದ್ಧಿವಿನಾಯಕಾಯನಮಃ।ರಕ್ತಾಕ್ಷತಾನ್‌ಸಮರ್ಪಯಾಮಿ ॥

## ಸಿಂದೂರಂ (ಕುಂಕುಮ)

ಉದ್ಯದ್ಭಾಸ್ಕರ ಸಂಕಾಶಂ ಸಂಧ್ಯಾವದರುಣಂ ಪ್ರಭೋ ।
ವೀರಾಲಂಕರಣಂ ದಿವ್ಯಂ ಸಿಂದೂರಂ ಪ್ರತಿಗೃಹ್ಯತಾಂ ॥

ಶ್ರೀ ಸಿದ್ಧಿವಿನಾಯಕಾಯನಮಃ ಸಿಂದೂರಂ ಸಮರ್ಪಯಾಮಿ ||

## ಪತ್ರಪುಷ್ಪಂ

ಸುಗಂಧೀನಿ ಸುಪುಷ್ಪಾಣಿ ಪಂತ್ರಾಣಾಂಚೈಕವಿಂಶತಿಃ |
ಮಯಾ ಹೃತಾನಿ ಪೂಜಾರ್ಥಂ ಗೃಹಾಣ ಗಣನಾಯಕ ||
ಶ್ರೀಸಿದ್ಧಿವಿನಾಯಕಾಯನಮಃ | ನಾನಾವಿಧ ಪತ್ರಪುಷ್ಪಾಣಿ ಸಮರ್ಪಯಾಮಿ ||

## ಧೂಪಂ

ದಶಾಂಗಂ ಗುಗ್ಗಲಂ ದೀಪಂ ಸುಗಂಧಂಚ ಮನೋಹರಂ |
ಗೃಹಾಣ ದೇವದೇವೇಶ ಉಮಾಸುತ ನಮೋಸ್ತುತೇ ||
ಶ್ರೀ ಸಿದ್ಧಿವಿನಾಯಕಾಯನಮಃ | ಧೂಪಂ ಸಮರ್ಪಯಾಮಿ ||

## ದೀಪಂ

ಸರ್ವಜ್ಞ ಸರ್ವಲೋಕೇಶ ತ್ರೈಲೋಕ್ಯತಿಮಿರಾಪಹ |
ಗೃಹಾಣ ಮಾಂಗಲಂ ದೀಪಂ ರುದ್ರಪ್ರಿಯ ನಮೋಸ್ತುತೇ ||
ಶ್ರೀ ಸಿದ್ಧಿವಿನಾಯಕಾಯನಮಃ | ದೀಪಂ ಸಮರ್ಪಯಾಮಿ ||

## ನೈವೇದ್ಯಂ

ನೈವೇದ್ಯಂ ಷಡ್ರಸೋಪೇತಂ ನಾನಾಭಕ್ಷ್ಯ ಸಮನ್ವಿತಂ |
ದಧಿಕ್ಷೀರ ಘೃತೋಪೇತಂ ಗೃಹಾಣ ಗಣನಾಯಕ ||
ಶ್ರೀ ಸಿದ್ಧಿವಿನಾಯಕಾಯನಮಃ | ನೈವೇದ್ಯಂ ಸಮರ್ಪಯಾಮಿ ||

## ಪಾನೀಯಂ (ನೀರು)

ಏಲೋಶೀರ ಲವಂಗಾದಿ ಕರ್ಪೂರ ಪರಿವಾಸಿತಂ |
ಪ್ರಾಶನಾರ್ಥಂ ಕೃತಂತೋಯಂ ಗೃಹಾಣ ಪರಮಾತ್ಮಜಾ ||
ಶ್ರೀ ಸಿದ್ಧಿವಿನಾಯಕಾಯನಮಃ | ಪಾನೀಯಾರ್ಥೆ ಉದಕಂ ಸಮರ್ಪಯಾಮಿ ||

## ತಾಂಬೂಲಂ

ಪೂಗೀಫಲಂ ಮಹದ್ದಿವ್ಯಂ ನಾಗವಲ್ಯಾ ಸಮನ್ವಿತಂ ।
ಕರ್ಪೂರೈಲಾ ಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ ।
ಶ್ರೀ ಸಿದ್ಧಿವಿನಾಯಕಾಯನಮಃ । ತಾಂಬೂಲಂ ಸಮರ್ಪಯಾಮಿ॥

## ನೀರಾಜನಂ (ಮಂಗಲಾರತಿ)

ಚಂದ್ರಾದಿತ್ಯೌಚಧರಣೀ ವಿದ್ಯುದಗ್ನಿಸ್ತಥೈವಚ ।
ತ್ವಮೇವ ಸರ್ವತೇಜಾಂಸಿ ಆರ್ತಿಕ್ಯಂ ಪ್ರತಿಗೃಹ್ಯತಾಂ ॥
ಕರ್ಪೂರ ನಿರ್ಮಿತಂ ರಮ್ಯಂ ಸ್ವರ್ಣಪಾತ್ರೇ ನಿವೇಶಿತಂ ।
ನೀರಾಜನಂ ಗೃಹಾಣೇದಂ ಚಂದ್ರಕಾಂತಿ ಹರಂ ಪ್ರಭೋ॥
ಶ್ರೀ ಸಿದ್ಧಿವಿನಾಯಕಾಯನಮಃ।ನೀರಾಜನಂ ಸಮರ್ಪಯಾಮಿ ॥

## ಪುಷ್ಪಾಂಜಲಿಂ

ಮಾಲತೀ ಮಲ್ಲಿಕಾ ಜಾಜೀ ಪದ್ಮ ಮಂದಾರ ಚಂಪಕೈಃ ।
ಭಕ್ತ್ಯಾರ್ಪಿತಂ ಮಯಾದೇವ ಗೃಹಾಣ ಕುಸುಮಾಂಜಲಿಂ ॥
ಶ್ರೀ ಸಿದ್ಧಿವಿನಾಯಕಾಯನಮಃ । ಪುಷ್ಪಾಂಜಲಿಂ ಸಮರ್ಪಯಾಮಿ॥

## ನಮಸ್ಕಾರಾಃ

ನಮಸ್ತೇ ವಿಘ್ನಸಂಹರ್ತ್ರೇ ನಮಸ್ತೇ ಈಪ್ಸಿತಪ್ರದ ।
ನಮಸ್ತೇ ದೇವದೇವೇಶ ನಮಸ್ತೇ ಗಣನಾಯಕ ॥
ಶ್ರೀ ಸಿದ್ಧಿವಿನಾಯಕಾಯನಮಃ। ನಮಸ್ಕಾರಾನ್ ಸಮರ್ಪಯಾಮಿ

ಈ ಪ್ರಕಾರ ಹದಿನಾರು ಮಂತ್ರೋಪಚಾರಗಳಿಂದ
ಶ್ರೀವರ ಸಿದ್ಧಿಗಣೇಶಪೂಜೆಯನ್ನು ಮಾಡಬೇಕು.



# ಶ್ರೀ ಸರಸ್ವತೀ ಪೂಜಾ

ಶ್ರೀಮನ್ಮಹಾ ಕಾರ್ತೀಕಮಾಸದ ಪ್ರತಿಪದದಿವಸ ವ್ಯಾಪಾರಸ್ಥರು ತಮ್ಮ ಖಾತೆ ಕಿರ್ದಿಗಳ ಪ್ರಥಮದಲ್ಲಿ 'ದಶಾವರಣದೇವತಾ ಯಂತ್ರವನ್ನು, ಕೆಂಪುಮಸಿಯಿಂದ ಬರೆದು ಅದರ ಮೇಲುಗಡೆಯಲ್ಲಿ 'ಸರಸ್ವತಿಮೂರ್ತಿ ಯನ್ನು ಕೆಳಗೆ ಬರೆದಂತೆ ಬರೆಯಬೇಕು.



# ಶ್ರೀ ಮಹಾಲಕ್ಷ್ಮೀ ಪೂಜಾ





## ದಶಾವರಣ ದೇವತಾಯಂತ್ರ

| | | |
|---|---|---|
| ಓಂಗೌರ್ಯೈ ಸಹ ರುದ್ರಾಯನಮಃ ೫ | ಓಂಸ್ವರಯಾ ಸಹವಿರಂಚಯೇ ನಮಃ ೪ | ಓಂಲಕ್ಷ್ಮ್ಯೈ ಸಹಹೃಷೀಕೇಶಾಯನಮಃ ೬ |
| ಓಂ ಐಂ ಮಹಾಕಾಳ್ಯೈ ನಮಃ ೧ | ಓಂಹ್ರೀಂ ಮಹಾಲಕ್ಷ್ಮ್ಯೈ ನಮಃ ೨ | ಓಂಕ್ಲೀಂ ಮಹಾಸರಸ್ವತ್ಯೈ ನಮಃ ೩ |
| ಓಂ ಅಷ್ಟಭುಜಾಯೈ ನಮಃ ೯ | ಓಂ ಅಷ್ಟಾದಶಭುಜಾಯೈ ನಮಃ ೭ | ಓಂದಶಾನನಾಯೈ ನಮಃ ೮ |

| | | | |
|---|---|---|---|
| ಮಹಿಷಾಯ ನಮಃ ೧೦ | ಸಿಂಹಾಯ ನಮಃ ೧೧ | ಕಾಲಾಯ ನಮಃ ೧೨ | ಮೃತ್ಯವೇ ನಮಃ ೧೩ |

ಈ ಪ್ರಕಾರ ಬರೆದು ಪೂಜಾಸ್ಥಾನದಲ್ಲಿಟ್ಟು ಹಿಂದೆಬರೆದ 'ಮಹಾಲಕ್ಷ್ಮೀ ಪೂಜೆಯಂತೆಯೇ ಮೂವತ್ತೆರಡು ಮಂತ್ರೋಪಚಾರಗಳಿಂದಪೂಜಿಸಬೇಕು

ಮಂತ್ರಗಳನ್ನು ಹೇಳುವಾಗ್ಯೆ ಮಾತ್ರ 'ಓಂ ಹ್ರೀಂ ಮಹಾ ಲಕ್ಷ್ಮ್ಯೈ ನಮಃ' ಎಂಬುದಕ್ಕೆ ಬದಲಾಗಿ 'ಓಂ ಕ್ಲೀಂ ಮಹಾಸರಸ್ವತ್ಯೈ ನಮಃ' ಎಂದು ನುಡಿಯುತ್ತ ಪೂಜಿಸಬೇಕು.

## ಸಂಕಲ್ಪ

ಶ್ರೀ ಪ್ರವರ್ತಮಾನೆ ವ್ಯವಹಾರಿಕೆ ○ ನಾಮ ಸಂವತ್ಸರೆ ದಕ್ಷಿಣಾಯನೆ ಶರದೃತೌ ಕಾರ್ತಿಕಮಾಸೆ ಶುಕ್ಲಪಕ್ಷೆ ಪ್ರತಿಪದ ತಿಥೌ ● ವಾಸರೆ ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ಅಸ್ಮಾಕಂ ಸಹಕುಟುಂಬಾನಾಂ ಸ್ತ್ರೀಪುತ್ರ ಪೌತ್ರ ಧನ ವಿದ್ಯಾ ಜಯ ಕೀರ್ತಿ ಆಯುರಾರೋಗ್ಯಾದ್ಯಭಿಷ್ಟ ಸಕಲೈಶ್ವರ್ಯಾಭಿವೃದ್ಧ್ಯರ್ಥಂ ಸಕಲಕಾರ್ಯೇಷು ಸಿದ್ಧ್ಯರ್ಥಂ ಶ್ರೀಮಹಾಸರಸ್ವತೀ ಪ್ರೀತ್ಯರ್ಥಂಚ ಯಥಾಮಿಲಿತೋಪಚಾರೈಃ ಶ್ರೀಮಹಾಸರಸ್ವತೀ ಪೂಜಾಂಕರಿಷ್ಯೇ.

ಹೀಗೆಂದು ಸಂಕಲ್ಪವನ್ನು ಹೇಳಿ ಘಂಟಾನಾದ ಮಾಡಬೇಕು. ಬಳಿಕ ಮೇಲೆ ಹೇಳಿದಂತೆ ಮಂತ್ರವನ್ನು ನುಡಿಯುತ್ತ ಪೂಜಿಸಿ ಮಂಗಲಾರತಿಯನ್ನು ಹೇಳಿ ಪೂಜಾ ಸಂಪೂರ್ಣ ಮಾಡಬೇಕು.

## ಮಂಗಲಾರತಿ ಪದ

ಜಯಾಜಯ ಜನ್ಮಜರೆ ದೂರಾ । ಭಯಾ ಭವಬಂಧ ಪರಿಹಾರಾ ॥ಪಲ್ಲ॥ ಸದಾಶಿವ ತತ್ವದಾಧಾರಾ। ಸುಧಾಕರ ಚೂಡಗಂಭೀರಾ ॥ ೧ ॥ ಮಂದರ ನಿವಾಸ ಸುಂದರಾ । ಹೊಂದಿ ನಿಜಾನಂದಸಾಗರಾ ॥ ೨ ॥ ತಾನೆ ತಾನಾವ ಗುರುರಾಯಾ ಮಾನವಮೇಯ । ದೂರರುದ್ರಾಯಾ ॥ ೩ ॥

ಆರತಿಯನುಬೆಳಗುವೆನು ಧೀರೆಗೌರಿಗೆ ॥ ಮಾರಹರನ ಮಡದಿಪುಣ್ಯಕಾರಿದೇವಿಗೇ ॥ಪಲ್ಲ॥ ಮೂರುಜಗದಜನನಿಚಾರು ನಿಗಮದೂರಿಗೆ । ಘೋರದುರಿತವೈರಿಯೆನಿಸಿ ಮೆರೆವತಾಯಿಗೇ ॥ ೧ ॥ ಅನ್ನಪೂರ್ಣೆಯಸ್ವರೂಪೆಯನ್ನಮಾತೆಗೆ । ಬನ್ನಬಡುವಜನ್ಮವಿಲ್ಲಧನ್ಯಮಾಯಿಗೇ ॥ ೨ ॥ ವಿದ್ಯಸದನೆ ಬುದ್ಧಿಕೊಡುವ ಶುದ್ಧಶಾಂತಿಗೆ । ಸಿದ್ಧಿಗೊಡೆಯ ರುದ್ರನನ್ನು ಸಲಹುಖ್ಯಾತಿಗೆ ॥ ೩ ॥

---

# ವಿದ್ಯಾಭ್ಯಾಸಕರಿಗೆ ಬಹು ಉಪಯೋಗವುಳ್ಳ
# ವಿದ್ಯಾವರ್ಧಿನಿ

## ಪ್ರಕಟನೆ

ಶ್ರೀ ಶುದ್ಧ ವಿದ್ಯಾತತ್ವದ ದಶಪಂಚ ಮಾತೃಕಾರುದ್ರ ನಾಮಾವಳಿಯು

ಇದು ವಿದ್ಯಾಭ್ಯಾಸ ಮಾಡತಕ್ಕವರಿಗೆಲ್ಲರಿಗೂ ಬಹು ಉಪಯೋಗವುಳ್ಳದ್ದು. ಇದರಲ್ಲಿ ಐವತ್ತು ಮಾತೃಕಾರುದ್ರರ ನಾಮಗಳು ಮತ್ತು ಅವರ ವಿಶೇಷಣಪರವಾದ ನಾಲ್ಕು ನಾಮಗಳು ಕೂಡಿ ೫೪ ನಾಮಾವಳಿಗಳು ಇರುವವು. ಇವುಗಳನ್ನು ಎರಡುಸಾರಿ ಪಠಿಸಲು ಜಪಸಂಖ್ಯಾ ನಿಯಮದಂತೆ ೧೦೮ ನಾಮಾವಳಿಗಳನ್ನು ನುಡಿದಂತಾಗುವದು. ಹೀಗೆ ದಿನಾಲೂ ಪ್ರಾತಃಕಾಲದಲ್ಲಿ ಪಠಿಸುತ್ತಿರುವವರಿಗೆ ವಿದ್ಯೆಯು ಬಹು ಬೇಗ ಸಾಧ್ಯವಾಗುವದಕ್ಕೆ ಸಂದೇಹವಿಲ್ಲ

ಸಾಕ್ಷಿ 'ಶುದ್ಧ ವಿದ್ಯಾತತ್ವದೊಳಗೆ ದಶಪಂಚ ಮಾತೃಕಾ ಮೂರ್ತಿಗಳಾದ ರುದ್ರರು, ತಮ್ಮ ಶಕ್ತಿಯರೊಡಗೂಡಿ ನಿಜಧ್ಯಾನ ನಾಮೋಚ್ಚಾರಣ ಮಾತ್ರದಿಂ, ಸರ್ವಸಿದ್ಧಿ ಪ್ರದಾಯಕರಾಗಿರ್ಪರೆಂದಿರುವದು' ಈ ಪ್ರಮಾಣದಿಂದ ನೋಡಲು, ದಿನಾಲೂ ಈ ನಾಮಾವಳಿಗಳನ್ನು ಪಠಿಸುತ್ತಿರುವವರಿಗೆ ಸರ್ವಕಾರ್ಯ ಸಿದ್ಧಿಯಾಗುವವು. ಮತ್ತು ವಿದ್ಯಾರ್ಥಿಗಳಿಗೆ ವಿದ್ಯವರ್ಧನವಾಗಲಿಕ್ಕೆ ಏನೂ ಸಂಶಯವಿಲ್ಲ. ಆದಕಾರಣ 'ವಿದ್ಯವರ್ಧಿನಿ' ಎಂಬ ಹೆಸರನ್ನಿಟ್ಟು ಬರೆಯೋಣವಾಗಿದೆ. ಅಕ್ಷರ (ಮಾತೃಕಾ) ಬೋಧಕರಾದ ವಿದ್ಯಾಗುರುಗಳು ಅಂದರೆ- ಮಾಸ್ತರರು ತಮ್ಮ ವಿದ್ಯಾರ್ಥಿಗಳಿಗೆ ಮೇಲೆ ಬರೆದಿರುವಂತೆ ೧೦೮ ನಾಮಾವಳಿಗಳನ್ನು ದಿನಾಲೂ ಪಠಿಸಲಿಕ್ಕೆ ಚನ್ನಾಗಿ ತಿಳುಹಿಸಿ ಅವರಿಗೆ ವಿದ್ಯಾವರ್ಧನ ಮಾಡಲಿಕ್ಕೆ ತಾವು ಕೇವಲ 'ಮಾತೃಕಾ ರುದ್ರಮೂರ್ತಿಗಳಂತೆಯೇ, ಫಲಪ್ರದಾಯಕರಾಗಿರುವರೆಂದು, ಪೂರ್ಣ ನಂಬಿರುವೆವು

## ಶ್ರೀ ಶುದ್ಧ ವಿದ್ಯಾತತ್ವದ ದಶಪಂಚ ಮಾತೃಕಾ ರುದ್ರರ ನಾಮಾವಳಿಗಳು

೧ ಅಕಾರಮೂರ್ತಿ, ಪೂರ್ಣೋದರೀಪತಿ ಶ್ರೀಕಂಠ ರುದ್ರಾಯನಮಃ

೨ ಆಕಾರಮೂರ್ತಿ, ವಿರಜಾಪತಿ ಅನಂತ ರುದ್ರಾಯನಮಃ

೩ ಇಕಾರಮೂರ್ತಿ, ಶಾಲ್ಮಲೀಪತಿ ಸೂಕ್ಷ್ಮ ರುದ್ರಾಯನಮಃ
೪ ಈಕಾರಮೂರ್ತಿ, ಲೋಲಾಕ್ಷೀಪತಿ ತ್ರಿಮೂರ್ತಿ ರುದ್ರಾಯನಮಃ
೫ ಉಕಾರಮೂರ್ತಿ, ವರ್ತುಳಾಕ್ಷೀಪತಿ ಅಮರೇಶ್ವರ ರುದ್ರಾಯನಮಃ
೬ ಊಕಾರಮೂರ್ತಿ, ದೀರ್ಘನಾಶಿಕಾಪತಿ ಅರ್ಘೀಶ ರುದ್ರಾಯನಮಃ
೭ ಋಕಾರಮೂರ್ತಿ ದೀರ್ಘಮುಖೀಪತಿ ಭಾರಭೂತಿ ರುದ್ರಾಯನಮಃ
೮ ೠಕಾರಮೂರ್ತಿ ಗೋಮುಖೀಪತಿ ತಿಥೀಶ ರುದ್ರಾಯನಮಃ
೯ ಌಕಾರಮೂರ್ತಿ ದೀರ್ಘಜಿಹ್ವಾಪತಿ ಸ್ಥಾಣು ರುದ್ರಾಯನಮಃ
೧೦ ೡಕಾರಮೂರ್ತಿ, ಕುಂಡೋದರೀಪತಿ ಕುಹರ ರುದ್ರಾಯನಮಃ
೧೧ ಎಕಾರಮೂರ್ತಿ, ಅರ್ಧಕೇಶೀಪತಿ ಘಂಟೀಶ ರುದ್ರಾಯನಮಃ
೧೨ ಐಕಾರಮೂರ್ತಿ, ವಿಕೃತಮುಖೀಪತಿ ಭೌತಿಕ ರುದ್ರಾಯನಮಃ
೧೩ ಒಕಾರಮೂರ್ತಿ ಜ್ವಾಲಾಮುಖೀಪತಿ ಸದ್ಯೋಜಾತರುದ್ರಾಯನಮಃ
೧೪ ಔಕಾರಮೂರ್ತಿ, ಉಲ್ಕಮುಖೀಪತಿಅನುಗ್ರಹೇಶ್ವರ ರುದ್ರಾಯನಮಃ
೧೫ ಅಂಕಾರಮೂರ್ತಿ, ಶ್ರೀಮುಖೀಪತಿ ಅಕ್ರೂರ ರುದ್ರಾಯನಮಃ
೧೬ ಅಃಕಾರಮೂರ್ತಿ, ವಿದ್ಯಾಮುಖೀಪತಿ ಮಹಾಸೇನ ರುದ್ರಾಯನಮಃ
೧೭ ಕಕಾರಮೂರ್ತಿ, ಮಹಾ ಕಾಳೀಪತಿ ಕ್ರೋಧೀಶ ರುದ್ರಾಯನಮಃ
೧೮ ಖಕಾರಮೂರ್ತಿ, ಸರಸ್ವತೀಪತಿ ಚಂಡೇಶ ರುದ್ರಾಯನಮಃ
೧೯ ಗಕಾರಮೂರ್ತಿ, ಸರ್ವಸಿದ್ಧಿ ಸಮನ್ವಿತಾಪತಿ ಪಂಚಾಂತಕರುದ್ರಾಯ [ನಮಃ
೨೦ ಘಕಾರಮೂರ್ತಿ, ಗೌರೀಪತಿಶಿಲೋತ್ತಮ ರುದ್ರಾಯನಮಃ
೨೧ ಙಕಾರಮೂರ್ತಿ, ತ್ರಿಲೋಕವಿದ್ಯಾಪತಿ ಏಕ ರುದ್ರಾಯನಮಃ
೨೨ ಚಕಾರಮೂರ್ತಿ, ಮಂತ್ರಶಕ್ತೀಪತಿ ಕೂರ್ಮ ರುದ್ರಾಯನಮಃ
೨೩ ಛಕಾರಮೂರ್ತಿ, ಆತ್ಮಶಕ್ತೀಪತಿ ಏಕನೇತ್ರ ರುದ್ರಾಯನಮಃ
೨೪ ಜಕಾರಮೂರ್ತಿ, ಭೂತಮಾತಾಪತಿ ಚತುರಾನನ ರುದ್ರಾಯನಮಃ
೨೫ ಝಕಾರಮೂರ್ತಿ, ಲಂಬೋದರೀಪತಿ ಅಜೇಶ ರುದ್ರಾಯನಮಃ
೨೬ ಞಕಾರಮೂರ್ತಿ, ದ್ರಾವಿಣೀಪತಿ ಶರ್ವ ರುದ್ರಾಯನಮಃ
೨೭ ಟಕಾರಮೂರ್ತಿ, ನಗರೀಪತಿ ಸೋಮೇಶ್ವರ ರುದ್ರಾಯನಮಃ
೨೮ ಠಕಾರಮೂರ್ತಿ, ಖೇಚರೀಪತಿ ಲಾಂಗುಲಿ ರುದ್ರಾಯನಮಃ
೨೯ ಡಕಾರಮೂರ್ತಿ, ಮಂಜರೀಪತಿ ದಾರುಕ ರುದ್ರಾಯನಮಃ

೩೦ ಢಕಾರಮೂರ್ತಿಸುರೂಪಿಣೀಪತಿಅರ್ಧನಾರೀಶ್ವರರುದ್ರಾಯನಮಃ
೩೧ ಣಕಾರಮೂರ್ತಿ, ಕಾಲೋದರೀಪತಿ ಉಮಾಕಾಂತರುದ್ರಾಯ
೩೨ ತಕಾರಮೂರ್ತಿ, ಪೂತಿನೀಪತಿ ಆಷಾಡಿರುದ್ರಾಯನಮಃ[ನಮಃ
೩೩ ಥಕಾರಮೂರ್ತಿ, ಭದ್ರಕಾಳೀಪತಿ ಡಿಂಡಿ ರುದ್ರಾಯನಮಃ
೩೪ ದಕಾರಮೂರ್ತಿ, ಯೋಗಣೀಪತಿ ಅತ್ರಿ ರುದ್ರಾಯನಮಃ
೩೫ ಧಕಾರಮೂರ್ತಿ, ಶಂಖಿನೀಪತಿ ಮೀನರುದ್ರಾಯನಮಃ
೩೬ ನಕಾರಮೂರ್ತಿ, ಘರ್ಜಿನೀಪತಿ ಮೇಷ ರುದ್ರಾಯನಮಃ
೩೭ ಪಕಾರಮೂರ್ತಿ, ಕಾಳರಾತ್ರೀಪತಿ ಲೋಹಿತರುದ್ರಾಯನಮಃ
೩೮ ಫಕಾರಮೂರ್ತಿ, ಕೂರ್ಧನ್ಯಾಪತಿ ಶಿಖಿರುದ್ರಾಯನಮಃ
೩೯ ಬಕಾರಮೂರ್ತಿ, ಕಪರ್ದಿನೀಪತಿ ಸ್ಥಲಗಂಡರುದ್ರಾಯನಮಃ
೪೦ ಭಕಾರಮೂರ್ತಿ, ವಾಂಗ್ಮಯಾಪತಿ ದ್ವಿಗಂಡರುದ್ರಾಯನಮಃ
೪೧ ಮಕಾರಮೂರ್ತಿ, ಜಯಾಪತಿ ಮಹಾಕಾಳರುದ್ರಾಯನಮಃ
೪೨ ಯಕಾರಮೂರ್ತಿ. ಸುಮುಖೇಶ್ವರೀಪತಿ ವಾಲಿರುದ್ರಾಯನಮಃ
೪೩ ರಕಾರಮೂರ್ತಿ, ರೇವತೀಪತಿ ಭುಜಂಗೇಶರುದ್ರಾಯನಮಃ
೪೪ ಲಕಾರಮೂರ್ತಿ, ಮಾಧವೀಪತಿ ಪಿನಾಕೇಶ ರುದ್ರಾಯನಮಃ
೪೫ ವಕಾರಮೂರ್ತಿ, ವಾರುಣೀಪತಿ ಖಡ್ಗೇಶ ರುದ್ರಾಯನಮಃ
೪೬ ಶಕಾರಮೂರ್ತಿರಕ್ಷೋವಧಾರಿಣೀಪತಿಬಕಶ್ವೇತರುದ್ರಾಯನಮ
೪೭ ಷಕಾರಮೂರ್ತಿ, ಸಹಜಾಪತಿ ಭೃಗು ರುದ್ರಾಯನಮಃ
೪೮ ಸಕಾರಮೂರ್ತಿ, ಲಕ್ಷ್ಮೀಪತಿ ಲಕುಳೀಶರುದ್ರಾಯನಮಃ
೪೯ ಹಕಾರಮೂರ್ತಿ, ವ್ಯಾಪಿನೀಪತಿ ಶಿವ ರುದ್ರಾಯನಮಃ
೫೦ ಕ್ಷಕಾರಮೂರ್ತಿಮಾಯಾನ್ವಿತಾಪತಿಸಂವರ್ತಕರುದ್ರಾಯನಮಃ
೫೧ ಇತಿ ಪಂಚಾಶತ್, ಮಾತೃಕಾ ರುದ್ರಾಯನಮಃ
೫೨ ರಕ್ತಾಂಗಕಾಂತಿ, ಮಾತೃಕಾ ರುದ್ರಾಯನಮಃ
೫೩ ಶೂಲಕಪಾಲಧರಹಸ್ತ ಮಾತೃಕಾ ರುದ್ರಾಯನಮಃ
೫೪ ನಿಜಮೂರ್ತಿಧ್ಯಾನನಾಮೋಚ್ಚಾರ ಮಾತ್ರೇಣ ಸರ್ವಸಿದ್ಧಿಪ್ರದ
ಮಾತೃಕಾ ರುದ್ರಾಯನಮಃ

ವಿದ್ಯಾರ್ಥಿಗಳು ಈ ನಾಮಾವಳಿಗಳನ್ನು ದಿನಾಲೂ ಎರಡಾವರ್ತಿ ಪಠಿಸಬೇಕು

# ಇಂದ್ರಜಾಲ ವಿದ್ಯೆ

## ಮಂತ್ರಸಿದ್ಧಿಯ ಕ್ರಮ

(೧) ಇಂದ್ರಜಾಲಕ್ಕೆ ಮೊದಲು ಸಿದ್ಧಿಯು ಬೇಕಾಗುವದು. ಆದ್ದರಿಂದ "ರಕ್ಷಾ ಮಂತ್ರವಿಲ್ಲದೆ" ಶಿದ್ಧಿಯಾಗುವದಿಲ್ಲ ಸಕಲ ಶಿದ್ಧಿಯನ್ನುಂಟು ಮಾಡುವ "ರಕ್ಷಾಮಂತ್ರವನ್ನು ಕೆಳಗೆ ವಿವರಿಸಿದದೆ ಅದನ್ನು ತಿಳಿದು ಶಿದ್ಧಿಯನ್ನು ಮಾಡಿ ಕೊಂಡು ಸಾಧಿಸಿಕೊಳ್ಳಬೇಕು.

(೨) "ಓಂ ಪರಬ್ರಹ್ಮ ಪರಮಾತ್ಮನೇ ಮಮಶರೀರಂಪಾಹಿ ರಕ್ಷಾಕುರುಕುರು ಸ್ವಹಾ,, ಎಂಬ ಈ ರಕ್ಷಾ ಮಂತ್ರವನ್ನು ೧೦೮ ಸಾರೆ ಏಕಾಂತಸ್ಥಳದಲ್ಲಿ ಶುಚಿರ್ಭೂತರಾಗಿ ಕುಳಿತು ಜಪಿಸಲು ಸಿದ್ಧಿಯಾಗುವದು. ಈ ಸಿದ್ಧಿಯಾದ ಮಂತ್ರವನ್ನು ಯಾವ ಕಾರ್ಯ ಕ್ಕಾದರೂ ಉಪಯೋಗಿಸಿಕೊಳ್ಳಬೇಕು.

## ತ್ರಿಲೋಹದ ತಗಡಿನ ಕ್ರಮ

ಹತ್ತು ಭಾಗ ಬಂಗಾರ, ಹನ್ನೆರಡುಭಾಗ ತಾಂಬ್ರ, ಹದಿನಾ ರುಭಾಗ ಕಂಚು, ಈ ಮೂರೂ ಧಾತುಗಳನ್ನು ಕೂಡಿ ಕರಗಿಸಿ ತಗಡು ತಯಾರ ಮಾಡಿದ್ದು ತ್ರಿಲೋಹದ ತಗಡು ಎನಿಸುವದು.

## ತೇಜಸ್ವಿಯ ಕ್ರಮ

ಅಂಕೋಲಿಯ ಬೀಜವನ್ನು ಆದಿತ್ಯವಾರ ದಿನ ಉದಯದಲ್ಲಿ ಆ ಗಿಡವನ್ನು ಪೂಜೆಮಾಡಿ ಅದರ ಬೀಜವನ್ನು ತಂದು ಸತ್ತ ಕುದು ರೆಯ ಬಾಯೊಳಗೆ ಆ ಬೀಜವನ್ನು ಇಟ್ಟು ಬಿಟ್ಟು ತಗೆದು ಭೂಮಿ

ಯಲ್ಲಿ ಊರಿ ನೀರುಹಾಕಿ ಗಡವನ್ನು ಬೆಳಿಸಬೇಕು. ಆ ಗಿಡದಲ್ಲಿ ಕಾಯಿಯಾದ ಅದರೊಳಗಿನಬೀಜವನ್ನು ತ್ರಿಲೋಹದ ತಗಡಿನಲ್ಲಿಟ್ಟು ಬಾಯಲ್ಲಿ ಇಟ್ಟುಕೊಳ್ಳಲು ಬಹಳ ಸಾಮರ್ಥ ಬರುವದು. ಮಹಾ ತೇಜಸ್ವಿಯುಕ್ಕುಂ ಬಲು ಚಟುವಟಿಕೆಯುಳ್ಳವನಾಗುವನು.

## ಬೆಕ್ಕು ಕಾಣುವಂತೆ ಮಾಡುವದು

ಹರಳ ಬೀಜವನ್ನು ತಂದು ಸೋಮವಾರದಿವಸ ಸತ್ತಬೆಕ್ಕಿನ ಬಾಯೊಳಗೆ ಹರಳ ಬೀಜಗಳನ್ನು ತುಂಬಿ ಭೂಮಿಯಲ್ಲಿ ಹುಗಿದು ಮೇಲೆ ನೀರುಹಾಕಿ ಬೆಳಿಸಬೇಕು. ಅವು ಗಿಡಗಳಾಗುವವು, ಆ ಹರಳ ಗಿಡದೊಳಗಿನ ಬೀಜದಿಂದ ಯಣ್ಣೆಯನ್ನು ತಗೆದು ಆದರ ಯಣ್ಣೆಯಲ್ಲಿ ಬತ್ತಿಹಾಕಿ ದೀಪವನ್ನು ಹಚ್ಚಲು ನೋಡಿದವರಿಗೆ ಬೆಕ್ಕಿನ ಮೋರೆಯು ಹಾಗೆ ಕಾಣಿಸುವದು.

## ಮುಂಗಲಿ ಕಾಣುವಂತೆ ಮಾಡುವದು

ಹತ್ತಿಯ ಬೀಜಗಳನ್ನು ಆದಿತ್ಯವಾರ ಕೃತಿಕಾ ನಕ್ಷತ್ರವಿದ್ದ ದಿವಸ ಸತ್ತಮುಂಗಲಿಯ ಬಾಯೊಳಗೆ ಆ ಹತ್ತಿಯ ಬೀಜಗಳನ್ನು ತುಂಬಿ ನೆಲದಲ್ಲಿ ಹುಗಿದು ನೀರು ಹಾಕಬೇಕು. ಅವು ಗಿಡಗಳಾಗುವವು. ಆ ಗಿಡದ ಹತ್ತಿಯಿಂದ ಬತ್ತಿಯನ್ನು ಮಾಡಿ ರಾತ್ರಿಯಲ್ಲಿ ದೀಪವನ್ನು ಹಚ್ಚಲು ಬರೀ ಮುಂಗಲಿಗಳೇ ಕಾಣಿಸುತ್ತವೆ.

## ಕತ್ತಲಲ್ಲಿ ಪುಸ್ತಕ ಓದುವದು

ಗೂಗೆಯ ತಲೆಯ ಪರಟಿಯನ್ನು ತಂದು ಮೂರು ಕಲ್ಲು ಇಟ್ಟು ವಲೆಯನ್ನು ಮಾಡಿ ಆದರ ಮೇಲೆ ಆ ಗೂಗೆಯ ತಲೆ ಪರಟಿ ಯನ್ನು ಇಟ್ಟು ಬುಡಕ್ಕೆ ತುಪ್ಪದ ದೀಪವನ್ನು ಹಚ್ಚಬೇಕು. ಅ

ದೀಪದಿಂದ ಆ ಪಟಿಗೆ ಬಡೆದ ಕಾಡಿಗೆಯನ್ನು ಕಣ್ಣಿಗೆ ಹಚ್ಚಿಕೊಂಡು ಕತ್ತಲಲ್ಲಿ ಪುಸ್ತಕವನ್ನು ಓದಬಹುದು.

## ಸರ್ಪ ಕಾಣುವಂತೆ ಮಾಡುವದು

ಆದಿತ್ಯವಾರ ದಿವಸ ಸತ್ತ ಸರ್ಪಿನ ಬಾಯೊಳಗೆ ಹತ್ತಿಯ ಬೀಜಗಳನ್ನು ತುಂಬಿ ಹುಗಿಯಬೇಕು. ಮೇಲೆ ನೀರು ಹಾಕಲು ಗಿಡಗಳಾಗುವವು. ಆ ಗಿಡದ ಹತ್ತಿಯಿಂದ ಬತ್ತಿಯನ್ನು ಮಾಡಿ ಹಿಂದೆ ಹೇಳಿದ ಹರಳೆಣ್ಣೆಯಲ್ಲಿ ಹಾಕಿ ಸಂಜೆಯಲ್ಲಿ ದೀಪ ಹಚ್ಚಲು ನೋಡಿದವರಿಗೆ ಸರ್ಪಿನಹಾಗೆ ಕಾಣಿಸುತ್ತದೆ.

ಕಪ್ಪೆಯ ಕೊಬ್ಬು, ಬನ್ನಿಯಹೂವು, ಹಾವಿನಪರಿ, ಈ ಮೂರನ್ನು ಅರಳೆಯಲ್ಲಿ ಹಾಕಿ ಬತ್ತಿಯನ್ನು ಮಾಡಿ ಹರಳೆಣ್ಣೆಯಲ್ಲಿ ಹಾಕಿ ದೀಪವನ್ನು ಹಚ್ಚಲು ನೋಡಿದವರಿಗೆಲ್ಲರಿಗೂ ಸರ್ಪವೇ ಕಾಣಿಸುವವು.

## ಮೃಗಗಳಂತೆ ತೋರಿಸುವದು

ಅಂಕೋಲೆಯ ಬೀಜಗಳನ್ನು ಸತ್ತ ಸಿಂಹ ಮೊದಲಾದ ಮೃಗದಳ ಬಾಯಲ್ಲಿ ಇಟ್ಟು ಭೂಮಿಯಲ್ಲಿ ಹುಗಿದು ಮೇಲೆ ನೀರು ಹಾಕುತ್ತಿರಬೇಕು. ಅವು ಗಿಡಗಳಾಗುವವು. ಆ ಗಿಡದೊಳಗಿನ ಬೀಜಗಳನ್ನು ತ್ರಿಲೋಹದ ತಗಡಿನಲ್ಲಿ ಮುಡಿಚಿ ಬಾಯೊಳಗೆ ಇಟ್ಟುಕೊಂಡರೆ ನೋಡಿದವರಿಗೆ ಸಿಂಹ ಮೊದಲಾದ ಮೃಗಗಳಂತೆ ಕಾಣುವದು.

## ಚೇಳು ಕಾಣುವಂತೆ ಮಾಡುವದು

ಚೇಳಿನ ಬಾಯಲ್ಲಿ ಹತ್ತಿಯಬೀಜವನ್ನಿಟ್ಟು ಆ ಚೇಳನ್ನು ಭೂಮಿಯಲ್ಲಿ ಹುಗಿದು ಮೇಲೆ ನೀರು ಹಾಕಲು ಹತ್ತಿಯಗಿಡವಾಗು

ಗುವದು. ಆ ಗಿಡದೊಳಗಿನ ಹತ್ತಿಯಿಂದ ಬತ್ತಿಯನ್ನು ಮಾಡಿ ಹರಳೆಣ್ಣೆಯಿಂದ ದೀಪವನ್ನು ಹಚ್ಚಲು ನೋಡಿದವರಿಗೆಲ್ಲಾ ಚೋಳುಗಳು ಕಾಣಿಸುವವು.

## ಓತಿಕಾಟ ಮಾಡುವದು

ಓತಿಕಾಟದ ಎದೆಯನ್ನು ತಂದು ತಾಳವಾಲೆಯಲ್ಲಿ ಆ ಓತಿಕಾಟದ ಎದಿಯನ್ನು ಸುತ್ತಿ ತೋರಿಸಲು ಓತೀಕಾಟದಂತೆಯೇ ಕಾಣಿಸುವದು.

## ಗ್ರಹಣ ಹಿಡಿದಂತೆ ತೋರಿಸುವದು

ಕನ್ನಡಿಗೆ ಓತಿಕಾಟದ ರಕ್ತವನ್ನು ಅರ್ಧಕ್ಕೆ ಹಚ್ಚಿ ತಲೆಯ ಮೇಲೆ ಇಟ್ಟುಕೊಂಡು ನೋಡಿದರೆ ಗ್ರಹಣ ಹಿಡಿದಂತೆ ಕಾಣಿಸುವದು.

## ಯಂಣೆಯ ಕೃತಿ

ಅಂಕೋಲೆಯ ಬೀಜಗಳನ್ನು ತಂದು ಸಣ್ಣಾಗಿ ಅರೆದು ಎರಡು ಕಂಚಿನ ಪಾತ್ರೆಗಳಿಗೆ ಹಚ್ಚಿ ಆ ಎರಡೂ ಪಾತ್ರೆಗಳನ್ನು ಬೇರೊಂದು ಕಂಚಿನ ಪಾತ್ರೆಯಲ್ಲಿ ಇರಿಸಿ ಬಿಸಲಿನಲ್ಲಿ ಇಡಬೇಕು. ಅದು ಕಾದು ಅದರಿಂದ ಬರುವ ಯಂಣೆಯನ್ನು ಯಾವ ಕೃತಿಗಳಾದರೂ ಉಪಯೋಗಿಸಬಹುದು.

## ಕಾಯಿ ಸಹಿತ ಗಿಡವಾಗುವಂತೆ ಮಾಡುವದು

ಅಂಕೋಲೆಯ ತೈಲವನ್ನು ಮಾವಿನ ಬೀಜಕ್ಕೆ ಲೇಪಿಸಿ ಭೂಮಿಯಲ್ಲಿ ಹುಗಿಯಲು ಕಾಯಿ ಸಹಿತವಾಗಿ ಗಿಡವಾಗುವದು.

## ಶರೀರ ತುಂಡಾಗಿ ಕಾಣುವಂತೆ ಮಾಡುವದು

ನವಿಲನ್ನು ತಂದು ಅದನ್ನು ಸಾಕಬೇಕು. ಅದಕ್ಕೆ ಹುಳಹುಪ್ಪಡಿಗಳ ಆಹಾರ ಕೊಡುತ್ತಿರಬೇಕು. ಅದರ ಹಿಕ್ಕೆಯನ್ನು ಗೋಮಯವು ಮೃತ್ತಿಕೆಯು ಸೇರಿಸಿ ಎಲ್ಲವನ್ನೂ ರಾಸಮಾಡಿ ಮೈಗೆ ಹಚ್ಚಿಕೊಂಡರೆ ನೋಡುವವರಿಗೆ ತುಂಡು ತುಂಡುಗಳಾಗಿ ಆಶ್ಚರ್ಯ ಕಾಣಿಸುವದು.

## ಪರಬ್ರಹ್ಮನಂತೆ ಕಾಣುವದು

ಆದಿತ್ಯವಾರ ದಿವಸ ಬಿಳೀ ಮುತ್ತುಗದ ಹೂವುಗಳನ್ನು ತಂದು ಹಿರೀ ಮದ್ದಿನಗಡ್ಡೆ, ಮಣಶಿಲೆ ಈ ಮೂರನ್ನು ಬೆಣ್ಣಿ ಹಾಕಿ ಅರೆದು ತಿಲಕವನ್ನು ಇಟ್ಟುಕೊಂಡರೆ ನೋಡಿದವರಿಗೆ ಪರಬ್ರಹ್ಮನ ಹಾಗೆ ಕಾಣಿಸುವದು.

## ಬದುಕಿದ ಮೀನ ತೋರಿಸುವದು

ಸತ್ತ ಮೀನವನ್ನು ತಂದು ಅದಕ್ಕೆ ಕೇರು ಯಣ್ಣೆಯನ್ನು ಹಚ್ಚಿ ನೀರೊಳಗೆ ಹಾಕಲು ಆ ಮೀನವು ಆಗಿಂದಾಗ್ಗೆ ಬದುಕಿದ ಮೀನದಂತೆ ಕಾಣುವದು.

## ಎತ್ತಿನ ಶಕ್ತಿ ತೋರಿಸುವದು

ಸತ್ತ ಎತ್ತಿನ ಬಾಯೊಳಗೆ ಆದಿತ್ಯವಾರ ದಿವಸ ತಂದ ಅಂಕೋಲಿಯ ಬೀಜಗಳನ್ನು ಇಟ್ಟು ಅದನ್ನು ಭೂಮಿಯಲ್ಲಿ ಹೂಗಿದು ನೀರು ಹೊಯ್ಯಲು ಗಿಡಗಳಾಗುವವು. ಆ ಗಿಡದೊಳಗಿನ ಬೀಜಗಳನ್ನು ತೆಗೆದುಕೊಂಡು ತ್ರಿಲೋಹದ ತಗಡಿನಲ್ಲಿ ಇಟ್ಟು ಬಾಯೊಳಗೆ ಇಟ್ಟುಕೊಳ್ಳಲು ಎತ್ತಿನ ಬಲವುಳ್ಳವನಾಗುವನು.

## ಎಲ್ಲಾ ಪ್ರಾಣಿಗಳಂತೆ ಕಾಣುವದು

ಮುಖ್ಯವಾಗಿ ಯಾವ ಪ್ರಾಣಿಗಳೇ ಆಗಲಿ ಮೇಲೆ ಹೇಳಿದ ಪ್ರಕಾರ ಆದಿತ್ಯವಾರ ದಿವಸ ತಂದ ಬೀಜಗಳನ್ನು ಆಯಾ ಸತ್ತಜೀವಿಗಳ ಬಾಯಲ್ಲಿ ಇರಿಸಿ ಭೂಮಿಯಲ್ಲಿ ಹೂಗಿದು ನೀರು ಹೊಯ್ಯಲು ಗಿಡಗಳಾಗುವವು. ಆ ಗಿಡದೊಳಗಿನ ಬೀಜಗಳನ್ನು ತ್ರಿಲೋಹದ ತಗಡಿನಲ್ಲಿ ಸುತ್ತಿ ಬಾಯಲ್ಲಿ ಇಟ್ಟುಕೊಂಡರೆ ಆಯಾ ಪ್ರಾಣಿಗಳಂತೆ ಕಾಣಿಸುತ್ತದೆ.

## ಸರ್ವಸಿದ್ಧಿ

ಅಂಕೋಲೆಯ ಬೀಜಗಳನ್ನು ತಂದು ಅದರ ಮೇಲಿನ ಹೊಟ್ಟು ತೆಗೆದು ಅದರ ಯಣ್ಣೆಯನ್ನು ತೆಗೆದು ಧೂಪವನ್ನು ಹಾಕಿದರೆ ಸರ್ವಸಿದ್ಧಿಯಾಗುವದು.

# ದೇವರಂತೆ ಕಾಣುವದು

ಎತ್ತಿನಕೂದಲು, ಬಿಲ್ವಪತ್ರಿ, ಸರ್ಪದಕೊಬ್ಬು, ಮಣಶಿಲಾ, ಗಂಧಕ ಇವುಗಳನ್ನು ಕೂಡಿಸಿ ಅರೆದು ತಿಲಕವನ್ನು ಇಟ್ಟುಕೊಂಡರೆ ನೋಡಿದವರಿಗೆಲ್ಲಾ ದೇವರಂತೆ ಕಾಣುವದು.

# ಎಲೆಹೂವು ತೋರಿಸುವದು

ಅಂಕೋಲೆಯ ತೈಲವನ್ನು ಕಮಲದ ಬೀಜಕ್ಕೆ ಲೇಪಿಸಿ ನೀರು ತುಂಬಿದ ಪಾತ್ರೆಯಲ್ಲಿ ಆ ಬೀಜಗಳನ್ನು ಹಾಕಲು ಎಲೆಗಳು ಹೂವುಗಳೂ ಆಗುವವು.

# ಆಗಿಂದಾಗ ಕೂದಲು ಬೆಳೆಯುವವು

ಇದೇ ಅಂಕೋಲೆಯ ತೈಲವನ್ನು ಕ್ಷೌರಮಾಡಿಸಿಕೊಂಡಮೇಲೆ ಈ ತೈಲವನ್ನು ಹಚ್ಚಿದರೆ ಆಗಿಂದಾಗ ಕೂದಲುಗಳು ಬೆಳೆಯುವವು.

# ಆನೆಯಂತೆ ಕಾಣುವದು

ಗುರುವಾರ ದಿವಸ ಅಂಕೋಲೆಯ ಬೀಜಗಳನ್ನು ತಂದು ಸತ್ತ ಆನೆಯ ಬಾಯೊಳಗೆ ಇಟ್ಟು ಭೂಮಿಯಲ್ಲಿ ಹುಗಿದು ಮೇಲೆ ಪೂರ್ವೋಕ್ತ ಮಂತ್ರದಿಂದ ನೀರನ್ನು ಹಾಕಬೇಕು ಗಿಡಗಳಾಗಿ ಫಲವಾಗುವವು. ಆ ಗಿಡದ ಬೀಜಗಳನ್ನು ತಗೆದುಕೊಂಡು ತ್ರಿಲೋಹದ ತಗಡಿನಲ್ಲಿ ಸುತ್ತಿ ಬಾಯಲ್ಲಿ ಇಟ್ಟುಕೊಂಡರೆ ಆನೆಯಂತೆ ಮದೋನ್ಮತ್ತನಾಗುವನು.

# ರಾವಣನಂತೆ ಕಾಣುವದು

ಮಾಹಾಲಿಂಗದ(ಲಿಂಗದೊಡೆಯ) ಬೀಜದ ತೈಲವನ್ನು ಎಳ್ಳೆಯ ಎಣ್ಣೆಯಲ್ಲಿ ಕೂಡಿಸಿ ೭ ದಿವಸ ಸೂರ್ಯಬಿಸಿಲಿನಲ್ಲಿ ಇಟ್ಟು ಅದರಲ್ಲಿ ಹಂದಿಯ ಕೊಬ್ಬು ಅಲಿವಾಣದ ಹಕ್ಕಿಯುಹಿಕ್ಕಿ ಕತ್ತೆಯಕೊಬ್ಬು ಈ ಮೂರನ್ನು ಸಮನಾಗಿ ಹಾಕಿ ಇದರಲ್ಲಿ ಮಣಶಿಲೆಯಪುಡಿಯನ್ನು ಹಾಕಿ ಕೂಡಿಸಿ ತಿಲಕವನ್ನು ಹಚ್ಚಿಕೊಂಡರೆ ರಾವಣನಂತೆ ಕಾಣುವನು.

## ಸೂರ್ಯನ ರಥ ಕಾಣುವದು

ಮಾದಾಳಬೀಜದ ಎಂಣೆಯನ್ನು ತಗೆದು ತಾಂಬ್ರದ ಪಾತ್ರಿಗೆ ಹಚ್ಚಿ ಉದಯವಾಗುತ್ತಿರುವ ಸೂರ್ಯನನ್ನು ನೋಡಿದರೆ ರಥಸಹಿತವಾಗಿ ಕಾಣುವನು.

## ನಿಕ್ಷೇಪದಂತೆ ಕಾಣುವದು

ಗೂಗೆಯ ಮೊಲವನ್ನು ಹರಳೆಂಣೆಯಲ್ಲಿ ಕಲಸಿ ಯಾರ ಶರೀರದ ಮೇಲೆ ಹಾಕುತ್ತಾನೋ ಅವನು ನಿಕ್ಷೇಪದಂತೆ ಕಾಣುವನು

## ಆಶ್ಚರ್ಯ

ಆವಿಗೆ ೭ ದಿವಸ ಹರಿದಳವನ್ನು ಆಹಾರ ಕೊಟ್ಟು ಅದರ ವಿಷ್ಟೆಯನ್ನು ಕೈಗೆ ಹಚ್ಚಿಕೊಂಡರೆ ನೋಡಿದವರಿಗೆಲ್ಲಾ ನಾಟ್ಯವಾಡಿದಂತೆ ಆಶ್ಚರ್ಯವಾಗಿ ಕಾಣಿಸುವದು.

## ಜನರಿಗೆ ಕಾಣದಂತೆ ಆಗುವದು

ಸಾಸುವೆಯ ಎಂಣೆನಲ್ಲಿ ನೆಲದಾಳಿಯ ಗಡ್ಡಿಯ ಚೂರ್ಣವನ್ನು ಹಾಕಿ ಸಣ್ಣಾಗಿ ಅರೆದು ಗುಳಿಗೆಯನ್ನು ಮಾಡಿ ಬಾಯೊಳಗೆ ಇಟ್ಟುಕೊಂಡರೆ ಜನರಿಗೆ ಕಾಣದಂತಾಗುವದು

## ಆಟಗಾರಿನ ನೃತ್ಯ ನಿಲ್ಲಿಸುವದು

ಇಂಗಲೀಕ, ಗೋರೋಜನ, ಮಣಶಿಲೆ, ನೀಲಾಂಜನ, ಹರಿದಳ ಇವುಗಳನ್ನು ಆವಿಗೆ ೭ ದಿವಸ ಆಹಾರ ಕೊಡಬೇಕು. ಅದರ ಹಿಕ್ಕಿಯನ್ನು ಕೈಗೆ ಹಚ್ಚಿಕೊಂಡು ಆಟಗಾರರಿಗೆ ಕೈಮುಷ್ಟಿ ತೋರಿಸಿದರೆ ಆಟಗಾರನ ನೃತ್ಯ ನಿಂತುಹೋಗುವದು.

## ಮನುಷ್ಯರು ಕುಣಿಯುವಂತೆ ಮಾಡುವದು

ಆದಿತ್ಯವಾರ ದಿವಸ ಹಲ್ಲಿಯನ್ನು ಹಿಡಿದು ಅದರ ಬಾಲವನ್ನು ಅರಳೆಯಲ್ಲಿ ನಡುವೆಇಟ್ಟು ಬತ್ತಿಮಾಡಿ ಹಲ್ಲಿಯ ಕೊಬ್ಬಿನಲ್ಲಿತೋಯಿಸಿ ದೀಪವನ್ನು ಹಚ್ಚಲು ಆಬೆಳಕಿನಲ್ಲಿ ಇದ್ದವರನ್ನು ನೋಡಿದರೆ ಕುಣಿದಂತೆ ಕಾಣಿಸುವದು.

## ಸಭಿಕರು ಕುಣಿದಾಡುವದು

ತಾಳಕವನ್ನು ಸಣ್ಣಗೆ ಪುಡಿಮಾಡಿ ೭ ದಿವಸ ಕೂರ್ಮಕ್ಕೆ ಆಹಾರವನ್ನು ಕೊಡಬೇಕು. ಅದರ ಮಲವನ್ನು ಕೈಗೆ ಹಚ್ಚಿಕೊಂಡು ಮುಷ್ಟಿಯನ್ನು ನಟರ ಸಮೂಹಕ್ಕೆ ತೋರಲು ಅವರ ನಾಟ್ಯವು ನಿಂತುಹೋಗುವದು. ಸಭಿಕರು ಆಶ್ಚರ್ಯಕರವಾದ ನೃತ್ಯ ಮಾಡಲಾರಂಭಿಸುವರು.

## ಕೋಳಿತತ್ತಿ ಮೇಲಕ್ಕೆ ಹೋಗುವದು

ಕೋಳಿಯ ತತ್ತಿಯನ್ನು ತಂದು ಅದಕ್ಕೆ ಸಣ್ಣ ತೂತುಮಾಡಿ ಅದರಲ್ಲಿ ಪಾದರಸ ಹಾಕಿ ಆ ತೂತನ್ನು ಬಂದುಮಾಡಿ ಸೂರ್ಯನಿಗೆ ಎದುರಾಗಿ ಇಡಲು ಮೇಲಕ್ಕೆ ಹೋಗುವದು.

## ಬೆಂಕಿಯಂತೆ ಕಾಣುವದು

ಮಣಶಿಲ, ಕುಂಕುಮ, ಗಂಧಕ ಈ ಮೂರನ್ನು ಸಮನಾಗಿ ಎಳ್ಳೆಣ್ಣೆಯಲ್ಲಿ ಹಾಕಿ ಅರೆದು ಒಂದು ವಸ್ತ್ರಕ್ಕೆ ಹಚ್ಚಿ ತಲಿಗೆ ಹಚ್ಚಿಕೊಳ್ಳಲು ನೋಡಿದವರಿಗೆಲ್ಲಾ ಬೆಂಕಿಯಂತೆ ಕಾಣಿಸುವದು.

## ನೀರು-ಹಾಲು ಕಾಣುವಂತೆ ಮಾಡುವದು

ಆಲದಹಾಲು, ಎಕ್ಕಿಯಹಾಲು, ಅತ್ತಿಯಹಾಲು, ಈ ಮೂರನ್ನೂ ಕೂಡಿಸಿ ವಂದು ಪಾತ್ರೆಗೆ ಲೇಪಿಸಿ ಅದರಲ್ಲಿ ನೀರು ಹಾಕಲು ಆ ನೀರು ಹಾಲಿನಂತೆ ಕಾಣುವದು ಆಶ್ಚರ್ಯ.

## ಅಗ್ನಿ ಸ್ತಂಭನ

ಕಪ್ಪೆಯ ಕೊಬ್ಬು ಲೋಳಸರದ ರಸದಲ್ಲಿ ಅರೆದು ಕಾಲಿಗೆ ಹಚ್ಚಿಕೊಂಡು ಬೇಕಿಯಲ್ಲಿ ನಡೆದರೆ ಅಗ್ನಿಸ್ತಂಭನವಾಗುವದು. ಬಾಧಿಸಲಾರದು. ಬೆಂಕಿ ಆರಿ ಹೋಗುವದು.

## ಮಂತ್ರವು

ಮಂತ್ರವು– ಓಂ ನಮು ಸರ್ವ ಭೂತಾದಿಪತಯೇ ಗ್ರಾಸ ಗ್ರಾಸ ಶೋಷಯಶೋಷಯ ಭೈರವಿ ಆಜ್ಞಾ ಪರಿಸ್ವಹಾ॥ ಈ ಮಂತ್ರವನ್ನು ೧೦೮ ಬಾರೆ ಪಠಿಸಿದರೆ ಕಾರ್ಯವು ಸಿದ್ಧಿಸುವದು.

## ೧೦ ಜನರಷ್ಟು ಉಣ್ಣುವದು

ಆದಿತ್ಯವಾರದಿವಸ ತಾರೆಯಗಿಡಕ್ಕೆ ಪೂಜೆಯನ್ನು ಮಾಡಿ ಬರಬೇಕು. ಸೋಮವಾರದಿವಸ ಸೂರ್ಯೋದಯದಲ್ಲಿ ಹೋಗಿ ಆ ಗಿಡದ ಚಿಗರುಗಳನ್ನು ತಂದು ತನ್ನ ಬಲಭುಜದಲ್ಲಿ ಕರೇದಾರದಿಂದ ಕಟ್ಟಿಕೊಂಡು ಭೋಜನವನ್ನು ಮಾಡಲು ೧೦ ಜನರಷ್ಟು ಅನ್ನವನ್ನು ಉಂಬುವನು.

## ಬಹಳ ಊಟ ಮಾಡುವದು

ಓತಿಕಾಟದ ತೆಳಗಿನ ತುಟಿಯನ್ನು ತಂದು ತನ್ನಲ್ಲಿಟ್ಟುಕೊಂಡು ಊಟವನ್ನು ಮಾಡಲು ರಾಕ್ಷಸನಂತೆ ಬಹಳ ಅನ್ನವನ್ನು ಉಂಬುವನು.

ಬಳೇ ದಾಸಾಳದ ಕಟ್ಟಿಗೆಯ ಮಣೆಯನ್ನು ಮಾಡಿಸಿ ಅದರ ಮೇಲೆ ಕುಳಿತುಕೊಂಡು ಭೋಜನವನ್ನು ಮಾಡಿದರೆ ಭೀಮಸೇನನಂತೆ ಅನ್ನವನ್ನು ಉಂಣುವದು ಆಶ್ಚರ್ಯವು.

## ರಾಕ್ಷಸನಂತೆ ತಿನ್ನುವದು

ಆದಿತ್ಯವಾರದಿವಸ ಸಾಯಂಕಾಲದಲ್ಲಿ ಹೋಗಿ ಎಕ್ಕೆಯ ಮರಕ್ಕೆ ನೇಮೋಕ್ತವಾಗಿ ಪೂಜೆಯನ್ನು ಮಾಡಿ ಮುಂಜಾನೆಹೋಗಿ ಆ ಗಿಡದ ಪುಷ್ಪವನ್ನು ತಗೆದುಕೊಂಡು ಮಾಲೆಯನ್ನು ಮಾಡಿ ಕೊರಳಲ್ಲಿ ಹಾಕಿಕೊಂಡು ಊಟ ಮಾಡಿದರೆ ರಾಕ್ಷಸನಂತೆ ತಿನ್ನುವನು.

ಇವುಗಳನ್ನು ಲಗ್ನಮುಹೂರ್ತ ಮೊದಲಾದ ಕಾಲದಲ್ಲಿ ಮೋಜಾಕ್ಕೆ ಮಾಡುವದು ಆಶ್ಚರ್ಯವು.

# ಹಸಿವೆ ತಡೆಯುವಿಕೆ

**ಮಂತ್ರ** — ಓಂ ನಮೋ ಸಿದ್ಧರೂಪಾಯ ಮಮ ಶರೀರ ಅಮೃತಂ ಕುರುಕುರು ಸ್ವಹಾ||

ಗೊಳಗೊಳಕಿಯ ಬೀಜ, ಭಂಗಿಯಬೀಜ, ತುಳಶಿಯಬೀಜ, ವಿಳೇದೆಲೆಯ ಸಮೂಲವಾದ ಬಳ್ಳಿ ಈ ನಾಲ್ಕನ್ನೂ ಆಡಿನಹಾಲಿನಲ್ಲಿ ಸಂಣಾಗಿ ಅರೆದು ವಂದು ಗದ್ಯಾಣತೂಕ ಗುಳಿಗೆಯನ್ನು ಮಾಡಿ ಇಟ್ಟುಕೊಂಡು ಮುಂಜಾನೆ ತಿಂದು ಮೇಲೆ ಹಾಲು ಕುಡಿಯಲು ಹಸಿವು ತಡೆಯುವದು.

# ಹೊಟ್ಟೆ ಹಸಿವೆಯಾಗದಂತೆ ಮಾಡುವದು

ತಾವರೆಯ ಬೀಜಗಳನ್ನು ಮೇಲಿನಹೊಟ್ಟು ತಗೆದು, ದೊಡ್ಡ ಬೈರೆ ನೆಲ್ಲಿನಅಕ್ಕಿ ಇವೆರಡನ್ನು ಆಡಿನ ಹಾಲಿನಲ್ಲಿ ಅರೆದು ಆಜ್ಯಸಹಿತ ವಾಗಿ ಪಾಯಸವಂ ಮಾಡಿಕೊಂಡು ಉಂಡರೆ ಕ್ಷುದ್ಬಾದೆ ಪರಿಹಾ ರವು ಹೊಟ್ಟೆ ತೀವ್ರ ಹಸಿಯುವದಿಲ್ಲ ಆಶ್ಚರ್ಯವು.

# ಹಸಿವು-ದಾಹ ಪರಿಹಾರವು

ಪದ್ಮ ಬೀಜಗಳನ್ನು ಮೇಲಿನ ಹೊಟ್ಟು ತಗೆದು ಬೀಜ, ಹೊಟ್ಟು ತಗೆದ ಉತ್ತರಾಣಿಯ ಅಕ್ಕಿ, ತುಳಶೀಬೀಜ ನೆಲ್ಲಿಕಾಯಿ ಗಳ ಬೀಜ ಇವುಗಳನ್ನು ಆಕಳ ಹಾಲಿನಲ್ಲಿ ಅರೆದು ೧ ಗದ್ಯಾಣ ತೂಕ ಗುಳಿಗಿ ಮಾಡಿ ಮುಂಜಾನೆ ತಿಂದು ಮೇಲೆ ಆಕಳ ಹಾಲು ಕುಡಿಯಲು ಹಸಿವು ದಾಹವು ಬಾಧಿಸುವದಿಲ್ಲ. ಕೆಲ ಹೊತ್ತು ಊ ಟವಿಲ್ಲದೆ ಇರಬಹುದು.

# ಹಸಿವು ಪರಿಹಾರ

ಉತ್ತರಾಣಿಯ ಬೀಜವನ್ನು ಕುಟ್ಟಿ ಮೇಲಿನ ಹೊಟ್ಟು ತಗೆದ ಅಕ್ಕಿಯನ್ನು ಹಾಲಲ್ಲಿ ಕುದಿಸಿ ಆಜ್ಯಸಹಿತವಾಗಿ ಉಂಡರೆ ಹಸಿವು ಪರಿಹಾರವು.

## ರಾಗಿಯ ಪೈರು ಬೆಳೆಸುವ ಕ್ರಮ

ಮುಂಗಾರಿಯ ಮಳೆಯಲ್ಲಿ ಬೀಳುವ ಅಣೆಕಲ್ಲುಗಳನ್ನು ಶಿಶೆಯೊಳಗೆ ಹಾಕಿ ಆ ನೀರಿನಲ್ಲಿ ರಾಗಿಯನ್ನು ನೆನೆಹಾಕಿ ತಗೆದು ರಾತ್ರಿ ಒಣಗಿಸಬೇಕು. ಈ ಪ್ರಕಾರ ೭ ದಿವಸ ಮಾಡಿ ಮಣ್ಣಿನಲ್ಲಿ ಆ ರಾಗಿಯನ್ನು ಕಲಸಿ ಮೇಲೆ ನೀರು ಹಾಕಲು ರಾಗಿಯ ಪೈರು ಆಗಿ ತಮಾಶೆ ಆಗಿರುವದು.

## ಅಗ್ನಿ ಸ್ತಂಭನ

ಕಪ್ಪೆಯ ಕೊಬ್ಬನ್ನು ಕರ್ಪೂರದಲ್ಲಿ ಹಾಕಿ ಸಂಣಾಗಿ ಅರೆದು ಮೈಗೆ ಲೇಪಿಸಿಕೊಂಡರೆ ಅಗ್ನಿಯ ಭಯವಿಲ್ಲ,

## ನೀರು ಉಂಡೆಯಾಗುವಂತೆ ಮಾಡುವದು

ತಾವರೆಯ ಎಲೆಗಳನ್ನು ತಂದು ಅದರ ರಸವನ್ನು ಓಂದುವಂದು ಹರವೆಯನ್ನು ತಂದು ಅದಕ್ಕೆ ಆ ರಸವನ್ನು ಒಳಮುಗ್ಗಲಿಗೆ ಪೂರಾ ಚನ್ನಾಗಿ ಹಚ್ಚಬೇಕು. ಅದು ಒಣಗಿದ ಮೇಲೆ ಇದರಂತೆ ೮ ಆವರ್ತಿ ಮಾಡಬೇಕು. ಅಮೇಲೆ ಅದರ ತಮಾಸೆಯನ್ನು ತೋರಿಸುವ್ವಮೊದಲು ೩ ಘಂಟೆ ಮೊದಲು ಅದರ ತುಂಬಾ ನೀರು ಹಾಕಬೇಕು. ಕಂಟಕ್ಕೆ ಹಗ್ಗಾ ಕಟ್ಟಿ ಜೋತಾಡುವ ಹಾಗೆ ಕಟ್ಟಬೇಕು. ಆಮೇಲೆ ಅ ಗಡಿಗೆಯನ್ನು ಮೇಲಿಂದಾ ತಳತನಕಾ ಒಡೆಯಲು ಅದರಲ್ಲಿ ಇದ್ಧ ನೀರು ಉಂಡಿಯಾಗಿ ಹಾಗೇ ಜೋತಾಡುವದು. **ಮಂತ್ರ—** ಓಂ ನಮೋ ಭಗವತೇ ರುದ್ರಾಯ ಜಲಸ್ತಂಭನಂ ಕುರುಕುರು ಠಂಠಂಠಂ ಸ್ವಹಾ॥ ಹೀಗೆ ೧೦೮ ಜಪವಂಮಾಡಬೇಕು ಶಿದ್ಧಿಯಕ್ಕುಂ.

## ಕಾದ ಯಂಣೆಯನ್ನು ಹಿಡಿಯುವಕ್ರಮ

ನೀರಲ್ಲಿ ಉಪ್ಪುಕಲಸಿ ಕೈಗೆ ಚನ್ನಾಗಿ ಹಚ್ಚಿಕೊಂಡು ಕಾದ ಎಣ್ಣೆಯನ್ನು ಹಿಡಿಯುಬಹುದು.

# ಮಹೇಂದ್ರಜಾಲ ವಿದ್ಯೆ

## ರಕ್ತ ಬೀಳುವಂತೆ ಮಾಡುವದು

ಗೋಣಿಯ ಹಾಲನ್ನು ತನ್ನ ಎರಡೂ ಕೈಗಳಿಗೆ ಚನ್ನಾಗಿ ಹಚ್ಚಿಕೊಂಡು ಕರೇವೀಳ್ಯದೆಲೆಗೆ ಸ್ವಲ್ಪ ಹೊಸ ಸುಣ್ಣವನ್ನು ಹಚ್ಚಿ ಮುದ್ದಿಮಾಡಿ ಹಿಂಡಿದರೆ ಆ ರಸವು ರಕ್ತದಂತೆ ಬೀಳುವದು.

## ಲಿಂಬಿಹಣ್ಣು ಸವಿ ಆಗುವದಕ್ಕೆ

ಲಿಂಬಿಹಂಣಿಗೆ ಮೈತುಂಬ ತೂತು ಮಾಡಿ (ಚುಚ್ಚಿ) ಹುಣಿಶಿಸೆಕ್ಕಿಯನ್ನು ಸುಟ್ಟು ಬೂದಿಯನ್ನು ಮಾಡಿ ನೀರೊಳಗೆ ಕಲಿಸಿ ಆ ಲಿಂಬಿಹಣ್ಣನ್ನು ಅದರಲ್ಲಿ ಹಾಕಿದರೆ ಹುಳಿಯು ಹೋಗಿ ಸವಿಯಾಗುವದು.

## ಪುಷ್ಯರಾಗದಕಾಯಿ ಆಗುವ ಕ್ರಮ

ನಷ್ಟಮಧುಕ, ಎಳ್ಳು, ಬಜೆ, ಸೀಸ, ಹೊನ್ನಿಮರದಹೂವು ಇವೆಲ್ಲವನ್ನೂ ಅರೆದು ಕಲಕುಮಾಡಿ ಕಟ್ಟೆಯಕಟ್ಟಿ ಮಾವಿನಬೀಜವನ್ನು ಹಾಕಿ ಈ ಕಲಕು ಮಾಡಿದ ನೀರನ್ನು ಹಾಕುತ್ತ ಬಂದರೆ ಆ ಮರಕ್ಕೆ ಪುಷ್ಯರಾಗದ ವರ್ಣದ ಕಾಯಿಗಳಾದಾವು.

## ಜೀವರಾಶಿ ಮಾಡಲಿಕ್ಕೆ

ಅಂಕಲೆಯ ಕಟ್ಟಿಗೆಯ ಯಂಣಿ, ವಡಿಯಾನಹೂವು, ಈ ಎರಡನ್ನೂ ಅರೆದು ಕೈಗೆ ಹಚ್ಚಿಕೊಂಡು ಬೇಕಾದಂತಾ ಎಲೆಗಳನ್ನು ಹಿಡಿಯಲು ಜೀವರಾಶಿಯಾಗಿ ಕಾಣುವವು.

## ಸುವರ್ಣ ಬಣ್ಣಕ್ಕೆ

ಮೊರತುತ್ಯಯುವ ಲಿಂಬಿಯರಸದಲ್ಲಿ ಮರ್ಧಿಸಿ ಹೀನವಾದ ಭಂಗಾರಕ್ಕೆ ಲೇಪಿಸಿ ನಾಲ್ಕುಪುಟವ ಹಾಕಿದರೆ ನಾಲ್ಕು ಬಣ್ಣ ಹೆಚ್ಚುವದು

## ಬೆಂಕಿ ಮಾಡಲಿಕ್ಕೆ

ಬಿಲ್ಲಪತ್ರಿಯ ಕಾಯಿತಂದು ಬುಡಕ ಮೇಲೆ ತೂತುಮಾಡಿ ಬೀಜಾ ತಗೆದು ಯಕ್ಕಿ ಕಟ್ಟಿಗೆಯ ಸ.ಟ್ಟ ಇದ್ದಲಿಯನ್ನು ತುಂಬಿ ಅದರಲ್ಲಿ ಸ್ವಲ್ಪ ಬೆಂಕಿಯನ್ನು ಹಾಕಿ ಬಾಯೊಳಗೆ ಇಟ್ಟುಕೊಂಡು ಉಸಲುಬಿಟ್ಟರೆ ಉರಿಯುತ್ತದೆ.

## ಆನಿ ಮಾಡಿ ತೋರಿಸುವದು

ಬಾವಂಜಿಬೀಜ, ಬಿಳಿ ಗೊಳಗೊಳಕಿಯ ಬೀಜ ಎರಡನ್ನು ಸಂಣಾಗಿ ಅರೆದು ಕರೇ ಆಕಳಬೆಂಣಿ, ಹಾಲು ಕಲಿಸಿ ಅದರಲ್ಲಿ ಆನೆಯ ಲದ್ದಿಯನ್ನು ಹಾಕಿ ಕಲಸಿ ಎಮ್ಮಿಕರದ ಮೈಗೆ ಹಚ್ಚಿದರೆ ಆನಿಯಾಗಿ ಕಾಣುವದು.

## ಸೂಜಿ ಡಬ್ಬಣ ದೇಹದಲ್ಲಿ ಚುಚ್ಚುವದು

ಹುಣಶಿಹಣ್ಣು, ತುತ್ತೇವು ಸೂಜಿಗೂ-ಡಬ್ಬಣಕ್ಕೂ ಹಚ್ಚಿ ಮೇಲೆ ರಕ್ತಮಂಡಲದ ತಪ್ಪಲವನ್ನು ಹಚ್ಚಿ ಕೆಲವು ತಪ್ಪಲವನ್ನು ತಿಂದು ಸೂಜಿ-ಡಬ್ಬಣ ಚುಚ್ಚಲು ಘಾಯವಾಗಲಾರದು.

## ಶಸ್ತ್ರ ಹಾಕುವದಕ್ಕೆ

ಗಂಟೆಗಳ್ಳಿಯ ಬೇರನ್ನು ಬಾಯಲ್ಲಿ ತಿಂದು ಉಗಳಿ ಆಮೇಲೆ ಶಸ್ತ್ರವನ್ನು ಹಾಕಲು ಘಾಯವಾಗುವದಿಲ್ಲ.

## ಕೈ ಸುಡಲಾರದು

ವಡಿಯನ್ನ ಬೇರಿನ ತೈಲದಲ್ಲಿ ಪಚ್ಚ ಕರ್ಪೂರವನ್ನು ಹಾಕಿ ಕಲಸಿ ಹಚ್ಚಿಕೊಂಡು ಸುಡುವ ಅಂಬಲಿಯೊಳಗೆ ಕೈಯಿಕ್ಕಲು ಆರುವದು.

## ಮಣ್ಣ ಎತ್ತು ಡುರಿಕೀ ಹಾಕುವದು

ವಂದು ಮಣ್ಣಿನ ಎತ್ತನ್ನು ವಳಗೆ ಹೊಟ್ಟೆಯಲ್ಲಿ ಪಳ್ಳುಮಾಡಿ ಅದರಲ್ಲಿ ವಂದು ಕಪ್ಪೆಯನ್ನು ಹೊಗಿಸಿ ಹಳೇಮೆಣಸಿನಕಾಯಿಯ ಹೊಗೆಯನ್ನು ಹಾಕಲು ಡುರಕಿ ಹಾಕುವದು.

## ನೀರು ಘಟ್ಟಿಯಾಗುವಂತೆ ಮಾಡುವದು

ಆನೆನೆಗ್ಗಿಲ ತೊಪ್ಪಲ, ದಾಗಡಿತೊಪ್ಪಲು ಕೂಡಿಸಿ ನೀರೊಳಗೆ ಕಲಸಿದರೆ ನೀರು ಘಟ್ಟಿಯಾಗುವದು.

ಮಣ್ಣಿನ ಹಸಿ ಕೊಡಕ್ಕೆ ಆನೆನೆಗ್ಗಿಲ ತಪ್ಪಲವನ್ನು ೭ ದಿವಸ ವಳಗೆ ಹಚ್ಚಿ ವಣಗಿಸಿ ಆಮೇಲೆ ನೀರು ಹಾಕಿ ಸ್ವಲ್ಪ ಹೊತ್ತು ಬಿಟ್ಟು ಆ ಗಡಿಗೆಯನ್ನು ವಡೆದರೆ ನೀರು ಹಾಗೆ ನಿಂತಾವು.

## ರಾತ್ರಿ ಹಗಲು ಆಗುವದಕ್ಕೆ

ಕಾಕಿ ಹಂಣಿನ ರಸವನ್ನೂ ಆದರ ಹೂವನ್ನೂ ಜೇನತುಪ್ಪದಲ್ಲಿ ಮರ್ಧಿಸಿ ಕಣ್ಣಿಗೆ ಹಚ್ಚಿಕೊಳ್ಳಲು ರಾತ್ರಿ ಹಗಲಾಗಿ ಕಾಣುವದು.

## ಕೊಟ್ಟದ್ದು ತಿರುಗಿ ಬರುವ ಪ್ರಯೋಗ

ಅರಿಗಿಡ, ಬನ್ನಿಗಿಡ ಇವೆರಡನ್ನು ಮೊದಲು ಶನಿವಾರದಿವಸ ಪೂಜೆ ಮಾಡಿ ಮರುದಿವಸ ಆದಿತ್ಯವಾರ ಅಮಾವಾಸಿಯ ದಿನ ಆ ಎರಡೂ ಬೇರುಗಳನ್ನು ಕಡಿದು ತಂದು ಬೇರೆ ಬೇರೆ ಇರಿಸಿ, ಅರಿಗಿಡದ ಬೇರನ್ನು ತನ್ನಲ್ಲಿ ಇಟ್ಟುಕೊಂಡು ಬನ್ನಿಗಿಡದಬೇರು ಅರಿಗಿಡದ ರಸದಲ್ಲಿ ತೈದು ಹೊನ್ನಿಗಾಗಲಿ, ರೂಪಾಯಕ್ಕಾಗಲಿ, ರೊಕ್ಕಕ್ಕಾಗಲಿ ಲೇಪಿಸಿ ಪರರಿಗೆ ಕೊಟ್ಟರೆ ಅವು ತಿರುಗಿ ತನ್ನಲ್ಲಿಗೇ ಬಂದಾವು.

## ಚೋಳು ಮಾಡಿ ತೋರಿಸುವದು

ಆದಿತ್ಯವಾರ ದಿವಸ ಕೆಲವು ಹಲ್ಲಿಗಳನ್ನು ಹಿಡಿದು ವಂದು ಪಾತ್ರೆಯೊಳಗೆ ಹಾಕಿ ಅದಕ್ಕೆ ಬಾಯಿಗೆ ಅರಿಬೆಯನ್ನು ಕಟ್ಟಬೇಕು ಮತ್ತು ಆ ಹಲ್ಲಿಗಳಿಗೆ ಪ್ರತಿದಿವಸ ವಂದು ಚೋಳನ್ನು ಆ ಪಾತ್ರೆಯೊಳಗೆ ಹಾಕಬೇಕು ಆ ಚೋಳನ್ನು ಹಲ್ಲಿಗಳು ತಿನ್ನುತ್ತವೆ. ಇದರಂತೆ ೭ ದಿವಸ ಮಾಸ ಮಾಡಬೇಕು. ಆ ಹಲ್ಲಿಗಳು ಹಾಕಿದ ಹಿಕ್ಕಿಗಳನ್ನು ಕೈಗೆ ಹಚ್ಚಿಕೊಂಡು ಬೇವಿನ ತೊಪ್ಪಲವನ್ನು ತಂದರೆ ಅವು ಚೋಳುಗಳಾಗುವವು.

## ಕರಿಯುವ ಕ್ರಮ

ನಾಗ್ಗಿಗಿಡದ ಮುಗುಳು ಚಿವಡಿದ ರಸವಾಗಲೀ ಅಥವಾ ತಪ್ಪಲದ ರಸವಾಗಲೀ ಕಾಗದಕ್ಕೆ ಚನ್ನಾಗಿ ತೋಯಿಸಿ ಆ ಕಾಗದದ ಡೊಣ್ಣೆಯನ್ನು ಮಾಡಿ ಅದರಲ್ಲಿ ಯಣ್ಣೆಯನ್ನು ಹಾಕಿ ಬೆಂಕಿಯ ಮೇಲೆ ಇಟ್ಟು ಅದರಲ್ಲಿ ಏನಾದರೂ ಕರಿಯಬಹುದು.

## ಟೆಂಗಿನಕಾಯಿ ಒಡೆಯುವದು

ಕರಡೆಯ ತಲೆಯಬುರಡಿಯ ಗಂಧವನ್ನು ಕೈಗೆ ಲೇಪಿಸಿಕೊಂಡು ಟೆಂಕಿನಕಾಯಿಗಳಿಗೆ ಹಚ್ಚಿದರೆ ಆ ಟೆಂಗಿನಕಾಯಿಗಳು ಒಡೆಯುವವು

## ತಗಣಿ ಹೋಗುವ ಕ್ರಮ

ನಸಗುನ್ನಿಯಕಾಯಿ, ಬಿಳೆಸಾಸವಿ, ಚೇಕಿನಗಡ್ಡಿ, ಸಜ್ಜರಸ, ಕೇರ ಹರಳು, ಇವೆಲ್ಲವನ್ನು ಕೂಡಿಸಿ ಯಕ್ಕೆಯಹಾಲು ಹಾಕಿ ಅರೆದು ಪುಡಿ ಮಾಡಿ ಯಳ್ಳೆಂಣೆಯಲ್ಲಿ ಕಲಸಿ ದೀಪವನ್ನು ಹಚ್ಚಲು ಅದರ ವಾಸನೆಗೆ ಎಲ್ಲ ತಗಣಿಗಳು ಸತ್ತು ಹೋಗುವವು.

## ಮಜ್ಜಿಗೆ ಘಟ್ಟಿಯಾಗುವ ಕ್ರಮ

ಬೆಳವಲ ಬೀಜವನ್ನು ಹಾಲಲ್ಲಿ ಭಾವಿಸಿ ಚೂರ್ಣವನ್ನು ಮಾಡಿ ಆ ಚೂರ್ಣವನ್ನು ಮಜ್ಜಿಗೆಯೊಳಗೆ ಹಾಕಲು ಘಟ್ಟಿಯಾಗುವದು.

## ಹೂವುಗಳ ಬಣ್ಣ ಬದಲಾಯಿಸುವಿಕೆ

ಕೆಂಪು ಹೂವುಗಳಿಗೆ ಗಂಧಕದ ಹೊಗೆಯನ್ನು ಕೊಟ್ಟರೆ ಆ ಹೂವುಗಳು ಬೆಳ್ಳಗಾಗುವವು. ಬಿಳೀ ಹೂವುಗಳಿಗೆ ನವಸಾಗರದ ಹೊಗೆಯನ್ನು ಕೊಟ್ಟರೆ ಕೆಂಪಗಾಗುವವು.

## ಬೆಂಕಿಯನ್ನು ಹಿಡಿಯುವಿಕೆ

ಬಾಳೆಯ ಗಡ್ಡೆಯನ್ನು ಲೌಳರಸದಲ್ಲಿ ಚನ್ನಾಗಿ ಅರೆದು ಕೈಗೆ ಹಚ್ಚಿಕೊಂಡು ಬೆಂಕಿಯನ್ನು ಹಿಡಿಯಬಹುದು.

# ಶುಭ ಸ್ವಪ್ನಗಳು

ಪರ್ವತದ ಮೇಲಿಂದ ಕೆಳಗೆ ಬಿದ್ದಂತಾಗುವದು, ಮೀನವು ತನ್ನನ್ನು ನುಂಗಿದಂತಾಗುವದು, ಹೊಳೆ-ಹಳ್ಳಗಳಲ್ಲಿಬಿದ್ದು ನೀರಿನಲ್ಲಿ ತೇಲಿ ಹೋದಂತಾದರೆ ಇದು ಬಹು ಶುಭವನ್ನುಂಟು ಮಾಡುವದು ಒಳ್ಳೇದು.

ಸ್ವಪ್ನದಲ್ಲಿ ಎತ್ತು, ಆಕಳುಗಳನ್ನು ನೋಡಿದರೆ ಮಹಾಲೇಸಾಗುತ್ತದೆಂದು ತಿಳಿಯಬೇಕು.

ಯಾರು ದೇವರನ್ನು ಮಿತ್ರರನ್ನು ಸ್ವಪ್ನದಲ್ಲಿ ಕಾಣುತ್ತಾರೋ ಅವರು ಒಂದು ತಿಂಗಳಲ್ಲಿ ಶುಭವನ್ನು ಹೊಂದುತ್ತಾರೆ

ಸ್ವಪ್ನದಲ್ಲಿ ಬಿಳೇವಸ್ತ್ರ, ಹೂವುಗಳನ್ನು, ಮಾಂಸವನ್ನು, ನಾಗೆಶನನ್ನು ಬೆಳಗುವಮುಂಜಾನೆ ಕನಸಿನಲ್ಲಿ ಕಂಡರೆ ಅವರಿಗೆ ಒಂದು ವಾರದಲ್ಲಿ ಧನಪ್ರಾಪ್ತವಾಗುವದು.

ಬ್ರಾಹ್ಮಣರನ್ನೂ, ಬೆಂಕಿಯುನ್ನೂ, ರಾಜರನ್ನೂ, ಸ್ವಪ್ನದಲ್ಲಿ ಕಂಡರೆ ಮಹಾಲೇಸಾಗುವದು ಸಿದ್ಧಾಂತವು. ರೋಗದವರಿದ್ದರೆ ಅವರ ರೋಗ ನಿವಾರಣವಾಗುತ್ತದೆಂದು ತಿಳಿಯತಕ್ಕದ್ದು.

ಯಾರು ಸ್ವಪ್ನದಲ್ಲಿ, ಹಳ್ಳ, ಹೊಳೆ, ಸಮುದ್ರಗಳನ್ನು ದಾಟಿ ಆಕಡೆಗೆ ಹೋದಂತಾದರೆ ಅವರಿಗೆ ಶುಭಫಲಗಳಾಗುವವು. ಒಳ್ಳೇದು.

ಸ್ವಪ್ನದಲ್ಲಿ ಫಲ ಸಹಿತವಾದ ಗಿಡಗಳನ್ನು, ಗುಡ್ಡಗಳನ್ನು ಮೇಲು ಮಾಳಿಗೆಯನ್ನೂ, ಆನೆಯನ್ನೂ, ಹತ್ತಿದಂತಾದರೆ ಅವರಿಗೆ ೩ ತಿಂಗಳಲ್ಲಿ ಧನಪ್ರಾಪ್ತಿಯಾಗುತ್ತದೆ.

ಕನಸಿನಲ್ಲಿ ಗುಂಗಿಹುಳವು ಕಡಿಯುವದು ಮತ್ತು ಮೀನವು ನುಂಗುವದು ಹೀಗೆ ಕಂಡರೆ ಧನಾರೋಗ್ಯ ಪ್ರಾಪ್ತವಾಗುವದು.

ಸ್ವಪ್ನದಲ್ಲಿ ಯಾರು ಕಮಲ, ಚಿತ್ರ, ಅಲಂಕೃತರಾದ ಸ್ತ್ರೀಯರನ್ನು ನೋಡಿದರೆ ಧನಲಾಭವಾಗುವದು.

ಯಾವ ಪುರುಷನು ಸ್ವಪ್ನದಲ್ಲಿ ಚಂದ್ರ-ಸೂರ್ಯರನ್ನೂ, ಗ್ರಹ, ನಕ್ಷತ್ರಗಳನ್ನು ನಿಗಿನಿಗಿಸುವ ಬೆಂಕಿಯನ್ನು ನೋಡಿದರೆ ತಡೆದು ನಿಂತ ಕೆಲಸವು ತೀವ್ರವಾಗುವದು.

ಮಾಂಸವನ್ನು ತಿನ್ನೋಣ, ಶೆರೆಸಿಂದಿ ಕುಡಿಯೋಣ, ಊಟ ಮಾಡೋಣ, ರಕ್ತದಿಂದ ಮೈತೊಳಕೊಳ್ಳೋಣ, ಬಿಳೀ ಅರಿವೆಗಳನ್ನು ಧರಿಸಿಕೊಳ್ಳೋಣ, ಮುತ್ತು, ರತ್ನಗಳನ್ನು ನೋಡೋಣ ಹೀಗೆ ಸ್ವಪ್ನದಲ್ಲಿ ಕಂಡರೆ ಶುಭದಾಯಕವಾದದ್ದು.

ಸ್ವಪ್ನದಲ್ಲಿ ತನ್ನ ಶಿರವನ್ನು ಕಡಿದಂತೆಯೂ ಮರಣವಾದಂತೆಯೂ, ಆನೆಯನ್ನು ಹತ್ತಿದಂತೆಯೂ, ಆಕಳುಗಳು ಈದಂತೆಯೂ ರೋಧನ ಮಾಡೋಣ ಇವನ್ನೆಲ್ಲ ಕಂಡರೆ ಶುಭದಾಯಕವು.

ಯಾವಪುರುಷನು ಸ್ವಪ್ನದಲ್ಲಿ ಸ್ತ್ರೀಯರನ್ನು ಅಪ್ಪಿಕೊಳ್ಳೋಣ ರಾಜದರ್ಶನವಾಗೋಣ, ಬಂಧನದಿಂದ ಕಡೆಗೆ ಆಗೋಣ ಇವೆಲ್ಲಾ ಶುಭವನ್ನು ಸೂಚಿಸುತ್ತವೆ.

ಸ್ವಪ್ನದಲ್ಲಿ ಹಾಲುಳ್ಳ ಮತ್ತು ಹಂಣುಕಾಯಿಗಳಿರುವ ಗಿಡವನ್ನು ಹತ್ತಿ ಮೇಲೆ ಕುಳಿತುಕೊಂಡರೆ ಅವನಿಗೆ ೭ ದಿವಸದಲ್ಲಿ ಧನ ಪ್ರಾಪ್ತಿಯಾಗುತ್ತದೆ.

ಸ್ವಪ್ನದಲ್ಲಿ ಯಾವ ಪುರುಷನನ್ನು ನಾಗರಹಾವು ಕಡಿಯುತ್ತದೋ ಆ ಪುರುಷನಿಗೆ ಮಾತ್ರ ಬಹಳ ದುಡ್ಡು ದೊರೆಯುವದು.

ಯಾರು ಸ್ವಪ್ನದಲ್ಲಿ ಕೆರಿಯೊಳಗೆ ನಡುವೆ ಕೂತು ಕಮಲಪತ್ರದಲ್ಲಿ ಪಾಯಸ, ತುಪ್ಪವನ್ನು ಊಟ ಮಾಡುತ್ತಾರೋ ಅವರು ರಾಜಪದವಿಯನ್ನು ಅನುಭವಿಸುವರು ಶುಭವು.

ಸ್ವಪ್ನದಲ್ಲಿ ಗಂಧವನ್ನು, ನಾಗಸಂಪಿಗೆ ಮೊದಲಾದ ಬಿಳೀ ಹೂವುಗಳನ್ನು ಮುಡಿಯುತ್ತಾನೋ ಆ ಪುರುಷನಿಗೆ ಸಂಪತ್ತು ಪ್ರಾಪ್ತವಾಗುತ್ತದೆ.

ಸ್ವಪ್ನದಲ್ಲಿ ಯಾವ ಪುರುಷನು ಬುರಗುಸಹಿತವಾದ ಹಾಲನ್ನು ಕುಡಿಯುತ್ತಾನೋ ಅವನು ಸುಖಭೋಗಗಳನ್ನು ಹೊಂದುತ್ತಾನೆ.

ಯಾವನು ನಿದ್ದೆಯಲ್ಲಿ ಅಕ್ಕಿಯನ್ನು, ಗೋದಿಯನ್ನು ನೋಡಿ ಹಿಂದಿನಿಂದ ಹಾಲನ್ನು ನೋಡಿದಂತಾದರೆ ನಿಶ್ಚಯವಾಗಿ ಧನ ಪ್ರಾಪ್ತಿಯಾಗುವದು ಶುಭಯೋಗವು.

ಕನಸಿನಲ್ಲಿ ತುಪ್ಪವು ಲಾಭವಾದಂತಾದರೆ ಕೀರ್ತಿ ಬರುತ್ತದೆ. ಹಾಲು ಲಾಭವಾದರೆ ದುಡ್ಡು ದೊರೆಯುತ್ತದೆಂದು ತಿಳಿಯಬೇಕು.

ಸ್ವಪ್ನದಲ್ಲಿ ಯತ್ತುಗಳಿಂದ ಹೂಡಿದ ಚಕ್ಕಡಿಯಮೇಲೆ ಹೋಗಿ ಕೂತಂತಾದರೆ ಶುಭವು ಧನಪ್ರಾಪ್ತಿ.

ಯಾವ ಸ್ತ್ರೀಯಳು ಅಲಂಕಾರಯುಕ್ತಳಾಗಿ ಯಾವ ಪುರುಷನನ್ನು ಅಪ್ಪಿಕೊಳ್ಳುತ್ತಾಳೋ ಆ ಮನುಷ್ಯನಿಗೆ ಶುಭವಾಗುತ್ತದೆಂದು ತಿಳಿಯಬೇಕು.

ಸ್ವಪ್ನದಲ್ಲಿ ಬಿಳೀ ವಸ್ತುಗಳನ್ನು ನೋಡಿದರೆ ಶುಭ ಉಂಟಾಗುವದು. ಕಪ್ಪು ವಸ್ತುಗಳನ್ನು ನೋಡಿದರೆ ಹೀನವಾಗುವದು.

ಸ್ವಪ್ನದಲ್ಲಿ ಕೈಯಲ್ಲಿ ಕೋಲು ಹಿಗಿದುಕೊಂಡವರು ಮತ್ತು ಕೆಂಪು ಅರಿವೆಗಳನ್ನು ಧರಿಸಿಕೊಂಡವರು, ಬತ್ತಲೆಇದ್ದವರು, ಸ್ವಾಮಿಗಳು ಕಂಡರೆ ಮಹಾಲೇಸಾಗುವದು ಶುಭವು.

# ಮೈಮೇಲೆ ಹಲ್ಲಿಬಿದ್ದ ಫಲ

ಹಲ್ಲಿಯು ಮೈಮೇಲೆ, ತಲೆಯುಮೇಲೆ ಬೀಳಲು ಕಲಹ, ಹಿಂಭಾಗದಲ್ಲಿ ಬೀಳಲು ಅಪರಾಧ, ಕಲಹ, ಸೋದರಮಾವನಿಗೆ ಹೀನಾ, ತುರಬಿನ ಮೇಲೆ ಬೀಳಲು ವ್ಯಾಧಿ, ಪೀಡಾಕಾರ.

ಬಲದ ಕೆನ್ನಿಯು ಮೇಲೆ ಬೀಳಲು ಹಾನಿ, ಎಡಕಿನ ಮೇಲೆ ಬೀಳಲು ದರಿದ್ರತ್ವ, ಹಣಿಯುಮೇಲೆ ಬೀಳಲು ಮದುವೆ ಇಲ್ಲದವರಿಗೆ ಮದುವೆಯಾಗುವದು, ಮದುವೆಯಾದವನಿಗೆ ಹಾನಿ ತೋರುವದು.

ಮುಂದೆಲಿ ಮೇಲೆ ಬೀಳಲು ಸೋದರಮಾವನಿಗೆ ಹೀನಾ, ಎಡದ ಕಿವಿಯುಮೇಲೆ ಬೀಳಲು ಅಲಂಕಾರ ಲಾಭ, ಬಲದಕಿವಿಯು ಮೇಲೆ ಬೀಳಲು ಕನಿಷ್ಟ, ಯಡದ ಹುಬ್ಬಿನಮೇಲೆ ಬೀಳಲು ವ್ಯಾಧಿ ಬಲದ ಹುಬ್ಬಿನಮೇಲೆ ಬೀಳಲು ಧನಲಾಭ. ಎರಡು ಹುಬ್ಬಿನ ನಡುವೆ ಬೀಳಲು ಅಪೂರ್ವದ ದರ್ಶನ, ಬಲದ ಕಂಣಿನಮೇಲೆ ಬೀಳಲು ಲಾಭ, ಎಡದ ಕಣ್ಣಿನಮೇಲೆ ಹಾನಿ ತೋರುವದು.

ಬಲದ ಗಲ್ಲದ ಮೇಲೆ ಬೀಳಲು ಐಶ್ವರ್ಯ ಉಂಟಾಗುವದು ಎಡದಗಲ್ಲದ ಮೇಲೆ ಬೀಳಲು ಹೀನ, ಮೂಗಿನ ಮೇಲೆ ಬೀಳಲು ಐಶ್ವರ್ಯಹಾನಿ, ನಡುಮೂಗಿನ ಮೇಲೆ ಬೀಳಲು ದರಿದ್ರತನ, ತುದಿ ಮೂಗಿನ ಮೇಲೆ ಬೀಳು ಮರಣ, ಮೇಲ್ತುಟಿಯು ಮೇಲೆ ಬೀಳಲು ಸುಖಭೋಜನ, ಕೆಳದುಟಿಯು ಮೇಲೆ ಬೀಳಲು ಕಲಹ, ಮುಚ್ಚಿದ ಬಾಯಿ ಮೇಲೆ ಬೀಳಲು ದರಿದ್ರನಾಗುವನು, ಸಂಪನ್ನ ದರಿದ್ರನಾಗುವನು. ಗಲ್ಲದಮೇಲೆ ಬೀಳಲು ಮರಣ, ಹಲ್ಲುಗಳ ಮೇಲೆ ಬೀಳಲು ಹಾನಿ ಯಡದ ಹಿಂಬಡದ ಮೇಲೆ ಬೀಳಲು ಯಡದ ಮೂಸಿಯ

ಪ್ಪೇಲೆ ಬೀಳಲು ಲೇಸು, ಬಲದ ಮೊಸಿಯ ಮೇಲೆ ಬೀಳಲು ಹಾನಿ, ಗಡ್ಡದ ಮೇಲೆ ಬೀಳಲು, ದೇಶತ್ಯಾಗ, ಬಲದ ಕಪಾಳದ ಮೇಲೆ ಬೀಳಲು ನಾಶವುಂಟು, ಯಡದ ಕಪಾಳದ ಮೇಲೆ ಬೀಳಲು ಲೇಸುಂಟು, ಮತ್ತು ವಸ್ತ್ರ ಲಾಭ, ಯಡ ಭುಜದಮೇಲೆ ಬೀಳಲು ಬಾಂಧವರಿಗೆ ಹೀನಾ.

ಬಲದ ಹೆಗಲಮೇಲೆ ಬೀಳಲು ದಂಡಿಗೆ ಸಂಪತ್ತು, ಎಡದ ಹೆಗಲ ಮೇಲೆ ಬೀಳಲು ಶತ್ರುಗಳಭಯ, ಕೊರಳಮೇಲೆ ಬೀಳಲು ಅಲಂಕಾರ ಲಾಭ, ಎಡದ ಕೊರಳಮೇಲೆ ಬೀಳಲು ಚಿಂತೆ ಪರಿಹಾರವು, ಬಲದ ಕೊರಳ ಮೇಲೆ ಬೀಳಲು ಮದುವೆಯಿಲ್ಲದವರಿಗೆ ಮದುವೆಯಾಗುವದು ಯಡದಮುಂಗೈಯಮೇಲೆ ಬೀಳಲು ವೈರಿಗಳು ಸಾಯುವರು, ಬಲದ ಮುಂಗೈ ಮೊಳಕೈ ನಡುವೆ ಬೀಳಲು ಸುಖಭೋಜನ, ವಳಭಾಗದಲ್ಲಿ ಬೀಳಲು ಲೇಸು, ಯಡದ ಮುಂಗೈಯ ಮೊಳಕೈಯ ನಡುವೆ ಬೀಳಲು ರೋಗ.

ವಳಭಾಗದಲ್ಲಿ ಬೀಳಲು ಲೇಸು, ಬಲದ ಅಂಗೈಯ ಮೇಲೆ ಬೀಳಲು ಧನಹಾನಿ, ಯಡದ ಅಂಗೈಯ ವಳಗೆ ಬೀಳಲು ಧನಲಾಭ, ಬಲದ ಹೆಬ್ಬೆರಳಿನಮೇಲೆ ಬೀಳಲು ಹೈನ ಹೆಚ್ಚುವದು, ಹೈನ ಇದ್ದವರಿಗೆ ಮಧ್ಯಮ, ಯಡದ ಹೆಬ್ಬೆರಳಿನಮೇಲೆ ಬೀಳಲು ವ್ಯಸನಮಂದವು, ಬಲಗೈಯ ಬೆರಳುಗಳ ವಳಭಾಗದಲ್ಲಿ ಬೀಳಲು ಕ್ಲೇಶ, ಹೊರಭಾಗದಲ್ಲಿ ಬೀಳಲು ಉಚ್ಚಾಟನ.

ಯಡಗೈಯ ಬೆರಳುಗಳ ವಳಭಾಗದಲ್ಲಿ ಬೀಳಲು ಭಯವು, ಹೊರ ಭಾಗದಲ್ಲಿ ಬೀಳಲು ದರಿದ್ರವ್ಯಾಧಿ, ಯರಡು ಹದಡದ ಮೇಲೆ ಬೀಳಲು ಕಲಹ, ದರಿದ್ರ, ಬಲದ ಬೆರಳುಗಳ ಮೇಲೆ ಬೀಳಲು ಕಂಡಿಕಿಯಮೇಲೆ ಬೀಳಲು ಚಿಂತೆ ತೋರುವದು, ವುಗಳುಗಳಮೇಲೀ ಬೀಳಲು ದರಿದ್ರವು, ಬಲದ ಉಗರುಗಳ ಮೇಲೆ ಬೀಳಲು ಧನಲಾಭ.

ಯದಿಯ ಮೇಲೆ ಬೀಳಲು ಲೇಸು, ಬಲದ ಮೊಲೆಯ ಮೇಲೆ ಬೀಳಲು ಗಂಡಸಿಗೆ ಲೇಸು, ಹೆಂಗಸಿಗೆ ಗಂಡುಸಂತಾನ, ಮಕ್ಕಳಿದ್ದವರಿಗೆ ಸುಖವಿಲ್ಲಾ, ಹೊಟ್ಟೆಯ ಮೇಲೆ ಬೀಳಲು ಮಕ್ಕಳಾಗುವದು, ಇದ್ದವರಿಗೆ ಚಿಂತೆ ಹೇಳುವದು, ಹೊಕ್ಕಳದಲ್ಲಿ ಬೀಳಲು ಸಂತೋಷವು, ಬಲಬಧಿಯ ಮೇಲೆ

ಬೀಳಲು ವ್ಯಾಧಿ, ಯಡದಬದಿಯ ಮೇಲೆ ದೇಶ ತ್ಯಾಗವಾಗುವದು, ಬಲದ ಅಳ್ಳಿಯ ಮೇಲೆ ಬೀಳಲು ದರಿದ್ರವು, ಯಡದ ಅಳ್ಳಿಯಮೇಲೆ ಧನವು.

ಬಲದ ಕೊಂಕಳಲ್ಲಿ ಬೀಳಲು, ಪೀಡಾಕಾರವು, ಯಡದ ಕೊಂಕಳಲ್ಲಿ ಬೀಳಲು ಸ್ತ್ರೀಸಂಭೋಗವು, ನಿರಗಿಯಮೇಲೆ ಬೀಳಲು ಗರ್ಭಿಣಿಯಾಗುವಳು, ಕಿಲ್ಕಟ್ಟಿಯ ಮೇಲೆ ಬೀಳಲು ಮಕ್ಕಳಾಗುವವು, ಇದ್ದವರಿಗೆ ಹೀನವು, ಟೊಂಕದ ಮೇಲೆ ಬೀಳಲು ವಸ್ತ್ರಲಾಭ, ಬಲದಕಟ್ಟಿಯಮೇಲೆ ಬೀಳಲು ವೈರಿಗಳಿಗೆ ಹೀನವು, ಯಡದಕಟ್ಟಿನಮೇಲೆ ಬೀಳಲು ಚೋರರಭಯ.

ಬಲದ ಪಚ್ಚಳದ ಮೇಲೆ ಬೀಳಲು ಸ್ತ್ರೀಲಾಭವು, ಬ್ರಹ್ಮನ ತಲಿಯ ಮೇಲೆ ಬೀಳಲು ಮರಣ, ರಾವಿನಮೇಲೆ ಬೀಳಲು ಹೀನ, ಭುಜದಮೇಲೆ ಬೀಳಲು, ದರಿದ್ರವು, ಉಪಸ್ಥಿಯ ಮೇಲೆ ಬೀಳಲು ರಂಡಿಯಾಗುವಳು, ಲಿಂಗದ ಮೇಲೆ ಬೀಳಲು ಐಶ್ವರ್ಯಬಪ್ಪದು, ಯಡದ ಲಿಂಗದಮೇಲೆ ಬೀಳಲು ಮರಣ, ಬಲದಲಿಂಗದ ಮೇಲೆ ಬೀಳಲು ವಾಹನಲಾಭ, ಬೆನ್ನಿನಮೇಲೆ ಬೀಳಲು ದರಿದ್ರವು, ಯಡದ ಮೊಣಕಾಲ ಸಂದಿನೊಳು ಬೀಳಲು ವಾಹನ ಲಾಭ, ಇದ್ದವರಿಗೆ ಹೀನವಾಗುವದು.

ಬಲದ ಮೀನಗಂಡದಮೇಲೆ ಬೀಳಲು ಲೇಸು, ಯಡದಮೀನಗಂಡದ ಮೇಲೆ ಬೀಳಲು ದರಿದ್ರ, ಬಲದ ಕಾಲಹರಟಿಯ ಮೇಲೆ ಬೀಳಲು ಸ್ತ್ರೀಸುಖ ಯಡದ ಕಾಲಹರಟಿಯ ಮೇಲೆ ಬೀಳಲು ಕಲಹವು, ಬಲದ ಮೊಣಕಾಲ ಮೇಲೆ ಬೀಳಲು ಮದುವೆಯಿಲ್ಲದವರಿಗೆ ಮದುವೆ ಆಗುವದು, ಆದಂಥವರಿಗೆ ಹೀನ, ಆದಿತ್ಯವಾರ ಬಿದ್ದರೆ ಕೂಳು ಇಲ್ಲದೆ ಯಾವದೊಂದು ಕಾರಣದಿಂದ ಸಂಕೋಲೆ ತಪ್ಪದು.

ಬಲದ ಕಾಲಹರಡಿನಮೇಲೆ ಬೀಳಲು ಲೇಸು, ಯಡದ ಕಾಲಹರಡಿನ ಮೇಲೆ ಬೀಳಲು ಹೀನ, ಎಗಡೂಪಾದ ಹರಡಿನಮೇಲೆ ಬಿದ್ದರೆ ಕಷ್ಟ, ಬಲದುಳ ಹರಡಿನಮೇಲೆ ಬೀಳಲು ಶುಭವು, ಬಲದ ಹಿಮ್ಮಡದ ಮೇಲೆ ಬೀಳಲು ಸ್ನೇಹಿತರು ಬರುವರು, ಯಡದ ಹಿಮ್ಮಡದ ಮೇಲೆ ಬೀಳಲು ಹೀನ, ಬಲದ ಮೇನಾಲು ಮೇಲೆ ಬೀಳಲು ದರಿದ್ರ, ಯಡದಮೇಣಾಲ ಮೇಲೆ

ಬೀಳಲು ಲೇಸು, ಬಲದ ಅಂಗಾಲದ ಕೆಳಗೆ ಬೀಳಲು ಬಡವರಿಗೆ ಲೇಸು, ಶ್ರೀವ್ಯಸ್ತರಿಗೆ ಹೀನ, ಯಡದ ಅಂಗಾಲದಮೇಲೆ ಬಿದ್ದರೆ ಕುತ್ತ.

ಬಲಗಾಲ ಬೆರಗುಗಳ ಮೇಲೆ ಬಿದ್ದರೆ ಹಾನಿ, ಯಡಗಾಲ ಬೆರಳುಗಳ ಮೇಲೆ ಬಿದ್ದರೆ ರಾಜಭಯ, ಬಲಗಾಲ ಉಗರಿನ ಮೇನ ಬೀಳಲು ಬಲು ಕ್ಷಯ, ಯಡಗಾಲ ಉಗರಿನ ಮೇಲೆ ಬಿದ್ದರೆ ರಾಜಮನ್ನಣೆ, ಹೆಡಕಿನಮೇಲೆ ಬಿದ್ದರೆ ದರಿದ್ರ, ಯೇಳುವಾಗ ಬಿದ್ದರೆ ಲಾಭ, ಮುಂದೆ ಬಿದ್ದರೆ ಲೇಸು, ಹಿಂದೆ ಬಿದ್ದರೆ ಹೈನ, ಬೇದಕಡಿಯ ಮೇಲೆ ಬೀಳಲು, ಪುಷ್ಪ ಪರಿಮಳದಫಲ.

ಯಡದಕಡೆ ಬಿದ್ದರೆ ಕೇಡಿನಸುದ್ದಿ, ಬಿದ್ದು ಹಲ್ಲಿಸತ್ತರೆ ಫಲಗಳ ಕೆಡಿಸುವದು, ಪಾದದಿಂದ ಮೇಲಕ್ಕೆ ಏರಿದರೆ ಲೇಸು, ಇಳಿದರೆ ಕಷ್ಟ, ತುದಿಗೆ ಲಾಭ, ಗಂಡಸಿನ ಉಡಗಿತೊಡಗಿಯ ಮೇಲೆ ಬೀಳಲು ಸಂಪತ್ತು, ಹೆಂಗಸಿನ ಉಡಿಗೆತೊಡಿಗೆಯ ಮೇಲೆ ಬಿದ್ದರೆ ಆಭರಣ ಹಾನಿ,

ಎಡದಲ್ಲಿ ಬಿದ್ದು ಬಲಕ್ಕೆ ಯೇರಿದರೆ ಮರಣಸುದ್ದಿ, ಎಡದಿಂದ ಬಲಕ್ಕೆ ಇಳಿದರೆ ಕಲಹ ಉಂಟು, ಹಿಂಬಾಗದಲ್ಲಿ ಬಿದ್ದು ಮುಂಭಾಗಕ್ಕೆ ಏರಿದರೆ ಅರ್ಥಲಾಭ, ಮುಂದುಗಡೆ ಬಿದ್ದು ಹಿಂದ ನಡುಏರಿದರೆ ಬಡತನ ಪ್ರಾಪ್ತಿಯಾಗುವದು, ಬೆನ್ನಮೇಲೆ ಬಿದ್ದು ಮೊಂಡಿಯಮೇಲಕ್ಕೆ ಏರಿ ಇಳಿದರೆ ಕಲಹ, ಸತ್ತ ಗವಳಿ ಮೈಮೇಲೆ ಬೀಳಲು ಪರರ ಸಾವು ಕಾಣುವನು. ಇಲ್ಲವೆ ಹೆಣವನ್ನು ಹೊರುವನು.

ಗವಳಿ ಮೈಮೇಲೆ ಹೊತ್ತ ಹೋದರೆ ಚಿಂತೆ ದುಃಖಾ. ಗೌಳಿ ಹೊಟ್ಟೆಮೇಲಾಗಿ ಬೀಳಲು ವ್ಯಾಧಿ ತೋರುವದು, ನಡಿದಾಗ್ಯೆ ಬೀಳಲು ಆಲಸ್ಯದಿಂದ ಆಗುವದು, ನಿಂತಿದಾಗ ಬೀಳಲು ಬೇನೆ ಆಗುವನು, ಕುಳಿತಿದಾಗ ಬೀಳಲು ಎಂಟು ದಿನಾ ಫಲಾ ಆಗುವದು.

ಮಲಗಿದಾಗ ಬೀಳಲು ನಾಲ್ಕು ದಿವಸದೊಳಗೆ ಫಲವಕ್ಕು. ಗೌಳಿ ಆದಿತ್ಯವಾರ ಮಂಗಳವಾರ ಶನಿವಾರ ಬೀಳಲು ಹಿನ್ನಾತದು ಕೇಡು. ಸೋಮವಾರ ಬುಧವಾರ ಶುಕ್ರವಾರ ಗುರುವಾರ ಬೀಳಲು ಲೇಸು ತೋರು

ವದು, ಗಂಡಸಿಗೆ ಬಲಕ್ಕೆ ಹೆಂಗಸಿಗೆ ಎಡಕ್ಕೆ ಬೀಳಲು ಲೇಸು, ಹೀನ ವಾದುದಕ್ಕೆ.

## ದೋಷ ಕಳಿಯುವ ಕ್ರಮು

ತಂಣೀರ ಸ್ನಾನ ಸ್ವತ ವಸ್ತ್ರ ವಿಧಿಯುನ್ನುಟ್ಟು ಕರಿ ಹತ್ತಿಯುವಳಗೆ ರೇಶ್ಮಿಯುಳ ಹೊಯಿದು ಕೂಡಿಸಿ ಬತ್ತಿಯು ಹೊಸದಾ ತುಪ್ಪಾ ಎಂಣಿ ಎರಡ ನ್ನು ಕೂಡಿಸಿ ಹೊಸ ಪಣತಿ ಹಚ್ಚಿ ತಂದು ಕುಲದೇವರ ಮುಂದೆ ಇಡಲು ದೋಷ ಪರಿಹಾರವಾಗುವದು

## ವಾರ ದೋಷಕ್ಕೆ ಊಟದ ವಿಷಯು

ಆದಿತ್ಯವಾರ ಬಿದ್ದರೆ ಮೊಸರು ಅನ್ನಾ, ಸೋಮುವಾರ ಬಿದ್ದರೆ ಮಂಡಿಗಿ, ಮಂಗಳವಾರ ಬಿದ್ದರೆ ಹಾಲು ಅನ್ನಾ ಬುಧವಾರ ಬಿದ್ದರೆ ದೋಷ, ಗುರುವಾರ ಬಿದ್ದರೆ ಪಾಯುಸ, ಶುಕ್ರವಾರ ಬಿದ್ದರೆ ಸಾರಿನಿ ಶನಿವಾರ ಬಿದ್ದರೆ ಎಂಣಿ, ಅನ್ನಾ, ಈ ಪ್ರಕಾರದಿಂದ ಊಟವು ನಿವೃತ್ತಿ ಆಗುವದು. ದೋಷ.

## ಹಲ್ಲಿ ನೆಲದ ಮೇಲೆ ಬಿದ್ದ ಫಲ

೧ ಲಾಭ, ೨ ವಾರ್ತೆ, ೩ ಕಲಹ, ೪ ವ್ಯಾಕುಲವುನಾ, ೫ ಅರ್ಥಫಲ ೬ ಬಂಧನ, ೭ ಕಾರ್ಯಸಿದ್ಧಿ, ೮ ಕಲಹ, ೯ ಅಪಮೃತ್ಯ, ೧೦ ಅರ್ತ ಫಲ, ೧೧ ಸ್ತ್ರೀಲಾಭ, ೧೨ ಕಾರ್ಯಸಿದ್ಧಿ, ೧೩ ದೇಶಹವಣಿ, ೧೪ ಸರ್ವ ಸಿದ್ಧಿ, ೧೫ ಸ್ತ್ರೀಯರ ಫಲವು, ೧೬ ವೈರಿಭಯ, ೧೮ ಕಲಹ, ೧೯ ಅಪ ಮೃತ್ಯ, ೨೦ ನಿರ್ಭಯ, ಹೋದವ ಹೋದಕಿಯ ಮೇಲೆ ದರಿದ್ರ ತಿಂಗ ಳಿಗೆ ಆದ ಅಳತಿ ಫಲ.

---

# ಹಸ್ತ ಸಾಮುದ್ರಿಕ

ಆಯುಷ್ಯದ ರೇಖೆಯಿಲ್ಲದವರಿಗೆ ಅರ್ಧ ರೇಖಾ ಇದ್ದ ಫಲವೇನು ಹಸ್ತದಲ್ಲಿ ಮೂರು ರೇಖಾ ಉಂಟು. ಆಯುಷ್ಯ ಗಂಡ ಹೆಂಡರ ರೇಖಾ ಉಂಟು ತುದಿಯಲ್ಲಿ ಕೂಡಿರಬೇಕು. ಕಿರಿಬೆರಳಿನಿಂದ ತರ್ಜನ್ಯ ಬೆರಳಿಗೆ ರೇಖಾ ಬಂದಿರಲು ನೂರು ವರುಷ ಆಯುಷ್ಯವು.

ಕಿರಿಬೆರಳು ಅನಾಮಿಕಬೆರಳು ಮೂರು ಸಂಡಿಕೆಯು ದಾಟಿದರೆ ನೂರು ವರುಷ ಬಾಳುವನು. ಸವನಾಗಿರಲು ಎಂಬತ್ತು ವರುಷ ಬಾಳುವನು. ಉದ್ದಿನಕಾಳಷ್ಟು ಕಡಮಿ ಇರಲು, ಅರವತ್ತುವರುಷ ಬಾಳುವನು. ಅದಕ್ಕೂ ಕಡಮಿ ಇರಲು ನಾಲ್ವತ್ತು ವರುಷ ಬಾಳುವನು. ಹಣಿಯು ಆಯುಷ್ಯ ಹಣಿಯು ಮೇಲೆ ಯೈದುರೇಖಾ ಇರುವವನ ನೂರು ವರುಷ ಬಾಳುವನು. ನಾಲ್ಕು ರೇಖೆ ಇರಲು ಎಂಬತ್ತು ವರುಷ ಬಾಳುವನು, ಮೂರು ರೇಖೆ ಇರಲು ಅರವತ್ತು ವರುಷ ಬಾಳುವನು. ಎರಡು ರೇಖೆ ಇರಲು ನಾಲ್ವತ್ತು ವರುಷ ಬಾಳುವನು. ವಂದು ರೇಖೆಯಿರಲು ಅಲ್ಪ ಆಯುಷ್ಯ ಎಂದು ಅರಿವದು.

ಹಸ್ತದಲ್ಲಿ ಅಂಗೈ ವಳಗಣ ತರ್ಜನಿ ಬೆರಳರೇಖಾ ಬಂದಿರಲು ಅದು ಧನರೇಖೆಯೆಂದೆನಿಸುವದು, ಅದೇ ರೇಖಾ ನಡುವಿನ ಬೆರಳಿಗೆ ಬಂದಿರಲು ಅವನಿಗೆ ಗಂಡಾಂತರವು ಅದೇ ರೇಖೆ ಅನಾಮಿಕೆ ಬೆರಳಿಗೆ ಬಂದಿರಲು ವಿದ್ಯಾರೇಖಾ ವಿದ್ಯಾದಲ್ಲಿ ಸಂಪನ್ನರಾಹರು ಅದೇರೇಖೆ ಕಿರಿಬೆರಳಿಗೆ ಬಂದಿರಲು ಚತೋರ್ಮೊಹನದ ಗಂ

ಡಾಂತರವು. ಧನರೇಖಾ, ಅಡ್ಡರೇಖಾ ಬಂದಿರಲು ಕ್ರತಿರೆಯೆನಿಸಿ ಕೊಂಬುವವು. ಹೆಬ್ಬಳ್ಳ ಹದರ ಮೇಲೆ ರೇಖಾ ಇರಲು ದೊಡ್ಡರೇಖಾ ಇರಲು-ಗಂಡುಮಕ್ಕಳ ಫಲವು. ಸಣರೇಖಾ ಇರಲು ಹೆಣ್ಣುಮಕ್ಕಳ ಫಲವು, ಕಿರಿಬೆರಳ ಹದರಮೇಲೆ ರೇಖಾ ಇರಲು ಗೆಳೆಯರ ಸಾಲಾವಳಿ ಆ ರೇಖಾದ ಮೇಲೆ ಅಡ್ಡ ರೇಖಾ ಬಂದಿರಲು ಮರಣ, ಹರಹರಕವಾಗಿರಲು ಕಂಟಕ ತೋರಿ ಬಯಲಾಗುವದು. ಹೆಬ್ಬೆರಳ ಮೇಲೆ ಕಂಡಿಕೆಯೊಳಗೆ ಗೋದಿಕಾಳನೋಪಾದಿ ಇರಲು ದೇಶವಂದಿತರಾಹರು. ಹೊರಗಣ ಕಂಡಿಕೆಯ ಮೇಲೆ ಗೋದಿಕಾಳನೋಪಾದಿ ಇರಲು ಹೊರದೇಶಿವುಂಟು. ಸಹಜವು.

ಹೆಬ್ಬರಳ ವಳಭಾಗದಲ್ಲಿ ಮೂರು ರೇಖಾಇರಲು ಮೇಲಿಂದು ಅನ್ನರೇಖಾ, ನಡುವಿನದು ಪಶುವಿನರೇಖಾ ಕೆಳಗಣದ ಭೂಮಿ ಸಾಲಾವಳಿ ಅದರಿಂದ ಕೆಳಗೆ ದೊಡ್ಡ ರೇಖೆ ಇರಲು ಅಮೃತಯೆನಿಸಿ ಕೊಂಬುವದು. ಅದರಿಂದ ಮೇಲೆ ಅಡ್ಡರೇಖಾ ಇರಲು ಸರ್ವಕ್ಕೆ ಹಾನಿ ತೋರುವದು.

ಬೆರಳುಗಳ ತುದಿಯಲ್ಲಿ ಚಕ್ರವುಷ್ಟ ಇರಲು ಮಹಾಲೇಸು, ಶಂಕು ಇರಲು ಲೇಸಿಲ್ಲವು. ತರ್ಜನಿಯ ಬೆರಳಿನ ನಡು ಕಂಡಿಕೆಯು ಸುತ್ತರೇಖಾ ಇರಲು ಆ ಅಂದಣ ಯೇರುವನು, ಕಿರಿಬೆರಳ ಕೆಳಗೆ ವಂದು ರೇಖಾ ಇರಲು ವಬ್ಬ ಗಂಡಸು ಎರಡು ರೇಖಾ ಇರಲು ಇಬ್ಬರು ಗಂಡರು, ಮೂರು ರೇಖಾ ಇರಲು ಮೂರುಮಂದಿ ಗಂಡರು ಅದಕ್ಕೂ ಹೆಚ್ಚಾಗಿರಲು ವೇಶ್ಯೆಯುಳು.

ಹಸ್ತದೊಳಗೆ ಪದ್ಮ ಇರಲು ಕೋಟಿ ಹೊನ್ನಿನ ಧೊರಿಯೆನಿಸಿ ಕೊಂಬುವನು, ಹಸ್ತದಲ್ಲಿ ಕೊರಡಿನಂತೆ ಮುಳ್ಳಿನಂತೆ ಇರಲು ಬಹಳ ರೇಖೆ ಇರಲು ಧನನಾಶವಾಗುವದು.

ಹೊಳಕೈಯಮೇಲೆ ಕೆಳಗಣ ರೇಖಾ ಸುತ್ತಿರಲು ದೇವಮಣಿ ಚಿಂತಾಮಣಿ ಯೆನಿಸುವದು, ಕೊರಳಲ್ಲಿ ಮೂರು ರೇಖೆ ಇರಲು ಬಹಳ ಲೇಸುಂಟು, ಹೆಚ್ಚಾಗಿರಲು ಕಂಟಕ, ಭರಣಿಯೆನಿಸಿಕೊಂಬುವದು, ಹಸ್ತದಮೇಲೆ ಕೇಶಗಳು ಮಹಾಸೂಕ್ಷ್ಮವಾಗಿರಲು ಲೇಸುಂಟು, ಬಲಸುಳಿ ಇರಲು ಅಂದಣ ಸಂಪತ್ತು ಯೇರುವನು ಹೊಕ್ಕಳ ಬಲ ಮೂಡಿ ಇರಲು ರಾಜಪೂಜಿತನಾಗುವನು. ಕುಚಗಳು ಸಮನಾಗಿ ಇರಲು ಲೇಸುಂಟು, ಹಿರಿದುಕಿರಿದು ಇರಲು ಲೇಸಿಲ್ಲಾ ಹುಬ್ಬಿನಲ್ಲಿ ಸುಳಿಇರಲು ಐಶ್ವರ್ಯಸಂಪದವು, ಹಸ್ತದೊಳಗಿನ ರೇಖಾ ಕೆಂಪಾಗಿರಲು ಮಹಾಸುಖವು

ಹವಳ ವರ್ಣವಾಗಿರಲು ಮಧ್ಯಮ ಕಪ್ಪಾಗಿರಲು ಕನಿಷ್ಟ, ಹಸ್ತ ಬೆರಳು ಸಂದುಬಿಡದೆ ನಿಲ್ಲಲು ಧನನಿಲ್ಲುವದು ಸತ್ಯವು, ಸಂದು ಬಿದ್ದು ಇರಲು ರೇಚವಾಗಿರಲು ಅಂಗಳ ನಾಲಿಗಿ ಕೆಂಪಾಗಿರಲು ಮತ್ತು ಮುಂಬೆರಳು ಕೆಂಪಾಗಿರಲು ಲೇಸು. ಅಂಗುಳ ಅಳಸವಾಗಿರಲು ಮಧ್ಯಮ, ಕಪ್ಪಾಗಿರಲು ಕನಿಷ್ಟ, ತುಟಿ ರಕ್ತವಾಗಿರಲು ಮುತ್ತೈದಿಯಳು ಕಪ್ಪಾಗಿರಲು ಬಿಡಕೆ ಇಲ್ಲವೆ ರಂಡಿಯಾಗುವಳು. ದಂತ ಮೂವತ್ತೆರಡು ಪೂರ್ಣವಾಗಿರಲು ಪೂರ್ಣಬಾಳುವಳುಕಡಮಿ ಇರಲು ಅಲ್ಪಆಯುಷ್ಯವು.

ಮೇಲಣದಂತೆ ಕೆಳಗಣದಂತೆ ಹೆಚ್ಚು ಕಡಿಮೆಯಾಗಿರಲು ಜ್ಯಾರಿಣಿಳು, ದಂತಸಂದು ಕಿಂಡಿಕಿಂಡಿ ಇರಲು ಮಾತು ನಿಲ್ಲವು

ನಾಲಿಗಿ ಮನಿಯಾಗಿರಲು ಚಪಲತ್ವನಾಗುವನು, ಮಂಡನಾಗಲು ಮಂದರಯೆನಿಸಿಕೊಂಬುವದು, ಗಲ್ಲದಮೇಲೆ ಹಸರು ರೇಖಾ ಇರಲು ಅಲ್ಪ ಆಯುಷ್ಯವು. ಗಲ್ಲ ಕುಣಿಕಿ ಬಿದ್ದಿರಲು ಬೇಗ

ರಂಡಿಯಾಗುವಳು, ಕಂಣು ಯುರಳಿನೋಟಾ ಪಾರಿವಾಳದನೋಟಾ ಮೊನದನೋಟಾ ಇರಲು ಮಹಾಲಕ್ಷಣವಂತರು ಬೆಕ್ಕಿನನೋಟಾ ಬೆಕ್ಕಿನ ಕಣ್ಣು ಕಾಗಿಯನೋಟಾ, ಹಾಲಕ್ಕಿನೋಟಾ, ಇರಲು ಮಹಾ ದರಿದ್ರರು, ಹೆಂಣಿಗೆ ಎಡಗಂಣು ಮೆಳ್ಳಿ ಇದ್ದರೆ ಲೇಸು, ಗಂಡಿಗೆ ಬಲಗಂಣು ಮೆಳ್ಳಿ ಇರಲು ಶುಭವು.

ಕಾಲು ಹೊಸದು ನಡೆದರೆ ಬೇಗರಂಡಿಯಾಗುವಳು, ಅಂಗೈ ವಳಗ ಗುಂಭವಾಗಿ ಬಹಳ ನೀರುನಿಲ್ಲಲು ಭಾಗ್ಯವಂತರಾಪರ, ಮೇಲಗೈವವಾಗಿರಲು ಕಂಣೊಳಗಿನ ಗೊಂಬಿಯು ಷತ್ತ ಕೆಂಪುರೇಖಾ ಇರಲು ಶುಬವಾದ ನೋಟಗಳು, ಬಳಿರೇಖಾ ಇರಲು ಮಧ್ಯಮಾ ಕರೇರೇಖಾ ಇರಲು ಕನಿಷ್ಟ ನಾಶಗೊಂಬುವವು ಉಪಸ್ತಿಮೇಲೆ ಸುಳಿ ಇರಲು ಗಂಡನನ್ನು ಬಿಡಿಸಿಕೊಂಬುವಳು, ಟೊಂಕದ ಮೇಲೆ ಸುಳಿ ಇರಲು ಮಕ್ಕಳು ಸಾವುವವು. ಬೆನ್ನಮೇಲೆ ಸುಳಿ ಇರಲು ಅಂಣತಮ್ಮಗಳಿಗೆ ಮರಣ. ಮುಂದೆಲಿಯಮೇಲೆ ಸುಳಿ ಇರಲು ಗಂಡನಿಗೆ ಮರಣಾ, ಗಂಡಸಿಗೆ ಇದ್ದರೆ ಹೆಂಣಮಕ್ಕಳಿಗೆ ಮರಣಾ ಶಿಖಿಯಮೇಲೆ ಸುಳಿಇರಲು ತಂದಿತಾಯಿ ಮರಣ ವುಪಸ್ತಿ ಹಿಗ್ಗಿರಲು ಬೇಗ ರಂಡಿಯಾಗುವಳು, ಉದ್ದನಾಗಿರಲು ಜ್ಯಾರಿಣಿಯಾಗುವಳು, ಸಂಣವಾಗಿರಲು ಸದಾವಾಗಿರುವರು, ಪುರಷನ ಶಿಶನ ಉದ್ದವಾಗಿರಲು ದರಿದ್ರನು, ತೋರನಾಗಿರಲು ಕೋಪಿ ಹೀನನು, ಸಂಣಾಗಿರಲು ಪುತ್ರರರ ಹಡಿದು ಸುಖವಾಗಿರುವರು, ಹೆಂಣಿಗೆ ಎದಿಯಮೇಲೆ ಕೂದಲು ಇರಲು ಕನಿಷ್ಟ. ಬೊಂಗಿ ತೊಡಿಯಮೇಲೆ ಕೂದಲು ಇರಲು ಮಕ್ಕಳು ಸಾವುರು, ಮೊಳಕಾಲ ಮೇಲೆ ಕೂದಲು ಇರಲು ರಂಡಿಯಾಗುವಳು, ಬೆನ್ನಿನಮೇಲೆ ಕೂದಲು ಇರಲು ದರಿದ್ರಳಾಗುವಳು, ಹೆಂಣು ಅತಿ ಲಂಭವಾಗಿದ್ದರೆ

ಅತಿ ಉದ್ದವಾಗಿದ್ದರೆ ಅತಿ ಗಿಡ್ಡಾದರೆ ಅತಿ ಕಪ್ಪಾದರೆ ಬಹು ಕೆಂಪಾದರೆ ಹೀನವು. ಪಾದ ನೆಲಕ್ಕೆ ಹೊಂದಿದ್ದರೆ ಸಹೃವವನು ಪಾದದಬೆರಳು ಆವಿಯ ಬೆನ್ನ ಹಾಗೆ ಇರಲು ಶುಭಲಕ್ಷಣವು, ಪಾದದ ತರ್ಜನಿಯ ಬೆರಳು ಉದ್ದವಾಗಿದ್ದರೆ ಗಂಡನ ಬಿಡಿಸಿಕೊಂಬುವಳು, ನಡುವಿನಬೆರಳು ಉದ್ದವಾಗಿದ್ದರೆ ರೋಗಿಯಾಗುವಳು, ಕಿರಿಬೆರಳು ನೆಲಕ್ಕೆ ಹತ್ತದೆ ಮೇಲಕ್ಕೆ ಇರಲು ರಂಡಿಯಾಗುವಳು, ಪಾದದಲ್ಲಿ ಚಕ್ರಪುಷ್ಪ ಊರ್ಧ್ವ ರೇಖಾ ಇರಲು ಪದ್ಮರೇಖಾ ಇರಲು ಮಹಾಲಕ್ಷಣವಂತರಾಗಿರುವರು. ಶೂಲದ ಹಾಗೆ ಅಡ್ಡ ರೇಖಾ ಇರಲು ಮಹಾದರಿದ್ರವು, ಪಾದದೊಳು ಹೋಳುಬಿದ್ದಿರಲು ಅಲ್ಪಆಯುಷ್ಯ ಇನ್ನುಪ್ಪಿ ಹೊಡ್ಡಿಯಹಾಗೆ ಇರಲು ಬಹಳ ಮಕ್ಕಳ ಹಡಿವಳು, ಅಂಗದ ಮೇಲೆ ಬಹಳ ಕಕೋಲಿ ಇರಲು ಬಹಳ ಭಾಗ್ಯವಂತರು ಹೊಕ್ಕಳದಮೇಲೆ ಬೆಕ್ಕಿನ ಬಂಣಯಿರಲು ದವಳವರ್ಣದ ಕೂದಲು ಇರಲು ಅರಸನ ಮಗಳಾದರೂ ದಾಸಿಯಾಗುವಳು.

---

## ಚೇಳು ಕಡದದ್ದಕ್ಕೆ

ಕಿರಕಸಾಲಿಯಬೇರು, ಬೇವಿನಯಲಿಗಳು, ಪಟಕ ಈ ಮೂರು ಸರಿಯಾಗಿ ಲಿಂಬಿಹುಳಿಯಲ್ಲಿ ಅರೆದು ಗುಳಿಗಿ ಮಾಡಿ ಅಂಬಿಲದಲ್ಲಿ ಅರೆದು ಹಚ್ಚಿ ಬೆಂಕಿ ಕಾಸಲು ಚೇಳಿನಬೇನೆ ಹೋಗುವದು.

## ತಿಗಳು ನೆಕ್ಕುವದಕ್ಕೆ

ಜಾಜಿಯಮೊಗ್ಗೆಯನ್ನು ಆಡಿನ ಮೂತ್ರದಲ್ಲಿ ಅರದು ತಿಗಳು ಹತ್ತಿದಲ್ಲಿ ಪೂಸಲು ವಾಣ್ಗು.

## ಬುದ್ಧಿ ಹೆಚ್ಚುವದಕ್ಕೆ

ಬಜಿ, ಸಕ್ಕರಿ, ನೆಲ್ಲಿಚೆಟ್ಟು, ಈ ಮೂರನ್ನೂ ಅರೆದು ಜೇನತುಪ್ಪದಲ್ಲಿ ಇಲ್ಲವೆ ತುಪ್ಪದಲ್ಲಿ ಕಲಸಿ ಮೆಲ್ಲಲು ಬುದ್ಧಿ ಹೆಚ್ಚುವದು.

# ವೈದ್ಯ ಶಾಸ್ತ್ರ

## ಹೊಲಿ ಕುಟ್ಟಿಗೆ

ಚಿಟ್ಟ ಅವಡಲಯಲಿ ನಾಲ್ಕು, ಬಳ್ಳೊಳ್ಳಿ ಬೇಳ ೯, ಮೆಣಸು ೯, ಲವಂಗ ಮೂರು, ಈ ನಾಲ್ಕು ಜೀನಸು ಮರ್ಧಿಸಿ, ತಗೊಳ್ಳುವದು ಇದಕ್ಕೆ ಪಥ್ಯ- ನಂಜಿನಬದಕು ವರ್ಜ ಸಪ್ಪನ್ನ ಜೋಳದರೊಟ್ಟಿ, ಸಪ್ಪನ್ನ ಮುದ್ದಿ, ಸಪ್ಪನ್ನ ಕಡಬು ಉಂಬುವದು. ೭ ದಿನ ಪಥ್ಯ ಮಾಡುವದು. ಮೇಲಿನ ಜೀನಸು ಸಂಜಿಗೂ ಮುಂಜಾನೆಯೂ ತಗೋಬೇಕು. ರೋಗಮಾಣ್ಗು

## ಗರ್ಭಿಣಿಗೆ ರಕ್ತಹರಿದರೆ

ಕಿರಕಸಾಲಿರಸ, ಸಕ್ಕರಿಯಲ್ಲಿ ಕೊಳ್ಳಲು ಮಾಣ್ಗು.

## ಚಿಬ್ಬು, ತದ್ದು, ಬಂಗು ತಿಮರುಗಳಿಗೆ

ಅವಡಲಬೇರು, ಕತ್ತಿಲದ್ದಿ, ಮದ್ದುಗುಣಿಕಿ ಬೂದಿ, ಅರಿಷಣ, ಸಜ್ಜಿ ಕಾರ, ಇವನ್ನು ಒಳ್ಳೇ ಎಂಣಿಯಿಂದ ಅರೆದುಹಚ್ಚಲು ನಾನಾತರದ ತಿಮರು ಮಾಣ್ಗು.

## ಇಸಬಿಗೆ

ಶಂಕಪಾಷಾಣವನ್ನು ಯಕ್ಕಿ ಹಾಲಲ್ಲಿ ಅರೆದು ಪೂಸಲು ಮಾಣ್ಗು.

## ಮುಟ್ಟು ತಡೆದದ್ದಕ್ಕೆ

ಹೊಲದಲ್ಲಿ ಇರುವ ಹತ್ತಿಬೇರಿನತೋಟರಸ ೩ ತೊಲಿ, ಕಲ್ಲುಸಕ್ಕರಿ ೧ ತೊಲಿ, ೧ ಮಾಸಿ ಕುಂಕುಮ, ೧ ಮಾಸಿ ಕೇಸರಿ ಇವುಗಳನ್ನು ಆಕಳ ಹಾಲಲ್ಲಿ ಅರೆದು ಕುಡಿಸುವದು. ಮೂರುದಿನ ಅಥವಾ ಏಳುದಿನಕ್ಕೆ ಮುಟ್ಟು ಕಾಣುವದು. ಪಥ್ಯ- ಅನ್ನ ಆಕಳಹಾಲು ಉಂಬುವದು.

## ಗರ್ಭ ನಿಲ್ಲುವದಕ್ಕೆ

ವಂದು ನವಟಾಕ ಯಳ್ಳಯೆಂಣಿಯಲ್ಲಿ ಬಾಳಿಯ ಮೊಗ್ಗಿಯನ್ನು

ಕುಟ್ಟಿದರಸ, ೬ ತೊಲಿ ಹಾಕಿ ಕಲಸಿ ೧,೨, ಮುಟ್ಟಾದಮೇಲೆ ಕೊಳ್ಳುವದು ೫,೬, ದಿವಸದವರೆಗೂ ತೆಗೆದುಕೊಂಬುವದು, ದಿನಕ್ಕೆ ಒಂದುಬಾರಿ ಕೊಳ್ಳುವದು. ಪಥ್ಯ— ಸಪ್ಪನ್ನ ಅನ್ನಾ, ಸಪ್ಪನ್ನಸಾರು, ಊಟಮಾಡಬೇಕು.

## ಸಮಸ್ತ ಅಜೀರ್ಣಕ್ಕೆ

ಯುಕ್ಕಿಬೇರು, ಚಿತ್ರಮೂಲದಬೇರು, ಗಂಟುಬಾರಂಗಿ ಕೊಡಸಿಗೆ, ಇಂದ್ರಜವಿ, ಯಾವಕ್ಷರ, ಸೈಂಧಲವಣ, ಸಂವತ್ಸರಲವಣ, ಸಣ್ಣಹಿಪ್ಲಿ, ಇವುಗಳನ್ನು ಸಮನಾಗಿ ತೆಗೆದುಕೊಂಡು ಬಿಸಲಲ್ಲಿ ಒಣಗಿಸಿ ಚೂರ್ಣಮಾಡಿ ಮೂರು ಬೆರಳಿಗೆ ಬಂದಷ್ಟು ದಿನಕ್ಕೆ ಎರಡುಸಾರೆಯಂತೆ ೭ ದಿನ ಅಥವಾ ೧೪ ದಿನ ತಕ್ಕೊಳ್ಳಲು ಆ ಸಮಸ್ತ ಅಜೀರ್ಣ ಪರಿಹಾರವಾಗುವದು.

## ಸರ್ವವಾತಕ್ಕೆ

ಇಂಗು ೧ ಗದ್ಯಾಣ, ಬಜಿ ೨ ಗ, ಚಿತ್ರಮೂಲ ೩ ಗ, ಸುಂಠಿ ೪ ಗ, ಅಜಮೋದ ೫ ಗ, ಅತಿಬಜಿ ೬ ಗ, ಅಣಲಿಕಾಯಿ ೭ ಗ, ಹಿಪ್ಪಲಿ ೮ ಗ, ಕೋಷ್ಟ ೯ ಗ, ಇವೆಲ್ಲವನ್ನು ಚೂರ್ಣಮಾಡಿ ಆಕಳತುಪ್ಪ, ಬೆಲ್ಲದಿಂದ ಕೊಳ್ಳಲು ಅತಿಸಾರ ಎದೆಯುಶೂಲಿ. ಪಾರ್ಶ್ವಶೂಲಿ ಮೊದಲಾದ ಸರ್ವ ಶೂಲೆಗಳೆಲ್ಲ ಮಾಣ್ಗು.

## ಸರ್ವ ಶೂಲೆಗಳಿಗೆ

ದೆವ್ವ ಬಾಳಿಯಲಿ ತಂದು, ತುಸು ಬೆಂಕಿಕಾಸಿ ಅದನ್ನು ಒಡಮುರದು ಹಿಂಡಿ ರಸವ ತೆಗೆದು ಒಂದು ಬೋಗೋಣಿಯಲ್ಲಿ ಹಾಕಿ ೧ತೊಲಿ ಬಳ್ಳೊಳ್ಳಿ ತೊಲಿ ॥. ಇಂಗು, ತೊಲಿ ॥. ಸಾಸವಿ, ೧ ತೊಲಿ ಇಲಣ, ೧ ತೊಲಿ ರಾಗಿಹಿಟ್ಟು ಇಲ್ಲವೆ ಜೋಳದಹಿಟ್ಟು, ಈ ೫ ಜೀನಸು ಸಣ್ಣಾಗಿ ಅರೆದು ಆ ರಸದಲ್ಲಿ ಕಲಸಿ ಒಲಿಯಮೇಲಿಟ್ಟು ಕುದಿಸಿ, ಆದಮೇಲೆ ಬೇನೆ ಇದ್ದಲ್ಲಿಗೆ ಹಚ್ಚಿ ಬೆಂಕಿ ಕಾಸಬೇಕು. ಪಥ್ಯ- ಮೃಷ್ಟಾನ್ನ ಉಣಬೇಕು ಎಲ್ಲ ತರದ ಶೂಲೆಗಳು ಮಾಣ್ಗು.

## ಸರ್ಪ ಕಚ್ಚಿದರೆ

ಆಕಾಶ ಗರುಡ ಅಂದರೆ ಬಡಿಗೇರ ಮನೆಯ ಇಲಣ ಒಂದುಭಾಗ,

ಮೆಣಸು ೧ ಭಾಗ ಇವನ್ನು ಚೂರ್ಣಮಾಡಿ ತುಪ್ಪದಲ್ಲಿ ಕಲಿಸಿ ಗುಳಿಗೆಯು ಮಾಡಿ ಇಟ್ಟುಕೊಂಡು ಸರ್ಪ ಕಚ್ಚಿದರೆ ಎಂಣೆಯಲ್ಲಿ ಕಲಸಿ ಕುಡಿಸಿದರೆ ಮತ್ತು ಕಂಣಿಗೆ ಹಚ್ಚಿದರೆ ಸರ್ಪನವಿಷ ಮಾಣ್ಗು.

## ಗಂಡಸುತನಕ್ಕೆ

ಹಾವು ಮೆಕ್ಕಿ ಹಣ್ಣು ೩ ಇಲ್ಲವೆ ೫ ತಂದು ಆ ಹಂಣಿನ ರಸವ ಹಿಂಡಿಕೊಂಡು ಅಂಗುರದರಸ ಶೇರು ೧ ಮೆಣಸು ೭ ಅಜಿವಾನ ತುಸು ಒಂದ ಹನಿಯುಕ್ಕಿಹಾಲು ಇಷ್ಟನ್ನೂ ಕೂಡಿಸಿ ತಗೊಳ್ಳಲು ಸಂದು ಸಂದಿಗೆ ಇಳಿದು ಶಕ್ತನಾಗುವನು. ಸಪ್ಪಗೆ ಉಂಬುವದು ರಾತ್ರಿ ಮಂಡಿಗೆರಸುವದು ಆ ರಾತ್ರಿ ಮಾಲಗುವದು ಆಸಿ ತೆಗೆವುದು ಇದು ಸತ್ಯವು.

## ಮೂಲವ್ಯಾಧಿಗೆ

ಸೀಸ ದತ್ತೂರಿಬೀಜ, ತುತ್ತಿ, ಕೋಣನಕೋಡು, ೫ವಳು, ಇವೆಲ್ಲವನ್ನು ತೈದು ರಬಟಮಾಡಿ ಹಚ್ಚಬೇಕು.

## ಧಾತು ನೀರು ಆದದ್ದಕ್ಕೆ

ವಿಟ್ಟಲತೊಪ್ಪಲ, ಬೆಲ್ಲವ ಅರೆದು ಗುಳಿಗಮಾಡಿ ಅವುಗಳನ್ನು ಮುಂಜಾನೆ ಸಂಜೆಗೂ ದಿನಾಲು ಎರಡು ಗುಳಿಗೆಯಂತೆ ೭ ದಿನ ತೆಗೆದುಕೊಳ್ಳಬೇಕು. ಸರ್ದಿ ಪದಾರ್ಥ ಉಣ್ಣಬಾರದು.

## ಉಷ್ಣಕ್ಕೆ

ಜಲಮಾರಿತೊಪ್ಪಲವನ್ನು ತುಪ್ಪದಲ್ಲಿ ಅಡಿಗಿಮಾಡಿ, ತೆಗೆದುಕೊಳ್ಳಬೇಕು. ಮೈಯಲ್ಲಿ ಉರುಪು ಇದ್ದರೂ ಶಶಿನದಪ್ಪವಾಗಿದ್ದರೂ ಉಷ್ಣವಾಗಿದ್ದರೂ ಹೋಗುತ್ತದೆ. ಪಥ್ಯ- ಜೋಳದರೊಟ್ಟಿ, ತೊಗರಿಬೇಳೆ, ಸಪ್ಪಗೆ.

## ಸತ್ಯವಿದ್ಯಾರಾಜ
## ೧ನೆಯ ಭಾಗ ಸಮಾಪ್ತವು.

# ನಮ್ಮ ಪ್ರಕಟನೆಯ ಅಮೌಲ್ಯ ಗ್ರಂಥಗಳು

೧. **ಶ್ರೀ ದೇವಿಪುರಾಣ** (೭ನೇ ಆವೃತ್ತಿ) **ಬೆಲೆ: ೪—೦—೦**

ಈ ಗ್ರಂಥದಲ್ಲಿ ಪೂಜಾವಿಧಿ, ಸಂಕ್ಷಿಪ್ತ ದೇವಿಮಹಾತ್ಮೆ, ಕಠಿಣ ಶಬ್ಧಗಳಿಗೆ ಅರ್ಥ, ನವದುರ್ಗಿ ನವರ್ಣಾವಚಕ್ರ, ಇತ್ಯಾದಿ ೫೦ ಸ್ವತಂತ್ರ ವಿಷಯಗಳು ಇವೆ.

೨. **ವೈದ್ಯಶಿಕ್ಷಕ** (೨ನೇ ಆವೃತ್ತಿ) **ಬೆಲೆ: ೨—೦—೦**

ಇದರಲ್ಲಿ ತಲೆಯಿಂದ ಪಾದದ ವರೆಗೆ ಸರ್ವರೋಗಗಳಿಗೆ ಅನುಭವ ಸಿದ್ಧವಾದ ೪೧೮ ಔಷಧಗಳಿವೆ.

೩. **ಗುಪ್ತವಿದ್ಯಾರಹಸ್ಯ** (೫ನೇ ಆವೃತ್ತಿ) **ಬೆಲೆ: ೧-೮-೦**

ಇದು ನಿರುದ್ಯೋಗವನ್ನು ಕಳೆದು ಮಹಾ ಉದ್ಯೋಗರನ್ನಾಗಿ ಮಾರ್ಪಡಿಸುವ ಅಪೂರ್ವ ಗ್ರಂಥವು.

೪. **ಗರ್ಭರತ್ನಾವಳಿ** (೨ನೇ ಆವೃತ್ತಿ) **ಬೆಲೆ: ೧—೮—೦**

ಸ್ತ್ರೀಯರು ಮೈನೆರದು ೩೦ ವರ್ಷಗಳಾಗಿದ್ದರೂ, ಅಂಥವರು ಮಕ್ಕಳನ್ನು ಪಡೆಯುವ ನೂರಾರು ಉಪಾಯಗಳಿವೆ

೫. **ಕಾಮಕಳಾಶಾಸ್ತ್ರ** (೨೦ನೇ ಆವೃತ್ತಿ) **ಬೆಲೆ: ೧—೮—೦**

ಸ್ತ್ರೀ ವಶೀಕರಣ, ಪುರುಷ ವಶೀಕರಣ, ದಂಪತಿಗಳು ಕೂಡುವಿಕೆ, ಮಕ್ಕಳ ಭವಿಷ್ಯ, ಚಂದ್ರಕಲೆಯ ಸ್ಥಾನ ಇತ್ಯಾದಿ ೧೫೦ ವಿಷಯಗಳು ಇವೆ.

೬. **೮೪ ಕಾಮಾಸನಗಳು** (ಅಚ್ಚಿನಲ್ಲಿ) **ಬೆಲೆ: ೨—೦—೦**

ನೀವು ಇದುವರೆಗೂ ಓದದಂಥ ಅಪೂರ್ವ ಗ್ರಂಥವಿದು. ಇದನ್ನು ವರ್ಣಿಸಲಸಾಧ್ಯವು


ಪ್ರಕಾಶಕರು:

## ಸದಾನಂದ ಎಸ್. ಸಾಲಿಮಠ

**ಗದಗ-ಸಿಟಿ**